ಶ್ರೀ

ಫಲ ಜ್ಯೋತಿಷ್ಯ ಜ್ಯೋತಿರ್ಮಾಲಾ ನಕ್ಷತ್ರ : ೦೭

# ಪರಿಹಾರ ಜ್ಯೋತಿಷ್ಯ



ಲೇಖಕರು :

**ಶ್ರೀ ಎನ್. ಕೆ. ಜೋಗಳೇಕರ**

ಧಾರವಾಡ



ಪ್ರಕಾಶಕರು :

**ಶ್ರೀ ಎನ್. ಕೆ. ಜೋಗಳೇಕರ**

ಸಿ-೭೨ ತೇಜಸ್ವಿನಗರ, ಕಲಘಟಗಿ ರೋಡ, ಧಾರವಾಡ-೨
೫೮೦ ೦೦೨

[ಬೆಲೆ : ನಲವತ್ತು ರೂಪಾಯಿಗಳು]

ಪ್ರಕಾಶಕರು :

**ಶ್ರೀ ಎನ್, ಕೆ. ಜೋಗಳೇಕರ**

೩-೭೨, ತೇಜಸ್ವಿನಗರ
ಕಲಘಟಗಿ ರಸ್ತೆ ಧಾರವಾಡ-೨
೫೮೦ ೦೦೨

ದೂರವಾಣಿ ಸಂಖ್ಯೆ : ೪೨೭೮೮

ಪ್ರಥಮ ಮುದ್ರಣ : ೧೯೯೫



**ಬೆಲೆ ೪೦/ರೂಪಾಯಿಗಳು**

ಮುದ್ರಕರು :
**ಶ್ರೀ ಅನಂತರಾವ ಮ. ನಾರಾಯಣಪೇಟೆ**
ಸರಸ ಪ್ರಿಂಟಿಂಗ್ ಪ್ರೆಸ್ © 45077
೭೪ ತೇಜಸ್ವಿನಗರ ಕಲಘಟಗಿ ರಸ್ತೆ,
ಧಾರವಾಡ-೫೮೦ ೦೦೨

## ❋ ಅರ್ಪಣೆ ❋

ನನ್ನ ಆತ್ಮೀಯ ಮಿತ್ರರು ಉದ್ದಿಮೆದಾರರು

ಉತ್ಸಾಹಿ ಯುವಕರು ಹೃದಯ ಸಿರಿವಂತರು

ಅನ್ವರ್ಥನಾಮಧೇಯರು

ಅಶೋಕ ಫೌಂಡ್ರಿಯ ಮಾಲಕರೂ ಆದ

**ಶ್ರೀ ಅಶೋಕ ಗುರುನಾಥಸಾ ದಾನಿ**

ಇವರಿಗೆ

ಈ ನನ್ನ ಹದಿನೇಳನೆಯ ಕೃತಿ

**"ಪರಿಹಾರ ಜ್ಯೋತಿಷ್ಯ"**

ಸಪ್ರೇಮದಿಂದ ಅರ್ಪಿಸಿದ್ದೇನೆ

ಶ್ರೀ ಎನ್. ಕೆ. ಜೋಗಳೇಕರ

# ಪರಿವಿಡಿ

# ಆತ್ಮ ನಿವೇದನೆ

"ಪರಿಹಾರ ಜ್ಯೋತಿಷ್ಯ" ಒಂದು ಅತ್ಯಂತ ಮಹತ್ವದ ಕೃತಿ. ಜ್ಯೋತಿಷ್ಯಶಾಸ್ತ್ರಕ್ಕೆ ಇದೊಂದು ಅತಿ ವಿಶಿಷ್ಠವಾದ ಹಾಗೂ ಅತ್ಯಂತ ವಿನೂತನವಾದ ಕೊಡುಗೆಯೂ ಹೌದು. ಅತ್ಯಂತ ಪ್ರಾಚೀನವಾದ ಜ್ಯೋತಿಷ್ಯ ಶಾಸ್ತ್ರಕ್ಕೆ ಒಂದು ಹೊಸ ತಿರುವನ್ನು ಹೊಸ ಆಯಾಮವನ್ನು ಕೊಡುವ ಉದ್ದೇಶ ಈ ಕೃತಿಯಲ್ಲಿದೆ. ಜ್ಯೋತಿಷ್ಯ ಶಾಸ್ತ್ರದಲ್ಲಿ ವಿಸ್ತೃತ ಸಂಶೋಧನೆಯ ಫಲವಾಗಿ, ಆಧುನಿಕ ಬೆಳವಣಿಗೆಗೆ ಅನುಗುಣವಾಗಿ ಪ್ರಚಲಿತ ಆಹ್ವಾನಗಳ ಸವಾಲನ್ನು ಎದುರಿಸುವ ಶಕ್ತಿಯನ್ನು ಮಾನವನಿಗೆ ಕೊಡಿಸುವಲ್ಲಿ ಜ್ಯೋತಿಷ್ಯಶಾಸ್ತ್ರ ಅನುವಾಗಬೇಕೆಂಬ ಹೊಸ ದೃಷ್ಟಿ ತಾಳಿ ಈ ಕೃತಿಯನ್ನು ರಚಿಸಲಾಗಿದೆ. ಇದು ಒಂದು ಹೊಸ ಪ್ರಯೋಗವೇ ಆಗಿದೆ.

"ಪರಿಹಾರ-ಜ್ಯೋತಿಷ್ಯ"ವು ಪ್ರಪ್ರಥಮವಾಗಿ ಜ್ಯೋತಿಷ್ಯಶಾಸ್ತ್ರದ ಹೊಸ ಅಂಗಗಳಾದ ಮುಂಜಾಗ್ರತೆ, ಪರಿಹಾರಗಳ ಪ್ರಯೋಗದ ಒಂದು ವಿಶೇಷ ವಿನೂತನ ಕೃತಿಯಾಗಿದೆ. ಈ ಕೃತಿಯು ಜೀವನದಲ್ಲಿ ಬರುವ ಸಮಸ್ಯೆಗಳನ್ನು ಹೇಗೆ ಎದುರಿಸಬೇಕೆಂಬ ಬಗೆಗೆ ದಿಕ್ಸೂಚಿಯಾಗಿದೆ. ಮಾನವನ ವಿವಿಧ ಸಮಸ್ಯೆಗಳಾದ ಆರೋಗ್ಯದಿಂದ ಸಾಮಾಜಿಕ ಸಾಂಸ್ಕೃತಿಕ ರಾಜಕೀಯ ವಿಷಯಗಳವರೆಗೆ ಹತ್ತಾರು ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಅನುಸರಿಸಬೇಕಾದ ಮಾರ್ಗಗಳನ್ನು ಇಲ್ಲಿ ಸೂಚಿಸಲಾಗಿದೆ. ಹೀಗಾಗಿ ಆರೋಗ್ಯ, ಆರ್ಥಿಕ, ಶಿಕ್ಷಣ, ಗೃಹಸೌಖ್ಯ, ವೃತ್ತಿ, ಕೌಟುಂಬಿಕ ಸಂಬಂಧ, ತಂದೆತಾಯಿ–ಮಕ್ಕಳ ಸಂಬಂಧ, ಶತ್ರು–ಮಿತ್ರ ಸಂಬಂಧ, ಸಹೋದರ ಸಹೋದರಿಯರ, ಸಂಬಂಧ ರಾಜಕೀಯ ಸಮಸ್ಯೆ, ಇವೆಲ್ಲವುಗಳ ಪರಿಹಾರ ದೃಕ್‌ಪಥ ಇಲ್ಲಿ ತೆರವು ಮಾಡಿ ಕೊಡಲಾಗಿದೆ ಮೇಲ್ಕಾಣಿಸಿದ ಸಮಸ್ಯೆಗಳಿಗೆ ಪರಿಹಾರವಲ್ಲದೆ ಜ್ಯೋತಿಷ್ಯ ಶಾಸ್ತ್ರದ ವೈಜ್ಞಾನಿಕ ವಿಶ್ಲೇಷಣೆಯನ್ನು ಕೊಡುವ ಕಾರ್ಯ ಇಲ್ಲಿ ಮಾಡಲಾಗಿದೆ. ಗ್ರಹಗಳ ಪರಿಣಾಮ ಹೇಗೆ. ಏತಕ್ಕಾಗಿ ಹಾಗೂ ಆ ಪರಿಣಾಮಗಳ ಪರಿಹಾರವೇನು ಎಂಬುದರ ಬಗ್ಗೆ ವಿವರಣೆ ಇಲ್ಲಿ ಅಡಕವಾಗಿದೆ. ಯಾವ ಯಾವ ಸಮಸ್ಯೆಗಳಿಗೆ ಯಾವ ಯಾವ ಉಪಾಸನೆ ಮಾಡಬೇಕೆಂಬುದರ ವಿವರವೂ ಇದೆ.

ಹೀಗಾಗಿ ಈ ಕೃತಿಯು ಶಾಸ್ತ್ರವಿಶ್ಲೇಷಣೆಯ ದೃಷ್ಟಿಯಿಂದಷ್ಟೇ ಅಲ್ಲ ಶ್ರೀ ಸಾಮಾನ್ಯನ ಪರಿಹಾರಗಳ ದೃಷ್ಟಿಯಿಂದಲೂ ಕೂಡ ಅತಿ ಮಹತ್ವದ ಕೃತಿಯಾಗಿದೆ. ಈ ವರೆಗೂ ಜ್ಯೋತಿಷ್ಯಶಾಸ್ತ್ರ ಕ್ಷೇತ್ರದಲ್ಲೇ ನಡೆಸಲಾರದ ಪ್ರಯೋಗ 'ಪರಿಹಾರ ಜ್ಯೋತಿಷ್ಯ'ದಲ್ಲಿ ಮಾಡಲಾಗಿದೆ ಎಂಬ ಆತ್ಮ ಸಂತೋಷ ನನ್ನದಾಗಿದೆ. ಈ ಕೃತಿಯನ್ನು ಓದಿ ಅರಗಿಸಿಕೊಂಡು ಆಚರಣೆಗೆ ತಂದರೆ ನನ್ನ ಶ್ರಮ ಸಾರ್ಥಕವಾಗುವುದಲ್ಲದೆ ಶ್ರೀ ಸಾಮಾನ್ಯರ ಸಮಸ್ಯೆಗಳ ಪರಿಹಾರದ ದೃಷ್ಟಿಯಿಂದ ಜ್ಯೋತಿಷ್ಯಶಾಸ್ತ್ರ ಅವರ ಮಾರ್ಗದರ್ಶಕ ಉಪಕರಣವಾಗಿಸುವಲ್ಲಿ ಪ್ರಥಮ ಯಶಸ್ಸು ಸಾಧಿಸಿದಂತಾಗುತ್ತದೆ.

ಇದರಲ್ಲಿ ಸೂಚಿಸಿದ ಪರಿಹಾರದ ಸೂತ್ರಗಳು ಕಳೆದ ನಾಲ್ವತ್ತು ವರ್ಷಗಳ ನನ್ನ ವೃತ್ತಿ ಜೀವನದ ಅನುಭವಗಳನ್ನಾಧರಿಸಿ ಬರೆಯಲಾಗಿದೆ. ನಮ್ಮ ವೃತ್ತಿ ಬಾಂಧವರು ತಮ್ಮ ಅನುಭವದ ಮೇರೆಗೆ ತಾವು ಸೂಚಿಸಿದ ಪರಿಹಾರ ಸೂತ್ರಗಳನ್ನು ತಿಳಿಸಿದಲ್ಲಿ ಅವುಗಳನ್ನು ಮುಂದಿನ ಆವೃತ್ತಿಯಲ್ಲಿ ಅಳವಡಿಸಲು ಪ್ರಯತ್ನಿಸಲಾಗುವುದು. ಪರಿಹಾರ ಜ್ಯೋತಿಷ್ಯ ಹಾಗೂ 'ಪ್ರಶ್ನೋತ್ತರ ಜ್ಯೋತಿಷ್ಯ' ಎಂಬ ಎರಡು ಗ್ರಂಥಗಳನ್ನು ಪ್ರಕಟಿಸಬೇಕೆಂಬ ಸಂಕಲ್ಪವಿತ್ತು. ಆದರೆ ಅನಾರೋಗ್ಯದ ಕಾರಣ ಪ್ರಶ್ನೋತ್ತರ ಜ್ಯೋತಿಷ್ಯ ಪುಸ್ತಕದ ಪ್ರಕಟನೆಯಲ್ಲಿ ವಿಲಂಬವಾಗಲಿದೆ. ಇದಲ್ಲದೆ ನಾನು ಬರೆದು ಪ್ರಕಟಿಸಬೇಕೆಂಬ ಪುಸ್ತಕದ ಪಟ್ಟಿಯು ಕೂಡ ದೊಡ್ಡದಿದೆ. ಉದಾ : ಪ್ರಶ್ನೋತ್ತರ ಜ್ಯೋತಿಷ್ಯ, ಗ್ರಹಯೋಗ, ಗ್ರಹ ದರ್ಶನ ಶರೀರಲಕ್ಷಣ ಜ್ಯೋತಿಷ್ಯ, ದಶಾದರ್ಪಣ ಇತ್ಯಾದಿ ಈ ಕೃತಿಗಳನ್ನು ಪ್ರಕಟಿಸಿ ವೃತ್ತಿಯಿಂದ ನಿವೃತ್ತನಾಗಬಯಸುತ್ತೇನೆ.

ಸಾಮಾನ್ಯವಾಗಿ ಒಂದು ಗ್ರಂಥವನ್ನು ಬರೆದು ಪ್ರಕಟಿಸಲು ನನಗೆ ಒಂದುವರ್ಷದ ಸಮಯವು ಬೇಕಾಗುತ್ತದೆ. ಆದರೆ ಈ ಗ್ರಂಥವನ್ನು ಕೇವಲ ಮೂರು ತಿಂಗಳ ಅವಧಿಯಲ್ಲಿ ಬರೆದು ಪ್ರಕಟಿಸಲು ಸಾಧ್ಯವಾದದ್ದು ಹೆಮ್ಮೆಯ ವಿಷಯ. ಈ ಪುಸ್ತಕದ ಬಿಡುಗಡೆಯನ್ನು ನನ್ನ ಆತ್ಮೀಯ ಸ್ನೇಹಿತರಾದ ಶ್ರೀ ಕೆ. ಎಸ್. ಶರ್ಮಾ ಇವರ ಷಷ್ಠ್ಯಬ್ದಿಪೂರ್ತಿ ಸಮಾರಂಭದೊಡನೆ ನೆರವೇರಿಸಬೇಕೆಂಬುದು ನನ್ನ ಬಯಕೆಯಾಗಿತ್ತು. ಆದರೆ ಅತಿ ಕಡಿಮೆ ಸಮಯದಲ್ಲಿ ಈ ಶಾಸ್ತ್ರೀಯ ಗ್ರಂಥವನ್ನು ಬರೆಯುವುದು ಹೇಗೆ ಸಾಧ್ಯ ?

ಆದರೆ ಮಹಾಗಣಪತಿಯ ಕೃಪೆಯಿಂದ ಇದು ಸಾಧ್ಯವಾಯಿತು. ಇಷ್ಟು ಕಡಿಮೆ ಅವಧಿಯಲ್ಲಿ ಬರೆದರೂ ಶಾಸ್ತ್ರೀಯ ವಿವರಣೆಗಾಗಲಿ, ಪ್ರತಿಪಾದಿಸಬೇಕಾದ ವಿಷಯಕ್ಕಾಗಲಿ ಯಾವ ಚ್ಯುತಿಯೂ ಬಂದಿಲ್ಲವೆಂಬುದು ಸಂತೋಷದ ಸಂಗತಿ. ಆದರೆ ವಾಕ್ಯರಚನೆ, ಶಬ್ದಪ್ರಯೋಗ, ವ್ಯಾಕರಣ ದೋಷ, ಮುದ್ರಣ ದೋಷ. ಅಲ್ಲಲ್ಲಿ ಕಂಡುಬರುತ್ತವೆ. ಇದಕ್ಕೆ ಕಾರಣ ಬರೆಯುವುದು, ಕರಡುಪ್ರತಿ ತಯಾರಿಸುವುದು ಮುದ್ರಣಕ್ಕೆ ಕಳುಹಿಸುವುದು ಕರಡುಮುದ್ರಿತ ಪ್ರತಿಯನ್ನು ತಿದ್ದುವುದು ಮುಂತಾದ ಎಲ್ಲ ಕೆಲಸಗಳನ್ನು ಏಕ ಕಾಲದಲ್ಲಿ ನಡೆದುದರಿಂದ ಮೇಲ್ಕಾಣಿಸಿದ ದೋಷಗಳು ಕಂಡು ಬರುತ್ತವೆ. ಸಹೃದಯ ವಾಚಕರು ಹಂಸಕ್ಷೀರ ನ್ಯಾಯದಂತೆ ದೋಷವನ್ನೆಣಿಸದೆ ವಿಷಯ ವಿವೇಚನೆಯನ್ನು ಗ್ರಹಿಸಬೇಕೆಂದು ಪ್ರಾರ್ಥನೆ

ಈ ಪುಸ್ತಕವನ್ನು ಬರೆಯಲು ನೆರವಾದ ವ್ಯಕ್ತಿಗಳ ಹೆಸರನ್ನು ಬರೆಯುತ್ತಾ ಹೋದರೆ ಅದೊಂದು ದೊಡ್ಡ ಪಟ್ಟಿಯೇ ಆಗಬಹುದು ಪ್ರತ್ಯಕ್ಷ ಹಾಗೂ ಅಪ್ರತ್ಯಕ್ಷವಾಗಿ ಸಹಾಯ ಮಾಡಿದ ಎಲ್ಲರಿಗೆ ನಾನು ಋಣಿ ಆದರೂ ಕೆಲವರ ಹೆಸರನ್ನಾದರೂ ಉಲ್ಲೇಖಿಸುವುದು ಅನುಚಿತ ವಾಗಲಾರದು. ಆತ್ಮೀಯ ಸ್ನೇಹಿತರಾದ ಪ್ರೊ. ಕೆ. ಎಸ್. ಶರ್ಮಾ, ಪ್ರೊ. ಜಿ. ವಿ. ಕುಲಕರ್ಣಿ, ಮಹಾವೀರ ಪಾಂಡೆ, ಜಿ. ಚಂದ್ರಶೇಖರ ಶಹಾಜಿ ಸಿಂಧೆ ಇವರ ಸಹಾಯ ಸಹಕಾರಗಳನ್ನು ಮರೆಯಲಾರೆ. ಅದರಂತೆ ನನ್ನ ಬರವಣಿಗೆಗೆ ಮೊದಲಿನಿಂದ ಪ್ರೋತ್ಸಾಹ ನೀಡುತ್ತ ಬಂದಿರುವ ಎಸ್. ವ್ಹಿ. ಪಾಟೀಲ. ಸಾಹಿತಿ ಎಸ್. ಕೆ. ಕುಲಕರ್ಣಿ. ಸುರೇಂದ್ರದಾನಿ ಸುಬ್ಬರಾವ ದೇಶಪಾಂಡೆ ಮತ್ತಿಹಳ್ಳಿ ನಾಗರಾಜರಾವ. ಹಿಂದೂ ಪತ್ರಿಕೆಯ ಪ್ರತಿನಿಧಿ ಮದನಮೋಹನ. ಸಿ. ಜಿ. ಹೊನ್ನಾಪುರ ಮಠ ನಿವೃತ್ತ ನ್ಯಾಯಾಧೀಶರಾದ ಎಸ್. ಬಿ. ಪಾಟೀಲ. ಪ್ರೊ. ರಾಜಶೇಖರಯ್ಯ. ಪ್ರೊ. ಕೆ. ರಾಘವೇಂದ್ರರಾವ ಅವರ ಸಹಾಯವು ಚಿರಸ್ಮರಣೀಯ. ಅದರಂತೆ ಅಣ್ಣ–ಅತ್ತಿಗೆಯವರಂತೆ ನನ್ನ ಯೋಗಕ್ಷೇಮವನ್ನು ಸದಾ ನೋಡಿಕೊಳ್ಳುತ್ತಿರುವ ಬಿಷ್ಟಗೌಡ ದಂಪತಿ

ಗಳು ಗುತ್ತಲ ದಂಪತಿಗಳು. ಕನವಳ್ಳಿ ದಂಪತಿಗಳು, ಬರಗೆ ದಂಪತಿಗಳು, ಜಿ. ಆರ್. ಮುಖಿಲಗೋಳ ದಂಪತಿಗಳ ಸಹಾಯವನ್ನು ಎಷ್ಟು ನೆನೆದರೂ ಕಡಿಮೆಯೆ. ಹಾಗೆಯೇ ಕರಡು ಪ್ರತಿಯನ್ನು ತಯಾರಿಸುವಾಗ ಅಮೂಲ್ಯ ಸಲಹೆ ಸೂಚನೆಯನ್ನಿತ್ತ ಮಾರ್ತಾಂಡರಾವ ವರಗಿ, ಆರ್. ಬಿ. ಕುಲಕರ್ಣಿ ಎ. ಕೆ. ಹೊಳಿಕಟ್ಟಿ, ಕೆ. ಜಿ. ನಾವಗೇರ. ಹಾಗೂ ಹೋಟೆಲ ಉದ್ಯಮಿ ಕೆ ಹರಿದಾಸಭಟ್ಟ ಇವರೆಲ್ಲರ ಸಹಾಯವನ್ನು ಹೃತ್ಪೂರ್ವಕವಾಗಿ ಸ್ಮರಿಸುತ್ತೇನೆ. ನನ್ನ ಕಿರಿಯ ಮಿತ್ರರಾದ ನಾಗರಾಜಸಿಂಗ ಠಾಕೂರ ಹಣಮಂತಪ್ಪಾ ಭೋಸಲೆ. ಗಣಪತಿ ತೋಡಕರ, ಬೆರಳಚ್ಚುಗಾರ ಚಿದ್ಮಲಗಿ, ಶಿವಯೋಗಿ, ಎ. ಪಿ. ಭುಜಂಗ, ಹಾಗೂ ನನ್ನ ಸಹೋದರ-ಸಹೋದರಿಯರ ಸಹಾಯ ಸಹಕಾರಗಳನ್ನು ನೆನೆಯುತ್ತೇನೆ.

ಈ ಹೊತ್ತಿಗೆಗೆ ಅಂದವಾದ ಮುಖಚಿತ್ರವನ್ನು ತಯಾರಿಸಿಕೊಟ್ಟ ಸುಪ್ರಸಿದ್ಧ ಕಲಾವಿದ ಶ್ರೀ ಎನ್. ಸಿ. ದೇಸಾಯಿ ಇವರಿಗೆ ಹಾಗೂ ಅವರ ಪಡಿಯಚ್ಚನ್ನು ತಯಾರಿಸಿದವರೂ ಮತ್ತು ಈ ಹೊತ್ತಿಗೆಯನ್ನು ಅಂದದಾಗಿ ಹಾಗೂ ವೇಳೆಗೆ ಸರಿಯಾಗಿ ಮುದ್ರಿಸಿಕೊಟ್ಟ ನಾರಾಯಣಪೇಟೆ ಬಂಧುಗಳಿಗೂ ನಾನು ಉಪಕೃತನಾಗಿದ್ದೇನೆ. ಈ ಪುಸ್ತಕವನ್ನು ತಮಗೆ ಅರ್ಪಿಸಲು ಅನುಮತಿ ಕೊಟ್ಟುದ್ದಕ್ಕೆ ಉದ್ಯೋಗಪತಿ ಅಶೋಕ ಗುರುನಾಥಸಾ ದಾನಿಯವರನ್ನು ತುಂಬು ಹೃದಯದಿಂದ ಸ್ಮರಿಸುತ್ತೇನೆ. ಕನ್ನಡದ ಸಹೃದಯ ವಾಚಕರು ನನ್ನ ಉಳಿದ ಕೃತಿಗಳಂತೆ ಈ ಗ್ರಂಥವನ್ನೂ ಕೂಡ ಆತ್ಮೀಯವಾಗಿ ಬರಮಾಡಿಕೊಳ್ಳುವರೆಂದು ನಂಬಿರುವೆ.

ಇಂತಿ ತಮ್ಮ ವಿಶ್ವಾಸಿ

ತಾ॥ 10-3-1995

**ಎನ್. ಕೆ. ಜೋಗಳೇಕರ**

ತೇಜಸ್ವೀನಗರ, ಧಾರವಾಡ



॥ ಶ್ರೀ ॥

# ಪರಿಹಾರ ಜ್ಯೋತಿಷ್ಯ



## ವಿಷಯ ಪ್ರವೇಶ

ಜ್ಯೋತಿಷ್ಯ ಶಾಸ್ತ್ರವು ಬಹು ಮುಖವಾದ ಶಾಸ್ತ್ರವಿರುತ್ತದೆ. ಒಂದು ಹೊಸ ದೃಷ್ಟಿ, ವೈಜ್ಞಾನಿಕ ಪ್ರಗತಿಯನ್ನನುಸರಿಸಿ ಈ ಪ್ರಾಚೀನ ಶಾಸ್ತ್ರಕ್ಕೆ ಹೊಸ ಹೊಸ ಆಯಾಮಗಳನ್ನು ಕಂಡುಹಿಡಿಯುವುದರೊಡನೆ ಈ ಮಹಾನ್ ಶಾಸ್ತ್ರದಲ್ಲಿ ಹೊಸ ಹೊಸ ಸಂಶೋಧನೆಗಳನ್ನು ಮಾಡುತ್ತಾ ಇದರ ಹೊಸ ಮುಖಗಳ ಆವಿರ್ಭಾವಕ್ಕೆ ಪರಿಶ್ರಮಿಸಬೇಕಾಗುತ್ತದೆ. ಆಧುನಿಕ ಯುಗದಲ್ಲಿ ಎಲ್ಲೆ ಮೀರಿದ ಒತ್ತಡಗಳಿಗೆ ಸಿಲುಕಿದ ಮಾನವನಿಗೆ ತಾನು ನಡೆಯಬೇಕಾದ ಮಾರ್ಗವೇ ಒಂದು ಬಿಡಿಸಲಾರದ ಸಮಸ್ಯೆಯಾಗಿರುತ್ತದೆ. ಹೆಚ್ಚು ಹೆಚ್ಚಾಗಿ ಸಂಕೀರ್ಣಗೊಳ್ಳುತ್ತಿರುವ ಈ ಜಗತ್ತಿನಲ್ಲಿ ಹಾಗೂ ಹೆಚ್ಚುತ್ತಿರುವ ಈ ಸ್ಪರ್ಧಾತ್ಮಕ ಯುಗದಲ್ಲಿ ಪ್ರತಿ ವ್ಯಕ್ತಿಯು ತನ್ನದೇ ಆದ ಮಾರ್ಗವನ್ನು ಆಯ್ದುಕೊಳ್ಳಲು ಮಾರ್ಗದರ್ಶನವನ್ನು ಅಪೇಕ್ಷಿಸುತ್ತಾನೆ ಆದರೆ ಎಲ್ಲೆಡೆ ಕತ್ತಲೆಯಿದ್ದಾಗ ಆ ಕತ್ತಲೆಯಲ್ಲಿಯೂ ಮುನ್ನಡೆಯಲು ಅವನಿಗೆ ಯೋಗ್ಯವಾದ ಬೆಳಕಿನ ಅವಶ್ಯಕತೆ ಇದೆ ಈ ಬೆಳಕು ಬಾಹ್ಯ ಬೆಳಕಾಗದೆ ಅಂತರ್ಜ್ಯೋತಿಯಾಗ ಬೇಕಾಗುತ್ತದೆ. ಈ ಅಂತರ್ಜ್ಯೋತಿಯು ಮಾರ್ಗದರ್ಶನದಲ್ಲಿ ಮನೋಧೈರ್ಯದಿಂದ ಹಾಗೂ ಮನೋಸ್ಥೈರ್ಯದಿಂದ ಮಾನವ ಮುನ್ನಡೆಯು ಬೇಕಾಗುತ್ತದೆ. ಅನೇಕ ಸಲ ಪಾಶ್ಚಿಮಾತ್ಯ ಶಾಸ್ತ್ರಗಳು ಈ

ದಿಶೆಯಲ್ಲಿ ಒಂದು ದೊಡ್ಡ ಕೊರತೆಯನ್ನು ಎದುರಿಸುತ್ತವೆ ಎಂದರೆ ಅದು ತಪ್ಪಲ್ಲ. ಮನಶಾಸ್ತ್ರವು ಕೂಡ ಈ ದಿಕ್ಕಿನಲ್ಲಿ ಇನ್ನೂ ಬಹಳಷ್ಟು ಪ್ರಗತಿ–ಯನ್ನು ಸಾಧಿಸಬೇಕಾಗಿದೆ. ಏಕೆಂದರೆ ಮನಶಾಸ್ತ್ರವೂ ಕೂಡ ಒಂದು ಬೆಳೆಯುತ್ತಿರುವ ಶಾಸ್ತ್ರವಾಗಿದೆ. ಮನುಷ್ಯನಂತಹ ಕ್ಲಿಷ್ಟ ಹಾಗೂ ಸಂಕೀರ್ಣ ಪ್ರಾಣಿಯ ಅತೀ ಚಂಚಲವಾದ ಮನಸ್ಸನ್ನು ಆಧರಿಸಿ ಅದರಗುಣಾವಗುಣಗಳ ಅಧ್ಯಯನದ ಆಧಾರದ ಮೇಲೆ ಬೆಳೆಯುತ್ತಿರುವ ಶಾಸ್ತ್ರವಿರುತ್ತದೆ. ಅಂತೆಯೇ ಭಾರತೀಯ ಶಾಸ್ತ್ರಗಳಲ್ಲಿ ಅತ್ಯಂತ ಪ್ರಾಚೀನ ಶಾಸ್ತ್ರವಾದ ಜ್ಯೋತಿಷ್ಯ ಶಾಸ್ತ್ರವನ್ನು ನಾವು ಇತ್ತೀಚಿನ ಆಧುನಿಕ ಬೆಳವಣಿಗೆಗಳಿಗೆ ಪ್ರಸ್ತುತವಾಗುವಂತೆ ಸಂಶೋಧನಾತ್ಮಕ ಪಥದಲ್ಲಿ ಪ್ರಯೋಗಗೊಳಿಸಿ ಇದನ್ನು ಪ್ರಚಲಿತ ಆಹ್ವಾನಗಳ ಸವಾಲನ್ನು ಎದುರಿಸುವ ಶಕ್ತಿಯನ್ನು ಮಾನವನಿಗೆ ಕೊಡಿಸುವುದರಲ್ಲಿ ಯಶಸ್ಸುಗೊಳಿಸುವಂತೆ ಮಾಡುವ ಕೆಲಸವೀಗ ಅವಶ್ಯಕವೂ ಅನಿವಾರ್ಯವೂ ಆಗಿದೆ. ಈ ಹೊಸ ಆಯಾಮ ಹೊಸಮುಖಿ ಹೊಸ ದೃಷ್ಟಿಕೋನ ತಾಳಿ ಇಟ್ಟ ಮಹತ್ವದ ಹೆಜ್ಜೆಯ ಫಲವೇ **"ಪರಿಹಾರ ಜ್ಯೋತಿಷ್ಯ"**

ಪರಂಪರಾನುಗತವಾಗಿ ಫಲಜ್ಯೋತಿಷಿಗಳು ಈ ಶಾಸ್ತ್ರವನ್ನು ಕೇವಲ ಭವಿಷ್ಯವನ್ನು ನುಡಿಸುವ ಒಂದು ಉಪಕರಣವಾಗಿ ಬಳಸುತ್ತಾ ಬಂದಿದ್ದಾರೆ. ಇದರಿಂದ ಎಷ್ಟೋ ಸಲ ಯಾರ ಭವಿಷ್ಯವನ್ನು ನುಡಿಯಲಾಗುತ್ತಿದಿಯೋ ಆತನಿಗೆ ಮಾನಸಿಕವಾಗಿ ಅಪಾಯ ಆಘಾತವೂ ಆಗುವ ಸನ್ನಿವೇಶಗಳಿರುತ್ತದೆ ಆ ಜಾತಕನಿಗೆ ತನಗೆ ಮುಂದೆ ನಡೆಯಬಹುದಾದ ಜರುಗಬಹುದಾದ ಘಟನೆಗಳ ತಿಳುವಳಿಕೆಯಿಂದ ಆಘಾತಗೊಳ್ಳುವ ಸಾಧ್ಯತೆಗಳನ್ನು ಮನಗೊಂಡಾಗ ಆತನನ್ನು ಆ ಅಘಾತದಿಂದ ಮಾನಸಿಕವಾಗಿ ಪಾರು ಮಾಡುವ ಜ್ಯೋತಿಷ್ಯ ಶಾಸ್ತ್ರವು ತೋರುವ ಅವಶ್ಯಕತೆ ಈಗ ಹೆಚ್ಚಾಗಿದೆ.

ಅನೇಕ ಸಂಬಂಧದಲ್ಲಿ ಜ್ಯೋತಿಷಿಯು ಮನೋವೈಜ್ಞಾನಿಯ ಪಾತ್ರವನ್ನು ವಹಿಸಿ ಆ ಜಾತಕನ ಮನೋಸ್ವಾಸ್ಥ್ಯವನ್ನು ಕಳೆದುಕೊಳ್ಳದಂತೆ ಮಾರ್ಗೋಪಾಯಗಳನ್ನು ಸೂಚಿಸುವ ಅವಶ್ಯಕತೆಯೂ ಉದ್ಭವಿಸುತ್ತದೆ. ಇದಕ್ಕೆ ಜ್ಯೋತಿಷ್ಯಶಾಸ್ತ್ರವು ಹೊಸ ಹೊಸ ಅಂಗಗಳನ್ನು ರೂಪಿಸಿಕೊಳ್ಳಬೇಕಾಗು

ತ್ತದೆ. ಅಂತೆಯೇ ಜ್ಯೋತಿಷ್ಯ ಶಾಸ್ತ್ರಕ್ಕೆ ಹೊಸ ಹೊಸ ಆಯಾಮಗಳನ್ನು ರೂಪಿಸುವ ಅನ್ವೇಷಣೆಯಲ್ಲಿ "**ಪರಿಹಾರ ಜ್ಯೋತಿಷ್ಯ**"ವು ಒಂದು ಹೊಸ ಪ್ರಯೋಗವೇ ಆಗಿದೆ.

ಈ ನವ್ಯ ದೃಷ್ಟಿಯಿಂದ ಜ್ಯೋತಿಷ್ಯ ಶಾಸ್ತ್ರವನ್ನು ನಾಲ್ಕು ಪ್ರಮುಖ ಅಂಗಗಳಾಗಿ ವಿಭಜಿಸಿ ಈ ಶಾಸ್ತ್ರದಲ್ಲಿ ಹೊಸ ಸಂಶೋಧನೆ ಹೊಸ ಅನ್ವೇಷಣೆಗೆ ಮಾರ್ಗ ಮಾಡಿಕೊಡುವ ಹೊತ್ತ ಹೊಸ ಪ್ರಯೋಗವನ್ನು ಇಲ್ಲಿ ಕೈಕೊಳ್ಳಲಾಗಿದೆ. ಸಾಮಾನ್ಯವಾಗಿ ಜ್ಯೋತಿಷ್ಯ ಶಾಸ್ತ್ರವೆಂದಾಗ ಭವಿಷ್ಯವನ್ನು ಪ್ರತಿಪಾದಿಸುವ ಶಾಸ್ತ್ರವೆಂಬಪ್ರತೀತವಿದೆ. ಇದು ಜ್ಯೋತಿಷ್ಯ ಶಾಸ್ತ್ರದ ಒಂದು ಪ್ರಮುಖ ಅಂಗವೆಂಬುದರ ಬಗೆಗೆ ಯಾವ ಸಂಶಯವೂ ಇಲ್ಲ. ಆದರೆ ಈ ಮಹತ್ವದ ಅಂಗಕ್ಕೆ ಇನ್ನೂ ಮೂರು ಅಂಗಗಳಲ್ಲಿ ಸಂಶೋಧನೆಯನ್ನು ಮಾಡುವ ಮೂಲಕ ಮನುಷ್ಯನ ಉತ್ತಮ ಪ್ರಗತಿಗೆ ಹಾಗೂ ನೆಮ್ಮದಿಗೆ ದಿಕ್‌ಸೂಚಿಯಾಗುವಂತೆ ಈ ಶಾಸ್ತ್ರವನ್ನು ಬೆಳೆಸುವುದು ಆಧುನಿಕ ಯುಗದ ಒಂದು ಅನಿವಾರ್ಯತೆಯಾಗಿದೆ ಎಂಬುದೊಂದು ಕಾರಣದಿಂದ ಈ ಹೊಸ ಅಂಗಗಳ ಪ್ರತಿಪಾದನೆಯನ್ನು ಈ ಕೃತಿಯ ಮೂಲಕ ಮಾಡಲಾಗಿದೆ.

ಜ್ಯೋತಿಷ್ಯಶಾಸ್ತ್ರವನ್ನು ನಾಲ್ಕು ಅಂಗಗಳಲ್ಲಿ ಅಧ್ಯಯನ ಮಾಡಿ ಪ್ರಯೋಗ ಹಾಗೂ ಸಂಶೋಧನೆ ನಡೆಸಬೇಕಾಗಿದೆ. ಈ ನಾಲ್ಕು ಅಂಗಗಳೆಂದರೆ 1) ಭವಿಷ್ಯಕಥನ (Prediction) 2) ಮುಂಜಾಗ್ರತೆ (Precaution) 3) ಪರಿಹಾರ (Solution) 4) ಸಾಂತ್ವನ (Consolation) ಹೀಗೆ ಜ್ಯೋತಿಷ್ಯ ವೃತ್ತಿಯನ್ನು ಕೈಕೊಳ್ಳುವವರು ಮೇಲೆ ಬರೆದ ನಾಲ್ಕು ಅಂಗಗಳಲ್ಲಿ ತಜ್ಞತೆ ಪಡೆದರೆ ಮಾತ್ರ ವೃತ್ತಿಯಲ್ಲಿ ಯಶ ಸಂಪಾದಿಸುವರು.

ಈವರೆಗೆ ನನ್ನ ನಾಲ್ಕು ದಶಕಗಳ (ಐದು ದಶಕಕ್ಕೆ ಸ್ವಲ್ಪ ಕಡಿಮೆ 44 ವರ್ಷ) ಸುದೀರ್ಘ ಅನುಭವದ ಆಧಾರದ ಮೇಲೆ ಈ ಹೊಸ ಅಂಗಗಳ ಸಂಶೋಧನೆ ಫಲಗೊಂಡಿದೆ. ಈವರೆಗೆ ನಾನು ರಚಿಸಿದ ಹದಿನಾರು ಗ್ರಂಥ

ಗಳು (ಜ್ಯೋತಿಷ್ಯ ನಕ್ಷತ್ರಗಳು) ಮೊದಲನೆಯ ಅಂಗವಾದ ಭವಿಷ್ಯ ಪ್ರತಿಪಾದನೆಯ ಕ್ಷೇತ್ರಕ್ಕೆ ಸಮರ್ಪಿತವಾಗಿದ್ದರೂ. ಆ ಗ್ರಂಥಗಳಲ್ಲಿಯೂ ಕೂಡ ಪ್ರಾಚೀನ ಜ್ಯೋತಿಷ್ಯಶಾಸ್ತ್ರದ ಹೊಸ ಹೊಸ ಪ್ರಯೋಗಗಳನ್ನು ಮಾಡಲಾಗಿದೆ "ಸ್ತ್ರೀಜ್ಯೋತಿಷ್ಯ" ದಲ್ಲಿ ಸ್ತ್ರೀಗೆ ಜ್ಯೋತಿಷ್ಯಶಾಸ್ತ್ರ ವಿಶ್ಲೇಷಣೆಯಲ್ಲಿ ಒಂದು ಪ್ರತ್ಯೇಕ ಹಾಗೂ ವಿಶಿಷ್ಟ ಸ್ಥಾನಮಾನವನ್ನೇ ನಿರ್ಮಿಸಲಾಗಿದೆ. ಇದರಂತೆ "ಉದ್ಯೋಗ ಜ್ಯೋತಿಷ್ಯ" ದಲ್ಲಿ ಇಂದಿನ ಯುಗದಲ್ಲಿ ನೌಕರಿ ಹಾಗೂ ವೃತ್ತಿಗಳಲ್ಲಿ ಎಷ್ಟು ಸಾಧ್ಯವೋ ಅಷ್ಟೆಲ್ಲ ಕ್ಷೇತ್ರಗಳಲ್ಲಿ ಹೇಗೆ ಒಬ್ಬ ಆಯ್ಕೆಗೆ ಸಹಕಾರಿಯಾಗಬೇಕೆಂಬ ವಿಶೇಷ ಸಂಶೋಧನೆ ಅಡಕವಾಗಿದೆ ಇದರಂತೆ ಶಿಕ್ಷಣ ಜ್ಯೋತಿಷ್ಯ. ಆರೋಗ್ಯ ಜ್ಯೋತಿಷ್ಯ ಗ್ರಂಥಗಳಲ್ಲಿ ಆರೋಗ್ಯ ಹಾಗೂ ಶಿಕ್ಷಣ ಕ್ಷೇತ್ರಗಳಲ್ಲಿ ಇತ್ತೀಚಿನ ಬೆಳವಣಿಗೆಗಳನ್ನು ಆಧರಿಸಿಯೇ ಜ್ಯೋತಿಷ್ಯ ಶಾಸ್ತ್ರದ ಪ್ರಯೋಗವನ್ನು ಮಾಡಿದ್ದೇನೆ. ಚುನಾವಣೆ ನಮ್ಮ ಪ್ರಾಚೀನ ಶಾಸ್ತ್ರಕ್ಕೆ ಅಪರೂಪವಾದ್ದರಿಂದ ಪ್ರಜಾತಂತ್ರದ ಈ ಯುಗಧರ್ಮಕ್ಕೆ ಅನುಸರಿಸಿ ಜ್ಯೋತಿಷ್ಯ ಶಾಸ್ತ್ರವನ್ನು ಪ್ರಯೋಗಿಸುವ ಕಾರ್ಯ ಮಾಡಿದ್ದೆನೆ. ಹೀಗಾಗಿ ನನ್ನ ಈವರೆಗಿನ ಹದಿನಾರು ಗ್ರಂಥಗಳಲ್ಲಿ ಪ್ರಾಚೀನ ಜ್ಯೋತಿಷ್ಯ ಶಾಸ್ತ್ರದ ಹೊಸ ಹೊಸ ಪ್ರಯೋಗಗಳೇ ಆಗಿವೆ. ಆದರೆ ಈಗ ಹೊರಬರುತ್ತಿರುವ ಈ "ಪರಿಹಾರ ಜ್ಯೋತಿಷ್ಯ" ಈವರೆಗೆ ಪ್ರಕಟವಾದ ಕೃತಿಗಳಿಗಿಂತ ವಿಭಿನ್ನವಾದ ಕೃತಿಯಾಗಿದೆ. ಇದು ಜ್ಯೋತಿಷ್ಯ ಶಾಸ್ತ್ರದಲ್ಲಿಯೇ ಒಂದು ವಿನೂತನ ಪ್ರಯೋಗವಾಗಿದೆ. ಈ ಶಾಸ್ತ್ರದಲ್ಲಿ ಪ್ರಪ್ರಥಮವಾಗಿ ಹೊಸ ಅಂಗಗಳಾದ "**ಮುಂಜಾಗ್ರತೆ**" "**ಪರಿಹಾರ**" "**ಸಾಂತ್ವನೆ**" ಈ ಮೂರು ಅಂಗಗಳಲ್ಲಿ ಮುಂಜಾಗ್ರತೆ ಹಾಗೂ ಪರಿಹಾರಗಳ ಬಗೆಗೆ ನನ್ನ ಪ್ರಯೋಗಗಳ ಫಲತಾಂಶವನ್ನು ರೂಢಿಸಿಕೊಂಡು ನಿರೂಪಿಸಿದ್ದೇನೆ ಅಂತೆಯೇ "**ಪರಿಹಾರ ಜ್ಯೋತಿಷ್ಯ**" ಗ್ರಂಥವು ಜ್ಯೋತಿಶಾಸ್ತ್ರ ಸಾಹಿತ್ಯ ಭಂಡಾರಕ್ಕೆ ನೀಡುತ್ತಿರುವ ಒಂದು ವಿನೂತನ ಕೊಡುಗೆಯೆಂದರೆ ಇದರಲ್ಲಿ ಯಾವ ಅತಿಶಯೋಕ್ತಿ ಆಗಲಾರದು

ಪ್ರಾಚೀನ ಶಾಸ್ತ್ರದಲ್ಲಿ ಪ್ರಾಯಶ್ಚಿತ್ತಕ್ಕೆ ವಿಶೇಷ ಮಹತ್ವ ಕೊಡಲಾಗು

ತೃಪ್ತಿ, ಇದೊಂದು ರೀತಿಯಲ್ಲಿ ತಪ್ಪು ಮಾಡಿದವನಿಗೆ ತಕ್ಕ ಶಿಕ್ಷೆಯ ದಿಕ್ಕನ್ನು ಹಿಡಿದು ರೂಪಿಸಿದ ಕ್ರಮ. ಈ ಕಾರ್ಯವನ್ನು ಈಗ ಆಧುನಿಕ ಕಾನೂನು ಕೈಗೊತ್ತಿಗೊಂಡಿದೆಯಾದರೂ ಪ್ರಾಯಶ್ಚಿತ್ತದ ಕ್ರಮ ನೈತಿಕತೆಯಿಂದ ಸ್ವಇಚ್ಛೆಯಿಂದ ಶಿಕ್ಷೆ ಪಡೆದುಕೊಳ್ಳುವ ಕ್ರಮವು. ಹಿಂದಿನಂತೆ ತನ್ನ ತಪ್ಪಿಗೆ ತಾನೆ ಪಶ್ಚಾತ್ತಾಪಪಟ್ಟು ಪ್ರಾಯಶ್ಚಿತ ಮಾಡಿಕೊಳ್ಳುವುದಕ್ಕಿಂತ ತನ್ನ ಉತ್ತಮ ಭವಿಷ್ಯಕ್ಕಾಗಿ ತಪ್ಪುಮಾಡದೆ ತನ್ನ ಉತ್ತಮ ಭವಿಷ್ಯಕ್ಕಾಗಿ ರೂಪಿಸಿಕೊಳ್ಳುವ ವಿಧಾನವನ್ನು ಪಾಲಿಸುವುದು ಇಂದಿನ ಅವಶ್ಯಕತೆಯಾಗಿದೆ. ಪರಿಹಾರ ಜ್ಯೋತಿಷ್ಯವು ಈ ದಿಶೆಯಲ್ಲಿ ಮನುಷ್ಯನನ್ನು ಮುನ್ನಡೆಸಲು ಸಹಾಯಕ ಶಾಸ್ತ್ರವಾಗಿ ರೂಪಗೊಂಡಿದೆ.

ಜ್ಯೋತಿಷ್ಯ ಶಾಸ್ತ್ರದ ಪ್ರಮುಖ ಅಂಗ ಭವಿಷ್ಯ ನುಡಿಯುವುದು ಅರ್ಥಾತ ಯಾರೊಬ್ಬ ಜಾತಕನ ಜಾತಕದ ಆಧಾರದ ಮೇಲೆ ಜೀವನದ ವಿವಿಧ ದೃಷ್ಟಿಯಲ್ಲಿ ವಿವಿಧ ಮುಖಗಳಲ್ಲಿ ಮುಂದೆ ಜರುಗಬಹುದಾದ ಘಟನೆಗಳನ್ನು ಸಂಗತಿಗಳನ್ನು ಕಥನ ಮಾಡುವುದು ಅರ್ಥಾತ್ ಮುಂದೆ ಜರುಗಬಹುದಾದ ಘಟನೆ ಸಂಗತಿಗಳ ಮುನ್ಸೂಚನೆ ಮಾಡಬಹುದು. ಹಾಗಾದರೆ ಇಲ್ಲಿ ಒಂದು ಸಂಶಯ ಅಥವಾ ಪ್ರಶ್ನೆ ಸಮಸ್ಯೆ ಉದ್ಭವಿಸುತ್ತದೆ. ಮುಂದೆ ಜರುಗಬಹುದಾದ ಘಟನೆಗಳನ್ನು ಸಂಗತಿಗಳನ್ನು ತಪ್ಪಿಸಲು ಸಾಧ್ಯವಾಗದಿದ್ದಾಗ ಅರ್ಥಾತ್ ಆಗುವುದೆಲ್ಲ ತಪ್ಪಿಸಲು ಬರುವದಿಲ್ಲವೆಂದಾಗ ದೈವದಲ್ಲಿದ್ದದ್ದು ಮೊದಲು ತಿಳಿದುಕೊಂಡು ಮಾಡುವುದೇನು ? ಹಾಗೂ ಪರಿಹಾರ ಜ್ಯೋತಿಷ್ಯವು ಇದಕ್ಕೆ ಎಷ್ಟರ ಮಟ್ಟಿಗೆ ಸಹಾಯವಾಗಬಹುದು ? ಎಂಬ ಸಂಶಯ ಉದ್ಭವಿಸುತ್ತದೆ. ಇದಕ್ಕೆ ಉತ್ತರವಿಷ್ಟೇ ಈಲ್ಲಿ ಮಳೆ ಬರುತ್ತದೆಯೆಂದು ತಿಳಿಯಿರಿ ಆಗ ನಾವು ಛತ್ತರಿಗಿ, ಕಂಬಳಿ, ರೇನ್‌ಕೋಟು ಮೊದಲಾದ ಸಾಧನಗಳಿಂದ ನಮ್ಮನ್ನು ನಾವು ಕಾಪಾಡಿಕೊಳ್ಳಬಹುದು ಅಷ್ಟೇ ಏಕೆ ಯಾವುದಾದರೊಂದು ಗಿಡದ ಬುಡದಲ್ಲಾಗಲಿ ಗೋಡೆಗಳ ಸಮೀಪದಲ್ಲಾಗಲೀ ಮಳೆಯು ತಾಗದಿರುವ ಜಾಗದಲ್ಲಾಗಲೀ ನಿಂತು ಮಳೆಯು ತಾಗದಿರುವ ಹಾಗೆ ಮಳೆಯ ಹಾನಿಯನ್ನು ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತೇವೆ. ಅರ್ಥಾತ್ ಮಳೆಯಿಂದ ಕಾಪಾಡಿಕೊಳ್ಳುತ್ತೇವೆ ಆದರೆ ಮಳೆಯನ್ನೇನು ನಾವು

ನಿಲ್ಲಿಸಲಾರೆವು. ಇದರಂತೆ ಮುಂದೆ ಜರುಗಬಹುದಾದ ಅನಿಷ್ಟ ಘಟನೆಗಳನ್ನು ಮೊದಲು ತಿಳಿದುಕೊಂಡು ಅವನ್ನು ತಪ್ಪಿಸಲು ಸಾಧ್ಯವಿಲ್ಲದಿದ್ದರೂ ಜಪ ತಪ ದಾನ ಮೊದಲಾದ ಧಾರ್ಮಿಕ ವಿಧಾನಗಳಿಂದ ಧಾರ್ಮಿಕ ವಿಧಿಗಳಿಂದ ಅಶುಭ ಗ್ರಹಗಳ ಪರಿಣಾಮವನ್ನು ಕಡಿಮೆ ಮಾಡಿಕೊಳ್ಳಬಹುದು ಆದುದರಿಂದ ಜಾತಕದ ಆಧಾರದ ಮೇಲೆ ಮುಂದೆ ಜರುಗಬಹುದಾದ ಘಟನೆಗಳನ್ನು ಮೊದಲೇ ತಿಳಿದುಕೊಂಡು ಅದಕ್ಕೆ ತಕ್ಕ ಮುಂಜಾಗ್ರತೆ ಪರಿಹಾರವನ್ನು ಕಂಡುಕೊಳ್ಳಲು ಸಹಾಯಕ ಶಾಸ್ತ್ರವನ್ನಾಗಿ ಪರಿಹಾರ ಜ್ಯೋತಿಷ್ಯವು ರೂಪುಗೊಂಡಿದೆ. ಯೋಗಿಗಳು ತಮ್ಮ ಅಧ್ಯಾತ್ಮ ಸಾಮರ್ಥ್ಯದಿಂದ ತಮ್ಮ ಗ್ರಹ ಗತಿಗಳ ಅಶುಭ ಪರಿಣಾಮಗಳನ್ನು ಬದಲಿಸುವ ಅನೇಕ ಉದಾಹರಣೆಗಳು ನಮ್ಮ ಪ್ರಾಚೀನ ಗ್ರಂಥಗಳಾದ ರಾಮಾಯಣ, ಮಹಾಭಾರತ, ಭಾಗವತ ಪುರಾಣ,ವೇದ ಉಪನಿಷತ್‌ಗಳಂಥ ಗ್ರಂಥಗಳಲ್ಲಿಯೂ ಅಧ್ಯಾತ್ಮಿಕ ಗ್ರಂಥಗಳಲ್ಲಿಯೂ ನೋಡಲು ಸಿಗುತ್ತವೆ. ಉದಾಹರಣೆಗೆ ಸತಿಸಾವಿತ್ರಿಯ ಚರಿತ್ರೆ ನೋಡಿರಿ ಮಾರ್ಕಂಡೇಯ ಕಥೆ ಓದಿರಿ ಅಷ್ಟೇ ಏಕೆ ಮಹಾಭಾಗತದ ಯುದ್ಧ ಕಾಂಡದ ಕರ್ಣಪರ್ವದಲ್ಲಿ ಕರ್ಣನು ಅರ್ಜುನನ ಮೇಲೆ ಸರ್ಪಾಸ್ತ್ರವನ್ನು ಪ್ರಯೋಗಿಸಿದಾಗ ಸಾರಥಿಯಾಗಿದ್ದ ಭಗವಾನ ಶ್ರೀಕೃಷ್ಣನು ರಥವನ್ನು ಕೆಳಗೆ ತುಸು ದಬ್ಬಿದ ಮೂಲಕ ಸರ್ಪಾಸ್ತ್ರದ ದುಷ್ಟ ಪರಿಣಾಮ ಕಡಿಮೆಮಾಡಿಕೊಂಡನು. ಆದರೆ ಸರ್ಪಾಸ್ತ್ರದ ಅಶುಭ ಪರಿಣಾಮ ತಪ್ಪಿಸಲು ಬಾರದಿದ್ದರೂ ಕಡಿಮೆ ಮಾಡಿಕೊಂಡನು. ಆ ಸರ್ಪಾಸ್ತ್ರವು ಅರ್ಜುನನ ಕಿರೀಟವನ್ನು ತೆಗೆದುಕೊಳ್ಳಲು ಸಾಮರ್ಥ್ಯವಾಯಿತೆ ವಿನಹ ಕುತ್ತಿಗೆಯನ್ನು ಕಾಪಾಡಿದನು ಅದೇಕೆ ಚಾಲಕರ ಮುಂಜಾಗ್ರತೆ ಕ್ರಮದಿಂದ ಬಸ್ಸು, ಕಾರು. ಟ್ರೇನ, ವಿಮಾನ ಮೊದಲಾದ ವಾಹನಗಳ ಅಫಘಾತಗಳ ಅನಾಹುತಗಳ ತಪ್ಪಿಸದ ಸಾವಿರಾರು ಉದಾಹರಣೆಗಳನ್ನು ಓದಿದ್ದೇವೆ ಕೇಳಿದ್ದೇವೆ ಆದುದರಿಂದ ನಮ್ಮ ಪ್ರಾಚೀನ ಶಾಸ್ತ್ರಗಳಿಗೆ ಹೊಸತಿರುವನ್ನು ಹೊಸ ದಿಕ್ಕನ್ನು ಕೊಡುವುದರಲ್ಲಿ ಸಂಶೋಧನೆಯಾಗಬೇಕಾಗಿದೆ. ಅಂತೆಯೇ **ಪರಿಹಾರ ಜ್ಯೋತಿಷ್ಯ** ವು ಜಾತಕನ ಜಾತಕದ ಮೇಲಿಂದ ಭವಿಷ್ಯವನ್ನು ತಿಳಿಸಿಕೊಡುವ **ಸಹಾಯಕ ಶಾಸ್ತ್ರವಾಗುವುದರೊ** ಡನೆ ಮುಂದೆ ಬರಲಿರುವ ಸಮಸ್ಯೆಗಳ ಮುಂದಾಗಲಿರುವ ಘಟನೆಗಳ ದುಷ್ಟ

ಪರಿಣಾಮದಿಂದ ಪಾರಾಗುವ ಮಾರ್ಗೋಪಾಯಗಳನ್ನು ಅರಿತುಕೊಂಡು ನಮ್ಮನ್ನು ರಕ್ಷಿಸಿಕೊಳ್ಳುವ ಬಗೆಗೆ ಸಾಧ್ಯಾಸಾಧ್ಯತೆಯನ್ನು ಅರಿತು ಯಾವ ಮುಂಜಾಗ್ರತೆ ಕ್ರಮ ಕೈಕೊಳ್ಳಬೇಕು ? ಅದಕ್ಕಾಗಿ ಯಾವ ಯಾವ ಪರಿಹಾರ ಕಂಡುಕೊಳ್ಳಬೇಕು. ಯಾವ ವಿಧಿ ವಿಧಾನ ಆಚರಿಸಬೇಕು ಹೇಗೆ ವರ್ತಿಸಬೇಕು. ಹೇಗೆ ನಡೆಯಬೇಕು ಹೇಗೆ ನುಡಿಯಬೇಕು ಇವೇ ಮೊದಲಾದ ವಿಷಯಗಳನ್ನು ಒಳಗೊಂಡಿವೆ. ಅಲ್ಲದೆ ಮುಂಜಾಗ್ರತೆ ಕ್ರಮವು ಪೂರ್ವಾರ್ಧವಾದರೆ ಪರಿಹಾರದ ಕ್ರಮವು ಉತ್ತರಾರ್ಧವು.

ಈ ಹಿಂದೆ ಪ್ರಸ್ತಾಪಿಸಿದಂತೆ ಜ್ಯೋತಿಷ್ಯ ವೃತ್ತಿಯನ್ನು ಕೈಕೊಳ್ಳುವವರು ಜಾತಕ ಪರಿಶೀಲಿಸುವಾಗ ಹಿಂದೆ ವಿವರಿಸಿದಂತೆ ನಾಲ್ಕು ಅಂಗಗಳಾದ 1) ಭವಿಷ್ಯ ಕಥನ 2) ಮುಂಜಾಗ್ರತೆ 3) ಪರಿಹಾರ 4) ಸಾಂತ್ವನ ಈ ನಾಲ್ಕು ರೀತಿಯಿಂದ ಯಾರೊಬ್ಬರ ಜಾತಕವನ್ನು ಪರಿಶೀಲಿಸಿ ಅವರಿಗೆ ಮಾರ್ಗದರ್ಶನ ಮಾಡಬೇಕಾಗುತ್ತದೆ. ಜಾತಕನ ಪ್ರಯತ್ನಗಳೆಲ್ಲವೂ ಅಪಯಶಸ್ವಿಯಾದಾಗ ಆತನು ನಿರಾಶೆಯಾಗಿ ಆತ್ಮಹತ್ಯೆ ಮಾಡಿಕೊಳ್ಳುವ ಯೋಚನೆ ಉಳ್ಳವನಾಗಿರುತ್ತಾನೆ ಅಲ್ಲದೆ ಹಣಕಾಸಿನ ತೊಂದರೆಯಿಂದಾಗಲೂ ಬಡತನ ಬವಣೆಯಿಂದಲೂ ಸ್ತ್ರೀ ತೊಂದರೆಯಿಂದಲೂ ವ್ಯಾಜ್ಯಗಳ ಪ್ರತಿಕೂಲ ಪರಿಣಾಮದಿಂದಲೂ ಶಿಕ್ಷಣದಲ್ಲಿಯ ಅಪಯಶಸ್ಸಿನಿಂದಲೂ ಮರ್ಯಾದೆಗೆ ಧಕ್ಕೆ ಬಂದ ಘಟನೆಗಳಿಂದಲೂ ಪರಿಹಾರವಾಗದ ರೋಗದಿಂದಲೂ ಹೀಗೆ ಅನೇಕ ಕಾರಣಗಳಿಂದ ಜಾತಕನು ನಿರಾಶೆಯಾಗಿ ಆತ್ಮಹತ್ಯೆ ಮಾಡಿಕೊಳ್ಳುವ ಹಂತದಲ್ಲಿರುತ್ತಾನೆ ಅಂತಹ ಸಂಧರ್ಭದಲ್ಲಿ ನಾಲ್ಕನೇ ಅಂಗವಾದ ಸಾಂತ್ವನದ ಅಂಗವು ಬಹಳ ಮುಖ್ಯವಿರುತ್ತದೆ ಈ ಅಂಶಕ್ಕೆ ಬಹಳ ಪ್ರಾಮುಖ್ಯತೆ ಕೊಡಬೇಕಾಗುತ್ತದೆ. ಪ್ರಸ್ತುತಃ ಈ ಕೃತಿಯಲ್ಲಿ ಈ ಅಂಶದ ಪ್ರಸ್ತಾಪ ವಿಶ್ಲೇಷಣೆ ಮಾಡುತ್ತಿಲ್ಲವಾದರೂ ಈ ಅಂಗವು ಕೂಡ ಜ್ಯೋತಿಷ್ಯ ಶಾಸ್ತ್ರದ ಮಹತ್ವದ ಅಂಗವೆಂಬ ಕಲ್ಪನೆಯನ್ನು ಮೂಡಿಸಬೇಕೆಂಬ ಉದ್ದೇಶದಿಂದ ಇದರ ಸಾಂಕೇತಿಕ ಪರಿಚಯವನ್ನು ಮಾತ್ರ ಇಲ್ಲಿ ಮಾಡಿದ್ದೇನೆ ಇದಕ್ಕಾಗಿ ಸಾಂತ್ವನ ಜ್ಯೋತಿಷ್ಯವೆಂಬ ಪ್ರತ್ಯೇಕ ಕೃತಿಯನ್ನು ಬರೆಯಬೇಕೆಂಬ ವಿಚಾರ ವಿಟ್ಟುಕೊಂಡಿರುವ ಕಾರಣ ಯಾವ ಜಾತಕನಿಗೆ ಯಾವ ಸಂದರ್ಭದಲ್ಲಿ ಯಾವ

ಯಾವ ಅವಧಿಯಲ್ಲಿ ಸಾಂತ್ವನ ಮಾಡಬೇಕು ಎಂಬ ಅಂಶ ಮಹತ್ವದ್ದಿದ್ದು ಅದಕ್ಕಾಗಿ ಪ್ರತ್ಯೇಕ ಗ್ರಂಥ ಬರೆಯುವಷ್ಟು ಈ ವಿಷಯದ ವ್ಯಾಪ್ತಿ ಇದೆ. ಪ್ರಸ್ತುತಃ ಈ ಗ್ರಂಥದಲ್ಲಿ ಮುಂಜಾಗ್ರತೆ ಹಾಗೂ ಪರಿಹಾರ ಈ ಎರಡು ಅಂಗಗಳ ವಿಶ್ಲೇಷಣೆ ಮಾತ್ರ ಮಾಡಲಾಗಿದೆ.

**"ಪರಿಹಾರ ಜ್ಯೋತಿಷ್ಯವು"** ಅಸಂಖ್ಯ ಕುಸುಮಗಳಲ್ಲಿ ಒಂದಾಗಿ ಜ್ಞಾನ ವಿಕಾಸದ ಕ್ರಿಯೆಗೆ ಹಾಗೂ ಅಧ್ಯಾತ್ಮ ಬಲ ಸಂವರ್ಧನೆಗೆ ಪ್ರಮುಖ ಉಪಕರಣವಾಗಬೇಕೆಂಬ ಉದ್ದೇಶದಿಂದ ಈ ಕೃತಿ ರಚನೆಯು ಈ ಶಾಸ್ತ್ರ ಕುಸುಮವನ್ನು ದಶ ದಳಗಳಲ್ಲಿ ರೂಪಿಸಿ ವಿಶ್ಲೇಷಿಸಲಾಗಿದೆ. ಆ ದಶ ದಳಗಳು ಹೀಗಿವೆ 1) ಆರೋಗ್ಯ–ಪರಿಹಾರ 2) ಆರ್ಥಿಕ–ಪರಿಹಾರ 3)ಶಿಕ್ಷಣ–ಪರಿಹಾರ 4) ಗೃಹಸೌಖ್ಯ–ಪರಿಹಾರ 5) ವೃತ್ತಿ–ಪರಿಹಾರ 6) ಪತಿ–ಪತ್ನಿ ಪರಿಹಾರ 7) ತಂದೆ, ತಾಯಿ, ಮಕ್ಕಳ–ಪರಿಹಾರ 8) ಶತ್ರು, ಮಿತ್ರ–ಪರಿಹಾರ 9) ಸಹೋದರ, ಸಹೋದರಿಯರ – ಪರಿಹಾರ ಮತ್ತು 10) ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ – ಪರಿಹಾರ ಈ ಹತ್ತು ವಿಷಯಗಳ ಮೂಲಕ ಜಾತಕನ ಜಾತಕವನ್ನು ಹೊಸ ಅಂಗಗಳಾದ ಮುಂಜಾಗ್ರತೆ ಹಾಗೂ ಪರಿಹಾರ ಹೇಗೆ ಅರ್ಥೈಸಿ ಬೆಳೆಸಿಕೊಳ್ಳಬೇಕೆಂಬುದರ ವಿವರಣೆಗಳನ್ನು ನಿರೂಪಿಸಲಾಗಿದೆ.

ವಿಷಯ ಪ್ರವೇಶ ಎಂಬ ಸುದೀರ್ಘ ಪ್ರಕರಣದ ಮುಕ್ತಾಯ ಮಾಡುವ ಪೂರ್ವದಲ್ಲಿ ಇನ್ನೊಂದು ಮಹತ್ವದ ವಿಷಯವನ್ನು ಇಲ್ಲಿ ಹೇಳಬಯಸುತ್ತೇನೆ. ಮನುಷ್ಯ ಜೀವನದಲ್ಲಿ ದೈವ ಪ್ರಭಾವ ಅತ್ಯಂತ ಬಲಶಾಲಿ "ದೈವಂ ಚೈವಾತ್ರ ಪಂಚಮಮ್" ಎಂಬ ಗೀತೆಯ ನುಡಿಯಂತೆ ದೈವವೇ ಸರ್ವದಕ್ಕೂ ನಿರ್ಣಾಯಕ ಗ್ರಹಗಳ ಬಲಾಬಲ ಹೇಗೆ ಇರಲಿ ಆ ದೈವ ನಿಯಾಮಕನೇ ಗ್ರಹಗಳ ಮೂಲಾಧಾರರನ್ನಾದ್ದರಿಂದ ಆತನ ಕೃಪೆಗಾಗಿ ನಿರಂತರ ಒಂದು ಪ್ರಯತ್ನ ಜೀವನದಲ್ಲಿರಬೇಕು ಅದಕ್ಕಾಗಿಯೇ "ಸಕಲ ಗ್ರಹಬಲ ನೀನೇ ಸರಸಿಜಾಕ್ಷ ಎನ್ನುತ್ತಾರೆ. ಮಹರ್ಷಿ ಅರವಿಂದರ ಪ್ರಕಾರ ಯೋಗ ಸಾಧನೆಯಿಂದ ಅಶುಭ ಗ್ರಹಗಳ ಪರಿಣಾಮ ಕಡಿಮೆ ಆಗುತ್ತದೆ ಎನ್ನು

ತ್ತಾರೆ. ಆತನ ಕೃಪೆಗಾಗಿ ನಿರಂತರ ಒಂದುಪ್ರಯತ್ನ ಜೀವನದಲ್ಲಿರಬೇಕು ಇದಕ್ಕಾಗಿಯೇ ಸಕಲ ಗ್ರಹಬಲ ನೀನೇ ಸರಸಿಜಾಕ್ಷ ಎನ್ನುತ್ತಾರೆ. ಆತನ ಕೃಪೆ ಇದ್ದರೆ ಯಾವ ಗ್ರಹಗಳ ಅಶುಭ ಪರಿಣಾಮವಾಗದು ಆತನಕೃಪೆ ಪಡೆಯಲು ನಿತ್ಯ ನೈಮಿತ್ತಿಕ ಕರ್ಮಗಳು ವ್ರತ ಉಪಾಸನೆ ಇತ್ಯಾದಿಗಳಿವೆ. ಹಾಗಾದರೆ ಯಾರು ಯಾವ ವ್ರತ ಉಪಾಸನೆಗಳನ್ನು ಮಾಡಬೇಕು ಯಾವ ಗ್ರಹಗಳ ಆರಾಧನೆ ಮಾಡಬೇಕು ಎಂಬ ಪ್ರಶ್ನೆ ಉದ್ಭವಿಸುತ್ತದೆ. ಸಾಮಾನ್ಯ ವಾಗಿ ನವಮ, ಪಂಚಮ ಸ್ಥಾನಾಧೀಶರ ಬಲಾಬಲದ ಮೇಲಿಂದಲೂ ನವಮ–ಪಂಚಮ ಸ್ಥಾನಗಳಲ್ಲಿರುವ ಗ್ರಹಗಳ ಬಲಾಬಲದ ಮೇಲೆ ನಿರ್ಧರಿಸ ಬೇಕಾಗುತ್ತದೆ. ಇದು ಒಂದು ಪ್ರಕಾರವು ಜಾತಕನ ಜಾತಕದಲ್ಲಿಯ ಗ್ರಹ ಗತಿಯ ಅನುಸಾರ ಜಾತಕನು ಯಾವ ಯಾವ ವಿಷಯಕ್ಕೆ ಜನ್ಮಾರಭ್ಯ ಪಡೆದು ಕೊಂಡು ಬಂದಿರುವನು. ಯಾವ ಯಾವ ವಿಷಯಕ್ಕೆ ಪಡೆದುಕೊಂಡುಬಂದಿಲ್ಲ ಯಾವ ವಿಷಯಕ್ಕೆ ಅನಿಷ್ಟವಿದೆ ಯಾವ ಗ್ರಹ ಯಾವ ಅಶುಭ ಫಲ ಕೊಡು ವುದೋ ಆ ವಿಷಯಕ್ಕೆ ಸಂಬಂಧಿಸಿದ ದೇವತೆಗಳ ವ್ರತ, ಉಪವಾಸ,ಸ್ತೋತ್ರ ಪ್ರಾರ್ಥನೆ, ಜಪ, ಹೋಮ ಮೊದಲಾದವುಗಳನ್ನು ಮಾಡಬೇಕು. ಉದಾಃ– ಒಬ್ಬ ಜಾತಕನ ಜಾತಕದ ಪ್ರಕಾರ ಆರೋಗ್ಯ ಭಾಗ್ಯ ಲೋಪವಿದೆಯೆಂದು ತಿಳಿಯಿರಿ ಆಗ ಆರೋಗ್ಯ ಭಾಗ್ಯವನ್ನು ಕೊಡುವ ವ್ರತ, ಉಪಾಸನೆಗಳನ್ನು ಮಾಡಬೇಕು. ಇದರಂತೆ ಆರೋಗ್ಯ ಭಾಗ್ಯ ಕೊಡುವ ಗ್ರಹಗಳ ಜಪ. ಶಾಂತಿ, ಯನ್ನು ಮಾಡಬೇಕಾಗುತ್ತದೆ. ಕೆಲವೊಂದು ಉದ್ದೇಶಕ್ಕಾಗಿ ಕೆಲವೊಂದು ಕಾಮನೆಗಾಗಿ ಕೆಲವೊಂದು ಪೀಡಾ ಪರಿಹಾರಕ್ಕಾಗಿ ಕೆಲನಿರ್ದಿಷ್ಟ ವ್ರತ, ಉಪಾ ಸನೆಗಳನ್ನು ಮಾಡಬೇಕಾಗುತ್ತದೆ. ಉದಾ:–ಸಂತಾನ ಅಪೇಕ್ಷಕ್ಕಾಗಿ ಮಾಡುವ ವ್ರತ-ಉಪಾಸನೆ ವಿಭಿನ್ನವಿದ್ದರೆ ಮದುವೆ ಬೇಗ ಜರುಗಲು ಮಾಡುವ ವ್ರತ ಉಪವಾಸಗಳು ಬೇರೆ, ಇದರಂತೆ ಅನಿಷ್ಟ ಗ್ರಹಗಳ ಅಶುಭಫಲ ಕಡಿಮೆ ಮಾಡಿಕೊಳ್ಳಲು ಕೈಕೊಳ್ಳಬೇಕಾದ ಜಪ, ತಪ, ದಾನಗಳು ಬೇರೆ ಇರುತ್ತವೆ. ಈ ಎಲ್ಲ ವ್ರತ ಉಪವಾಸಗಳ ವಿವರಣೆಯನ್ನು ಆಯಾಅಧ್ಯಾಯಕ್ಕೆ ಸಂಬಂಧಿ ಸಿದಂತೆ ಆಯಾ ಅಧ್ಯಾಯದಲ್ಲಿ ವಿವರಿಸಲಾಗಿದೆ. ಪ್ರಸ್ತುತ ಈ ವಿಷಯ ಪ್ರವೇಶದ ಅಧ್ಯಾಯದಲ್ಲಿ ಎಲ್ಲರೂ ಎಲ್ಲ ಕಾಲಕ್ಕೂ ಕೈಕೊಳ್ಳಲೇಬೇಕಾದ ಕೆಲ ವ್ರತ ಉಪವಾಸಗಳ ಸಂಕ್ಷಿಪ್ತ ವಿವರಣೆಗಳು ಈ ಕೆಳಗಿನಂತಿವೆ.

## ಸರ್ವ ಸಾಮಾನ್ಯ ಉಪಾಸನೆಯ ಪ್ರಕಾರಗಳು :

ಪ್ರತಿಯೊಬ್ಬರು ಸ್ನಾನವಾದ ಬಳಿಕ ಸಂಧ್ಯಾವಂದನೆ ನಂತರ ದೇವರ ಪೂಜೆ, ಪ್ರಾರ್ಥನೆ ಜಪಾಧಿಗಳ ನಂತರ ರಾಮಾಯಣ ಭಾಗವತ, ದೇವಿ ಪುರಾಣ ಮೊದಲಾದ ಗ್ರಂಥಗಳ ಪಠಣವಾಗಲೀ ಪಾರಾಯಣವಾಗಲೀ ಮಾಡ ಬೇಕು.ಅಲ್ಲದೇ ಕೆಲವೊಂದು ವ್ರತ,ಉಪಾಸನೆಗಳನ್ನು ಎಲ್ಲರೂ ಎಲ್ಲ ಕಾಲಕ್ಕೂ ಮಾಡಬಹುದಾಗಿದೆ ಅವು ಇಂತಿವೆ.

೧. **ಏಕಾದಶೀ ವ್ರತ :** ಪ್ರತಿ ತಿಂಗಳಿಗೆ ಎರಡು ಸಾರೆ ಬರುವ ಏಕಾದಶಿ ವ್ರತೋಪಾಸನೆಯನ್ನು ಎಲ್ಲರೂ ಎಲ್ಲ ಕಾಲಕ್ಕೂ ಆಚರಿಸುವುದು ಶ್ರೇಯಸ್ಕರ ಆರೋಗ್ಯ ದೃಷ್ಟಿಯಿಂದ ಅಂತೂ ಒಳ್ಳೆಯದೇ ಆದರೆ ಮುಖ್ಯ ವಾಗಿಏಕಾದಶೀವ್ರತ ಕೈಕೊಳ್ಳುವುದರಿಂದ ಮನುಷ್ಯನಿಗೆ ಸಾತ್ವಿಕ ಗುಣವರ್ಧನೆ ಯಾಗುವುದರಿಂದ ಅಧ್ಯಾತ್ಮಿಕ ವಿಷಯದಲ್ಲಿ ಆಸಕ್ತಿ ಬೆಳೆದು ತಾನ್ ಮೂಲಕ ಸಾಕ್ಷಾತ್ ಕಾರ್ಯಕ್ಕೆ ಮುಕ್ತಿ ಸಾಧನೆಗೆ ಸಹಾಯವಾಗುತ್ತದೆ. ಇನ್ನು ಲೌಕಿಕ ವಾಗಿ ಹೇಳಬೇಕೆಂದರೆ ಐಶ್ವರ್ಯ ವೃದ್ಧಿಯಾಗುತ್ತದೆ ವಯಸ್ಸಿನ 60 ರ ಮೇಲಂತೂ ಏಕಾದಸಿ ಉಪಾಸನೆ ಮಾಡುವುದು ಹೆಚ್ಚು ಹಿತಕರವು ವರುಷ ದಲ್ಲಿ ಬರುವ ಎಲ್ಲ 24 ಏಕಾದಶಿ ವ್ರತವನ್ನು ಪಾಲಿಸಲು ಶಕ್ಯವಿಲ್ಲದಿದ್ದರೆ ಕನಿಷ್ಟ ಚಾತುರ್ಮಾಸದ ಪ್ರಾರಂಭ ದಿನವಾದ ಆಷಾಢ ಶುದ್ಧ ಏಕಾದಶಿ ಹಾಗೂ ಚಾತುರ್ಮಾಸದ ಸಮಾಪ್ತಿಯಾದ ಕಾರ್ತಿಕ ಶುದ್ಧ ಏಕಾದಶಿಗಳನ್ನು ತಪ್ಪದೇ ಮಾಡಿದಲ್ಲಿ ಐಶ್ವರ್ಯವೃದ್ಧಿ ಆಗುವುದರಲ್ಲಿ ಸಂದೇಹವಿಲ್ಲ.

೨. **ಸಂಕಷ್ಟ ಚತುರ್ಥಿ :** ಪ್ರತಿ ಕೃಷ್ಣ ಪಕ್ಷದ ಚವತಿ ದಿನ ಬರುವ ಸಂಕಷ್ಟ ಚತುರ್ಥಿಯನ್ನು ಗಣೇಶ ವ್ರತಕ್ಕೋಸ್ಕರ ಆಚರಿಸುವರು. ಈ ವ್ರತ ದಿಂದ ಎಲ್ಲ ಸಂಕಟಗಳು ದೂರವಾಗುವವು. ವಿಶೇಷವಾಗಿ ಶತ್ರುಪೀಡೆ ಹರಣ, ವ್ಯಾಜ್ಯದಲ್ಲಿ ಜಯ, ಶಿಕ್ಷಣದಲ್ಲಿ ಪ್ರಗತಿ ಪರೀಕ್ಷೆಯಲ್ಲಿ ಯಶ ಮೊದಲಾದ ಶುಭಫಲಗಳು ದೊರೆಯುತ್ತವೆ.ವರುಷದಲ್ಲಿ ಬರುವ ಎಲ್ಲ 12 ಸಂಕಷ್ಟ ವ್ರತ

ಗಳು ಆಚರಿಸಲು ಬಾರದಿದ್ದಲ್ಲಿ ಕನಿಷ್ಟ ಪಕ್ಷ ಮಂಗಳವಾರ ಚತುರ್ಥಿ ಇರುವ ಅಂಗಾರಿಕಾ ಸಂಕಷ್ಟಿ ಹಾಗೂ ಶ್ರಾವಣ, ಆಶ್ವೀನ, ಮಾಘ ಈ ಸಂಕಷ್ಟ ವ್ರತ ಮಾಡಿದರೂ ಸಾಕು ಮೇಲೆ ಬರೆದ ಎಲ್ಲ ಶುಭಫಲಗಳು ದೊರೆಯುತ್ತವೆ.

**3. ಪ್ರದೋಷ :** ಪ್ರತಿ ತ್ರಯೋದಶಿಗೆ ಮಾಡುವ ಉಪವಾಸಕ್ಕೆ ಪ್ರದೋಷವೆನ್ನುತ್ತಾರೆ. ಈ ಪ್ರದೋಷ ವ್ರತಾಚರಣೆಯಿಂದ ಐಶ್ವರ್ಯ ವೃದ್ಧಿ ಸಾಲಗಾರರ ಕಾಟನಿವಾರಣೆ, ದ್ರವ್ಯಸಂಚಯ ಮನೆಯಲ್ಲಿ ಲಕ್ಷ್ಮೀ ವಾಸಿಸುತ್ತಾಳೆ. ವರುಷಕ್ಕೆ ಬರುವ 24 ಪ್ರದೋಷ ವ್ರತಗಳಲ್ಲಿ ಕನಿಷ್ಟ ಸೋಮವಾರ ತ್ರಯೋದಶಿ ಇರುವ ಸೋಮ ಪ್ರದೋಷ ಮಂಗಳವಾರ ತ್ರಯೋದಶಿ ವಿರುವ ಭೌಮ ಪ್ರದೋಷ ಶನಿವಾರ ತ್ರಯೋದಶಿ ಇರುವಶನಿ ಪ್ರದೋಷ ಈ ಮೂರು ವಾರಗಳಲ್ಲಿ ಬರುವ ಪ್ರದೋಷ ವ್ರತವನ್ನು ಆಚರಿಸುವುದರಿಂದ ಐಶ್ವರ್ಯ ವೃದ್ಧಿ ಆಗುವುದರಲ್ಲಿ ಸಂದೇಹವಿಲ್ಲ.

**ಶಿವರಾತ್ರಿ ವ್ರತ :** ಪ್ರತಿ ತಿಂಗಳ ವದ್ಯ (ಕೃಷ್ಣ) ಚತುರ್ದಶೀ ದಿನ ಮಾಡುವ ವ್ರತಕ್ಕೆ ಶಿವರಾತ್ರಿ ವ್ರತ ಎನ್ನುತ್ತಾರೆ. ಈ ವ್ರತದಿಂದ ಮುಖ್ಯವಾಗಿ ವ್ಯಕ್ತಿಗಳನ್ನು ದೀರ್ಘಾಯುಷಿಯನ್ನಾಗಿ ಮಾಡುವ ವ್ರತ ಆರೋಗ್ಯ ಸುಧಾರಣೆಯಾಗುತ್ತದೆ. ತಿಂಗಳಿಗೆ ಬರುವ ಎಲ್ಲ 12 ಶಿವರಾತ್ರಿ ವ್ರತ ಮಾಡಲು ಶಕ್ಯವಿಲ್ಲದಿದ್ದಲ್ಲಿ ಕನಿಷ್ಠ ಪಕ್ಷ ಮಾಘಬಹುಳದಂದು ಬರುವ ಮಹಾ ಶಿವರಾತ್ರಿ ವ್ರತ ಆಚರಿಸಿದರೂ ಕೂಡ ಆರೋಗ್ಯ ವರ್ಧನೆಯಾಗಿ ದೀರ್ಘಾಯುಗಳಾಗುತ್ತಾರೆ.

ಇದರಂತೆ ಕೃಷ್ಣಾಷ್ಟಮಿ, ರಾಮನವಮಿ, ಗಣೇಶಚತುರ್ಥಿ, ಶ್ರೀನರಸಿಂಹ ಸ್ವಾಮಿ ಜಯಂತಿ ಶ್ರೀ ದತ್ತ ಜಯಂತಿ, ಚಿದಂಬರ ಜಯಂತಿ ಮೊದಲಾದ ವ್ರತೋಪಾಸನೆಗಳಿಂದ ವಿಶಿಷ್ಠ ಫಲಗಳು ದೊರೆಯುತ್ತವೆ. ಅಲ್ಲದೇ ವಿಶಿಷ್ಟ ವಾರದ ಉಪಾಸನೆಗಳಿಂದ ಕೂಡ ವಿಶಿಷ್ಠ ಫಲ ದೊರೆಯುತ್ತವೆ. ಅವು ಇಂತಿವೆ

## ಮನೋರಥ ಇಡೇರುವುದಕ್ಕಾಗಿ ಕೈಕೊಳ್ಳಬೇಕಾದ ಉಪಾಸನೆಯ ವಾರಗಳು

**ರವಿವಾರ :** ಐಶ್ವರ್ಯವೃದ್ಧಿ, ಆರೋಗ್ಯಕ್ಕಾಗಿ, ಆಂತಸ್ತುವೃದ್ಧಿ

ಸ್ಥಾನಮಾನ, ಅಧಿಕಾರ ಪ್ರಾಪ್ತಿಗಾಗಿ ವಿಶೇಷವಾಗಿ ರಾಜಕಾರಣಿಗಳು ಹಾಗೂ ಸರಕಾರಿ ಅಧಿಕಾರಿಗಳು, ಕಾರಖಾನೆಗಳ ಅಧಿಕಾರಿಗಳು ಕೈಕೊಳ್ಳಬೇಕಾದ ಉಪಾಸನೆ.

**ಸೋಮವಾರ :** ಸಂತತಿ, ವಿವಾಹ, ದ್ರವ್ಯಪ್ರಾಪ್ತಿ, ಮನಶಾಂತಿ ಗೃಹಶಾಂತಿಗಾಗಿ.

**ಮಂಗಳವಾರ :** ಸಾಲಪರಿಹಾರ, ಶತ್ರುಪೀಡಾನಾಶ ದೇವಿ ಪ್ರಸನ್ನತಾ. ಕುಟುಂಬ ಪೀಡಾನಿವಾರಣೆ. ಸಂಕಟನಿವಾರಣೆ ಬಾಹ್ಯ ಕೆಲಸಗಾರರು ತಂತ್ರಜ್ಞರು ಕೈಕೊಳ್ಳಬೇಕಾದ ಉಪಾಸನೆ.

**ಬುಧವಾರ :** ಎಲ್ಲ ಪ್ರಕಾರದ ಕಾರ್ಯಸಿದ್ಧಿಗಾಗಿ ವಿಶೇಷವಾಗಿ ವ್ಯಾಪಾರಸ್ಥರು ಕೈಕೊಳ್ಳಬೇಕಾದ ಉಪಾಸನೆ.

**ಗುರುವಾರ:** ಅಧ್ಯಾತ್ಮಿಕ ಉನ್ನತಿ, ಭೂತ,ಪಿಶಾಚಿ ಬಾಧೆ ಪರಿಹಾರ. ಸಂತಾನ ಸೌಖ್ಯ, ನೌಕರಿಯಲ್ಲಿ ಪ್ರಗತಿ, ಬಡತಿ, ಶಿಕ್ಷಣದಲ್ಲಿ ಪ್ರಗತಿ.ಐಶ್ವರ್ಯ ವೃದ್ಧಿ, ವಿಶೇಷವಾಗಿ ವಿದ್ಯಾರ್ಥಿಗಳು, ಶಿಕ್ಷಕರು, ನ್ಯಾಯಾಧೀಶರು, ಮಠಾಧೀಶರು, ಜ್ಯೋತಿಷಿಗಳು, ವೈದ್ಯರು, ವಕೀಲರು, ಅರ್ಥಶಾಸ್ತ್ರಸಲಹೆಗಾರರು ಕೈಕೊಳ್ಳಬೇಕಾದ ಉಪಾಸನೆಗಳು.

**ಶುಕ್ರವಾರ :** ದೇವಿಪ್ರಸನ್ನಕ್ಕಾಗಿ, ಲಕ್ಷ್ಮೀ ಪ್ರಸನ್ನಕ್ಕಾಗಿ ಸ್ತ್ರೀ ಸೌಖ್ಯ, ಪುರುಷ ಸೌಖ್ಯ, ಕೌಟುಂಬಿಕ ವೃದ್ಧಿ.ಬೇಗ ವಿವಾಹಗಳು ವಿಶೇಷವಾಗಿ. ಸ್ತ್ರೀಯರು ಕೈಕೊಳ್ಳಬೇಕಾದ ಉಪಾಸನೆ.

**ಶನಿವಾರ :** ಶನಿಪೀಡೆ ನಿವಾರಣೆಗೋಸ್ಕರ ಹಾಗೂ ಮಾರುತಿ ಪ್ರಸನ್ನಕ್ಕಾಗಿ ಭಯ ನಿವಾರಣೆ ಶತ್ರುನಾಶ ಎಲ್ಲ ಪ್ರಕಾರದ ಸಂಕಟ ನಿವಾರಣೆಗೆ ಮಾಟ–ಮದ್ದು ಭಾನುಮತಿಗಳ ಕಾಟ ನಿವಾರಣೆಗೆ ವಿಶೇಷವಾಗಿ ಕಾರ್ಮಿಕರು ಕಾರಖಾನೆಯ ಕೆಲಸಗಾರರು ತಾಂತ್ರಿಕ ವರ್ಗದವರು ಶ್ರಮಜೀವಿಗಳು ಕೈಕೊಳ್ಳಬೇಕಾದ ಉಪಾಸನೆಗಳು.

ಉಪಾಸನೆಯೆಂದರೆ ಆಯಾ ವಾರಗಳಲ್ಲಿ ಆಯಾ ಇಷ್ಟಾರ್ಥಪೂರ್ತಿಗಾಗಿ ಕೈಕೊಳ್ಳಬೇಕಾದ ಉಪಾಸ ವ್ರತ ಅಂದರೆ ಒಪ್ಪತ್ತು ಊಟ ಅಥವಾ ಇಡೀ ದಿನ ಲಂಘನ ಅಥವಾ ಒಪ್ಪತ್ತು ಫಲಾಹಾರದಿಂದ ಇರುವದು.

## ಗ್ರಹಗಳ ಅಶುಭ ಫಲ ನಿವಾರಣೆಗೆ ಕ್ರಮಗಳು

ನಮಗೆ ತೊಂದರೆಗಳು ಬಂದಾಗ ಸಂಕಟಗಳು ಉದ್ಭವಿಸಿದಾಗಲಿ ಗ್ರಹಚಾರ ಚನ್ನಾಗಿಲ್ಲವೆನ್ನುತ್ತೇವೆ. ಇಂದು ಎದ್ದ ಗಳಿಗೆ ಚನ್ನಾಗಿಲ್ಲವೆನ್ನುತ್ತೇವೆ. ಜ್ಯೋತಿಷಿಗಳ ಬಳಿಗೆ ಹೋಗಿ ವಿಚಾರಿಸಿದರೆ ಸಾಡೇಸಾತಿ ಇದೆ. ಅಷ್ಟಮಶನಿ ಪಂಚಮ ಶನಿ, ಗುರು ಅಶುಭನಿದ್ದಾನೆ, ಮಂಗಳ ಅಶುಭನಿದ್ದಾನೆ, ಶನಿ–ಮಂಗಳ ಪ್ರತಿಯೋಗವಿದೆ, ಯುತಿಯೋಗವಿದೆ, ಅನಿಷ್ಟಗ್ರಹದ ದಶೆ ಪ್ರಾರಂಭವಾಗಿದೆ ಹೀಗೆಲ್ಲ ಹೇಳುತ್ತಾರೆ. ಅದಕ್ಕೇನು ಪರಿಹಾರವೆಂದರೆ ನವಗ್ರಹಗಳ ಶಾಂತಿ ಮಾಡಿಸಿರಿ ಜಪ, ಹೋಮ, ದಾನ ಮಾಡಿರಿ ಹೀಗೆಲ್ಲ ಪರಿಹಾರ ಸೂಚಿಸುತ್ತಾರೆ. ಆದುದರಿಂದ ಆಯಾ ಗ್ರಹಗಳ ಅಶುಭ ಫಲ ನಿವಾರಣೆಗಾಗಿ ಮಾಡುವ ಧಾನ್ಯಗಳ ವಸ್ತ್ರಗಳಾವವು ಆಯಾ ಗ್ರಹಗಳ ಆರಾಧ್ಯ ವೃಕ್ಷಗಳಾವವು ಆಯಾ ಗ್ರಹಗಳ ರತ್ನಗಳಾವವು [ಹರಳು] ಎಂಬುವನ್ನು ಈ ಕೆಳಗಿನಂತೆ ಬರೆಯಲಾಗಿದೆ.

## ನವಗ್ರಹಗಳ ನವರತ್ನಗಳು

1) ಸೂರ್ಯನಿಗೆ ಮಾಣಿಕ್ಯ 2) ಚಂದ್ರನಿಗೆ ಮುತ್ತು 3) ಮಂಗಳನಿಗೆ (ಕುಜ) ಹವಳ 4) ಬುಧನಿಗೆ ಪಚ್ಚೆಕಲ್ಲು 5) ಗುರುವಿಗೆ ಪುಷ್ಪರಾಗ 6) ಶುಕ್ರನಿಗೆ ವಜ್ರ 7) ಶನಿಗೆ ನೀಲಮಣಿ 8) ರಾಹುಗೆ ಗೋಮೇಧಿಕ 9) ಕೇತುವಿಗೆ ವೈಢೂರ್ಯ

ಆಯಾಗ್ರಹಗಳ ಪ್ರಸನ್ನತೆಗಾಗಿ ಅಶುಭಫಲ ನಿವಾರಣೆಗಾಗಿ ಯಥಾಶಕ್ತಿ ತಮ್ಮ ದೇಹದ ಮೇಲೆ ಧರಿಸಿವಲ್ಲಿ ಅರ್ಥಾತ್ ಉಂಗುರದಲ್ಲಿ ಹಾಕಿ

ಧರಿಸಿದಲ್ಲಿ ಅಶುಭಫಲ ನಿವಾರಣೆಯಾಗುವುದರಲ್ಲಿ ಸಂದೇಹವಿಲ್ಲ. ಯಾರು ಯಾವ ಹರಳನ್ನು ಧರಿಸಬೇಕು ಎಂಬುದರ ಬಗೆಗೆ ಪ್ರತ್ಯೇಕವಾಗಿ ವಿವರಿಸುವಷ್ಟು ಈ ವಿಷಯದ ವ್ಯಾಪ್ತಿ ಇರುವುದರಿಂದ ಸಂಕ್ಷಿಪ್ತದಲ್ಲಿ ಇದರ ವಿವರಣೆ ಕೊಡಲಾಗಿದೆ.

## ಗ್ರಹಗಳ ವಸ್ತ್ರಗಳ ಬಣ್ಣ

1) ಸೂರ್ಯನಿಗೆ ಕೆಂಪುಬಟ್ಟೆ 2) ಚಂದ್ರನಿಗೆ ಬಿಳಿ 3) ಕುಜನಿಗೆ ಕೆಂಪು 4) ಬುಧನಿಗೆ ಹಳದಿ 5) ಗುರುವಿಗೆ ಬಂಗಾರ ಅಥವಾ ಕಂದು ಬಣ್ಣದ ಬಟ್ಟೆ 6) ಶುಕ್ರನಿಗೆ ಬಿಳಿಯುವಸ್ತ್ರ 7) ಶನಿಗೆ ಕರಿಯುವಸ್ತ್ರ 8) ರಾಹುವಿಗೆ ಬುದುಬಣ್ಣ 9) ಕೇತುವಿಗೆ ಮಿಶ್ರವರ್ಣ ಹೀಗೆ ಮೇಲೆ ಬರೆದ ಬಣ್ಣದ ವಸ್ತ್ರಗಳನ್ನು ಆಯಾಗ್ರಹಗಳ ಪೀಡಾ ಪರಿಹಾರಕ್ಕಾಗಿ ಕನಿಷ್ಟ 70 ಸೆಂಟಿ ಮೀಟರ್ ಅಳತೆಯ ಅಥವಾ ಅದಕ್ಕಿಂತ ಬೇಕಾವಷ್ಟು ಉದ್ದ ಅಗಲವಿರುವ ವಸ್ತ್ರಗಳನ್ನು ದಾನಮಾಡಬೇಕು.

## ಗ್ರಹಗಳ ಪೀಡಾಪರಿಹಾರಕ್ಕಾಗಿ ಮಾಡುವ ಧಾನ್ಯಗಳು ಹಾಗೂ ಇತರ ವಸ್ತುಗಳು

1) ರವಿಗೆ :— ಗೋದಿ ಅಥವಾ ಗೋದೀರವೆ, ದ್ರಾಕ್ಷೀಹಣ್ಣು, ಆಕಳು, ತಾಂಬೂಲ, ಕೆಂಪು ತಾವರೆ.

2) ಚಂದ್ರನಿಗೆ:— ಕಬ್ಬು, ಅಕ್ಕಿ, ಅಥವಾ ಬಾರ್ಲಿ, ಚಂದನ, ಹಾಲು ಬಿಳೀದಾಸಾಳದ ಹೂ ಹಾಗೂ ಸಣ್ಣ ಮಕ್ಕಳಿಗೆ ಭೋಜನ.

3) ಮಂಗಳ (ಕುಜ) ನಿಗೆ:— ಟಗರು, ಹಸಿ ಹಸಿ ಅಡಿಕೆ, ತೊಗರಿ ಬೇಳೆ, ಕೆಂಪುವಸ್ತ್ರ.

4) ಬುಧನಿಗೆ:– ಹಳದೀವಸ್ತ್ರ, ಕಿತ್ತಲೆಹಣ್ಣು, ಸಂಪಿಗೆ ಹೂ, ಹೆಸರುಕಾಳು

5) ಗುರುವಿಗೆ : ಬಂಗಾರದ ಬಣ್ಣದವಸ್ತ್ರ ಕಡಲೇಬೇಳೆ ಹಳದಿ

ಬಣ್ಣದ ವಸ್ತ್ರ ಇದ್ದರೂ ನಡೆಯುತ್ತದೆ ನೀರಲೀಹಣ್ಣು, ತಾವರೆ ಹೂ

6) ಶುಕ್ರನಿಗೆ:- ಅಲಸಂದಿ, ಅವರೇ ಧಾನ್ಯ, ಬಿಳೀವಸ್ತ್ರ, ಬೇಲದ ಹಣ್ಣು ಧಾಜೀ ಪುಷ್ಪ :

7) ಶನಿಗೆ : ಕಪ್ಪುವಸ್ತ್ರ ಕರೀಎಳ್ಳು ಜಾಜಿಕಾಯಿ ಮಲ್ಲಿಗೇಹೂ

8) ರಾಹುವಿಗೆ : ಉದ್ದುಧಾನ್ಯ, ಕಪ್ಪುವಸ್ತ್ರ, ತೆಂಗಿನಕಾಯಿ

9) ಕೇತುವಿಗೆ : ಬಣ್ಣ ಬಣ್ಣದ ವಸ್ತ್ರ ದಾಳಿಂಬೆ ಹಣ್ಣು, ಹುರಳಿ ಧಾನ್ಯ ಮಲ್ಲಿಗೆಪುಷ್ಪ.

ಹೀಗೆ ಮೇಲೆ ಬರೆದ ಧಾನ್ಯ, ವಸ್ತ್ರಾದಿಗಳನ್ನು ಆಯಾಗ್ರಹಗಳ ಪೀಡಾ ಪರಿಹಾರಕ್ಕಾಗಿ ಯಥಾಶಕ್ತಿ ದಾನಮಾಡಬೇಕು.

## ನವಗ್ರಹಗಳ ನವವೃಕ್ಷಗಳು

1) ಸೂರ್ಯ ಎಕ್ಕೆಗಿಡ 2) ಚಂದ್ರ ಮುತ್ತುಗಿಡ 3) ಮಂಗಳ (ಕುಜ) ಕಗ್ಗಲಗಿಡ 4) ಬುಧ ಉತ್ರಾಣಿ 5) ಗುರು ಅಶ್ವತ್ಥ 6) ಶುಕ್ರ ಅತ್ತೀಮರ, ಔದಂಬರ ವೃಕ್ಷ 7) ಶನಿ ಬನ್ನೀಮರ 8) ರಾಹು ಕರ್ಕ 9) ಕೇತು ಧರ್ಭ

ಹೀಗೆ ಮೇಲೆ ಬರೆದ ಆಯಾ ಗ್ರಹಗಳ ಪ್ರಸನ್ನತೆಗಾಗಿ ಆಯಾವೃಕ್ಷಗಳ ಹೆಸರನ್ನು ಬರೆದದ್ದು ಆಯಾವೃಕ್ಷಗಳ ಪೂಜೆ ಪ್ರದಕ್ಷಿಣೆ ಹಾಕಬೇಕು ಹಾಗೂ ಹೋಮಮಾಡುವಾಗ ಅರ್ಪಿಸುವ ಸಮಿತ್ತುಗಳಾಗಿರುತ್ತವೆ.



# ಪ್ರಥಮ ದಳ

## ಆರೋಗ್ಯ - ಪರಿಹಾರ

ಪರಿಹಾರ ಜ್ಯೋತಿಷ್ಯದ ಈ ಮೊದಲನೇ ಅಧ್ಯಾಯದಲ್ಲಿ ಆರೋಗ್ಯದ ಬಗೆಗೆ ಮೊದಲು ಪ್ರಸ್ತಾಪಿಸುತ್ತೇನೆ. ಈ ಅಧ್ಯಾಯಕ್ಕೆ ಏಕೆ ಪ್ರಥಮ ಪ್ರಾಶಸ್ತ್ಯವೆಂದರೆ ಜಾತಕನಿಗೆ ಆರೋಗ್ಯ ಭಾಗ್ಯ ಒಂದು ಲೋಪವಾದರೆ ಇನ್ನುಳಿದ ಭಾಗ್ಯ ಇದ್ದೂ ವ್ಯರ್ಥ ಸಲಹೆ ಕೇಳಲು ಬಂದವರು ಹೆಚ್ಚಾಗಿ ಆರೋಗ್ಯ ಅನಂತರಹಣಕಾಸು ಆ ಬಳಿಕ ಉದ್ಯೋಗ, ಶಿಕ್ಷಣ, ವಿವಾಹ ಇತ್ಯಾದಿ ಅಲ್ಲದೆ ನಾವು (ಜ್ಯೋತಿಷಿಗಳು) ಕೂಡ ಯಾರೊಬ್ಬ ಜಾತಕನ ಜಾತಕ ಪರಿಶೀಲಿಸುವಾಗ ಪ್ರಪಥಮ ಜಾತಕನ ಆರೋಗ್ಯದ ವಿಷಯವಾಗಿ ವಿವರಿಸುತ್ತೇವೆ.

ಇನ್ನು ಅವರು ತಮ್ಮ ಆರೋಗ್ಯದ ವಿಷಯವಾಗಿ ವಿಚಾರಿಸುವ ಪ್ರಶ್ನೆಗಳನ್ನು ಅವರ ಮಾತಿನಲ್ಲಿಯೇ ಓದಿರಿ. ಶಾಸ್ತ್ರಿಗಳೇ (ಜ್ಯೋತಿಷಿಗಳೇ) ನನ್ನ ಆರೋಗ್ಯ ಎಂದು ಸುಧಾರಿಸುತ್ತದೆ ? ನನ್ನ ರೋಗ ಗುಣವಾದೀತೆ ? ನಾನು ಗುಳಿಗೆ ನುಂಗಿ, ನುಂಗಿ ಔಷಧ ಕುಡಿದು ಕುಡಿದು ಮೈತುಂಬ ಸೂಜಿ ಚುಚ್ಚಿಸಿ, ಚುಚ್ಚಿಸಿಕೊಂಡು (ಇಂಜಕ್ಷನ್) ಸಾಕಾಗಿದೆ ಎಂದು ಕೆಲವರು ವಿಚಾರಿಸುತ್ತಿದ್ದರೆ ಕೆಲ ಜಾತಕರು ತಾವು ಚಿಕಿತ್ಸೆ ಪಡೆಯುತ್ತಿರುವ ಪದ್ಧತಿಯ ಬಗೆಗೆ (ವಿಧಾನ) ವಿಚಾರಿಸುತ್ತಾರೆ. ಅಲೋಪತಿ ಆಯಿತು ಆಯುರ್ವೇದ ಆಯಿತು ಹೋಮಿಯೋಪತಿ ಆಯಿತು. ರಕ್ತ, ಮಲ, ಮೂತ್ರ ತಪಾಸಣೆಯಾಯಿತು. ಫೋಟೋತೆಗೆಸಿದ್ದಾಯಿತು. ಅಂದರೆ ಎಕ್ಸರೆ ತೆಗೆಸಿದ್ದಾಯಿತು ಆದರೂ ರೋಗ ಗುಣಮುಖವಾಗಿಲ್ಲ, ಕೆಲವರು ಹಲ್ಲು ತೆಗೆಯಿಸಿರಿ ಎಂದರು ಹಲ್ಲುಗಳನ್ನು ತೆಗೆಸಿದ್ದಾಯಿತು ಆದರು ನನ್ನ ರೋಗ

ಗುಣವಾಗಿಲ್ಲ. ಇನ್ನು ಕೆಲವರು ಗಾಪಟೀಔಷದ ತೆಗೆದುಕೊಳ್ಳಲು ಹೇಳಿದರು ಅದನ್ನು ತೆಗೆದುಕೊಂಡರೂ ಗುಣವಾಗಿಲ್ಲ. ಇನ್ನು ಕೆಲವರು ಮನೆ ನಿಮಗೆ 'ಓವರ್' ಬಂದಿಲ್ಲ ಇದನ್ನು ಬಿಟ್ಟು ಬೇರೆ ಮನೆಗೆ ಪ್ರವೇಶಿಸಿರಿ ಎಂದರು ನಾವುಕಟ್ಟಿಸಿದ್ದ ಮನೆಬಿಟ್ಟು ಬಾಡಿಗೆ ಮನೆಗೆ ಹೋದರೂ ರೋಗಗುಣವಾಗಿಲ್ಲ. ಕೆಲವರು ಗ್ರಹಕಾಟವೆಂದರೂ ಗರಕಾಟವೆಂದರೂ ಮಾಟ ಮದ್ದು ಆಗಿದೆ ಯೆಂದರು ಶಾಂತಿ ಹೋಮ ಹವನ ಮಾಡಿಸಿದ್ದಾಯಿತು ಯಾರ್‍ಯಾರು ಏನೇನು ಸಲಹೆ ಮಾಡಿದ್ದರೋ ಎಲ್ಲವನ್ನು ಮಾಡಿದ್ದಾಯಿತು. ನಿಮ್ಮಲ್ಲಿ ಹೋಗಿ ವಿಚಾರಿಸಿ ಎಂದು ಅನೇಕರು ಹೇಳಿದ್ದಾರೆ ಅದ್ದರಿಂದ ನಿಮ್ಮಲ್ಲಿಗೆ ಬಂದಿದ್ದೇವೆ ಆದ್ದರಿಂದ ಖಚಾ ಖಂಡಿತವಾಗಿ ಹೇಳಿರಿ ಈಗ ತಗಲಿದ ರೋಗ ಗುಣಮುಖವಾಗುವುದೋ ಹೇಗೆ? ಒಂದು ವೇಳೆ ಗುಣಮುಖವಾಗದಿದ್ದಲ್ಲಿ ಹಾಗೆ ಹೇಳಿ ಮೃತ್ಯುಪತ್ರ ಮೊದಲಾದ ಎಲ್ಲ ಸಿದ್ಧತೆಮಾಡುತ್ತೇವೆ. ಇನ್ನೆಷ್ಟು ಕಾಲ ಅನುಭವಿಸಬೇಕು ? ಓಗೆ ರೋಗಿ ಹಾಗೂ ರೋಗದ ವಿಷಯವಾಗಿ ನಾವು ಪ್ರತಿನಿತ್ಯ ಇಂಥ ಪ್ರಶ್ನೆ ಸಮಸ್ಯಗಳಿಗೆ ಉತ್ತರ ಕೊಡಬೇಕಾಗುತ್ತದೆ.

ಜಾತಕನ ಜಾತಕ ದರ್ಶನದಿಂದ ಜಾತಕ ಪರಿಶೀಲನೆಯಿಂದ ಆತನ ಆರೋಗ್ಯ ಸ್ಥಿತಿಯ ಬಗೆಗೆ ಹಾಗೂ ಆಯುರ್ಮಾನದ ಬಗೆಗೆ ನಿರುಪಣೆ ಮಾಡಲು ಸಾಧ್ಯವಾಗಿದೆ. ಕೆಲ ಜಾತಕರು ಜನ್ಮತಃ ಸಧೃಡ ಪ್ರಕೃತಿಯುವರಿ ರುತ್ತಾರೆ ಅರ್ಥಾತ ಉತ್ತಮ ಆರೋಗ್ಯ ಭಾಗ್ಯವನ್ನು ಹೊಂದಿದವರಿರುತ್ತಾರೆ. ಆದರೆ ಕೆಲ ಜಾತಕರು ಸದಾ ರೋಗಪೀಡಿತ ನಿರಂತರ ಅನಾರೋಗ್ಯ ದೈಹಿಕ ದುರ್ಬಲತೆಗಳೇ ಪ್ರಮುಖ ಲಕ್ಷಣಗಳಾಗಿರುವುದು ಕಂಡುಬರುತ್ತದೆ. ಇದರಂತೆ ಕೆಲ ಜಾತಕರು ದೈಹಿಕವಾಗಿ ಸಧೃಡವಾಗಿದ್ದರೂ ಶತ್ರುಪೀಡೆ ಮಾಟ ಮದ್ದುಗಳ ಕಾಟ, ಭೂತ ಪಿಶಾಚಿಗಳಿಂದ ತೊಂದರೆ ವಾಹನಾದಿ ಅಪಘಾತಾದಿಗಳಿಂದಾಗಿ ನಿರಂತರ ತೊಂದರೆ ಅನುಭವಿಸಿರುತ್ತಾರೆ. ಇನ್ನು ಕೆಲಜಾತಕರು ಶಾರೀರಿಕ ಪೀಡೆಗಿಂತ ಮಾನಸಿಕ ಅಸ್ವಸ್ಥತೆಯೇ ಬಹಳವಿರುತ್ತದೆ. ಕೆಲವರು ಯಾವುದೊಂದು ವಿಷಯಕ್ಕೆ ಅತಿಯಾಗಿ ವಿಚಾರಮಾಡಿ ಚಿತ್ತಾ ಸ್ವಸ್ಥ್ಯವನ್ನು ಕಳೆದುಕೊಳ್ಳುತ್ತಾರೆ. ಇನ್ನು ಕೆಲವರು ವಿನಾಕಾರಣ

ಭಯ-ಭೀತಿಗೊಳಗಾಗಿ ಅಸುಖಿಗಳಾಗುತ್ತಾರೆ ಅಷ್ಟೇ ಅಲ್ಲ ಅವರನ್ನವಲಂಬಿಸಿದವರಿಗೂ ತೊಂದರೆ ಕೊಡುತ್ತಾರೆ. ಇನ್ನು ಕೆಲ ಜಾತಕರು ಬೇರೆಯವರ ಏಳಿಗೆ ಸಹನವಾಗದೆ ಅಸೂಹ್ಯ ದ್ವೇಷ ಸ್ವಭಾವಗಳಿಂದ ಚಿತ್ತ ಕ್ಷೋಭೆಗೊಳಗಾಗುತ್ತಾರೆ. ಅವರಲ್ಲಿಯೂ ನೆರೆಹೊರೆಯವರ, ಸಹೋದರ ಸಹೋದರಿಯರ [ಭಾಗಾದಿ] ಏಳಿಗೆ ಅಂತಸ್ತು ಶ್ರೀಮಂತಿಕೆ ವೈಭವೀ ಕೃತಿ ಜೀವನ ಇವರಿಗೆ ಸಹನವಾಗದೆ ಮನಸ್ವಾಸ್ಥ್ಯವನ್ನು ಕಳೆದುಕೊಂಡು ತನ್ಮೂಲಕ ಶಾರೀರಿಕ ಪೀಡೆಯನ್ನು ಆಹ್ವಾನಿಸುತ್ತಾರೆ. ಕೆಲ ಜಾತಕರು ಜೀವನದ ಬಹುಭಾಗ ಸಧೃಡ ಪ್ರಕೃತಿಯವರಿದ್ದು ವೃದ್ಧಾಪ್ಯ ಸಮಯದಲ್ಲಿ ಮಾತ್ರ ರೋಗಪೀಡಿತರಾಗಿರುತ್ತಾರೆ. ಮತ್ತೆ ಕೆಲ ಜಾತಕರು ವರುಷದ ಕೆಲ ಅವಧಿಯವರೆಗೆ ಮಾತ್ರ ಅತೀವ ಅನಾರೋಗ್ಯವನ್ನು ಎದುರಿಸುತ್ತಾರೆ. ಇನ್ನು ಕೆಲ ಜಾತಕರು ಪ್ರತಿ 4 ವರುಷಕ್ಕೊಮ್ಮೆ ಕೆಲವರು 12 ವರುಷಕ್ಕೊಮ್ಮೆ ಕೆಲವರು 22 ವರುಷಕ್ಕೊಮ್ಮೆ ರೋಗಪೀಡಿತರಾಗುತ್ತಾರೆ. ಆದುದರಿಂದ ಯಾವ ಜಾತಕನು ಸಧೃಡ ಪ್ರಕೃತಿಯವನು ಯಾವ ಜಾತಕನು ಸದಾ ರೋಗ ಪೀಡಿತನಿರುತ್ತಾನೆ ಯಾವ ಜಾತಕನಿಗೆ ಶತ್ರು ಪೀಡೆ ಮಾಟ-ಮದ್ದುಗಳ ಕಾಟ ಭೂತ ಪಿಶಾಚಿಗಳ ಕಾಟ, ಯಾವ ಜಾತಕನಿಗೆ ವಾಹನಾದಿ ಅಪಘಾತ ಬವಳ ಈ ಎಲ್ಲ ಸನ್ನಿವೇಶಗಳ ಬಗೆಗೆ ಯಾವ ಯಾವ ಮುಂಜಾಗ್ರತೆ ವಹಿಸಬೇಕು ಯಾವ ಪರಿಹಾರ ಕಂಡುಕೊಳ್ಳಬೇಕು. ಫಲಜ್ಯೋತಿಷ್ಯ ಶಾಸ್ತ್ರದ ಸಂಶೋಧನೆಯ ಮೂಲಕ 40 ವರುಷಗಳ ವೃತ್ತಿ ಜೀವನ ಸಾವಿರಾರು ಜಾತಕಗಳ ಅಧ್ಯಯನದ ಮೂಲಕ ಬಂದ ಅನುಭವದ ಮೂಲಕ ಈ ಹೊಸ ಪ್ರಯೋಗದಿಂದ ಈ ಅನಾಹುತಗಳಿಂದ ಆಗಬಹುದಾದ ವಿಪರೀತ ಪರಿಣಾಮ ತಪ್ಪಿಸಲು ನಿವಾರಿಸಲು ಸಾಧ್ಯವಾಗಬಹುದೆಂಬ ಕಾರಣದಿಂದ ಆರೋಗ್ಯ-ಪರಿಹಾರದ ಈ ಕೃತಿಯ ಪ್ರಥಮ ದಳದಾಗಿ ಇಲ್ಲಿ ಮೂಡಿ ಬಂದಿದೆ.

ಯಾರೊಬ್ಬರ ಆರೋಗ್ಯದ ವಿಷಯ ಕುರಿತು ಮುಂಜಾಗ್ರತೆ ಹಾಗೂ ಪರಿಹಾರದ ಕ್ರಮಗಳನ್ನು ಸೂಚಿಸುವ ಪೂರ್ವದಲ್ಲಿ ಅವರ ಜಾತಕವನ್ನು ಕೂಲಂಕುಷವಾಗಿ ಪರಿಶೀಲಿಸಬೇಕಾಗುತ್ತದೆ. ಆರೋಗ್ಯ ಹಾಗೂ ಆಯು-

ಮಾನವರ ವಿಷಯವಾಗಿ ವಿಚಾರಿಸುವಾಗ ಅದರಲ್ಲಿಯೂ ಆರೋಗ್ಯದ ವಿಷಯವಾಗಿ ವಿಚಾರಿಸುವಾಗ ಅನೇಕ ಸಂಗತಿಗಳನ್ನು ಪರಿಶೀಲಿಸಬೇಕಾಗುತ್ತದೆ. ಪ್ರಮುಖವಾಗಿ ಈ ಕೆಳಗೆ ಬರೆದ ಎಂಟು ಸಂಗತಿಗಳನ್ನು ಗಣನೆಗೆ ತೆಗೆದುಕೊಳ್ಳಬೇಕು. ಅವುಗಳು ಹೀಗಿವೆ 1) ಜಾತಕನ ಲಗ್ನದಲ್ಲಿರುವ ಗ್ರಹಗಳ ಬಲಾಬಲ (ತನುಸ್ಥಾನ) ಹಾಗೂ ಲಗ್ನೇಶನ ಬಲಾಬಲ 2) ಜಾತಕನ ಷಷ್ಠಸ್ಥಾನದಲ್ಲಿರುವ ಗ್ರಹಗಳ ಬಲಾಬಲ ಹಾಗೂ ಷಷ್ಠೇಶನ ಬಲಾಬಲ 3) ಜಾತಕನ ಅಷ್ಟಮಸ್ಥಾನದಲ್ಲಿರುವ ಗ್ರಹಗಳ ಬಲಾಬಲ ಹಾಗೂ ಅಷ್ಟಮೇಶನ ಬಲಾಬಲ. 4) ಜಾತಕದಲ್ಲಿಯ ಸೂರ್ಯನ ಬಲಾಬಲ 5) ಜಾತಕದಲ್ಲಿಯ ಚಂದ್ರನ ಬಲಾಬಲ. 6) ಜಾತಕದಲ್ಲಿಯ ಶುಭ–ಅಶುಭ ಯೋಗಗಳ ವಿಚಾರ 7) ಗೋಚರೀ ಗ್ರಹಗಳ ಪರಿಭ್ರಮಣದ ಪ್ರಭಾವ ಹಾಗೂ ಪರಿಣಾಮ ಹಾಗೂ ದಶಾ ಅಂತರದಶಗಳ ಪರಿಣಾಮ 8) ಜಾತಕನ ಜನನ ಸಮಯದಲ್ಲಿಯ ನಕ್ಷತ್ರಾದಿ ದೋಷಗಳ ವಿಚಾರ ಹೀಗೆ ಈ ಎಂಟು ಸಂಗತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಬೇಕಾಗುತ್ತದೆ ಮೇಲೆ ಬರೆದ ಆ ಎಲ್ಲ ಎಂಟು ಸಂಗತಿಗಳು ಪೂರಕವೂ ಶುಭವೂ ಇದ್ದು ಜಾತಕನು ಆರೋಗ್ಯ ದೃಷ್ಟಿಯಿಂದ ಸುದೈವಿ ಇದ್ದು, ಸಧೃಡ ಪ್ರಕೃತಿಯವನು ಇರುವುನಲ್ಲದೇ ಆಯುಷ್ಯದ ಬಹುಭಾಗ ನಿರೋಗಿ ಇದ್ದು, ದೀರ್ಘಾಯುವಿರುತ್ತಾನೆ.ಜಾತಸ್ಯ ಮರಣಂ ಧ್ರುವ ಎಂಬಂತೆ ವೃದ್ಧಾಪ್ಯದ ಮೂಲಕ ವಿಧಿವಶನಾಗುತ್ತಾನೆ. ಇದರಂತೆ ಮೇಲೆ ಬರೆದ ಎಂಟು ಸಂಗತಿಗಳು ಪ್ರತಿಕೂಲವಿದ್ದರೆ ಇಂಥ ಜಾತಕನು ಸದಾ ರೋಗ ಪೀಡಿತ ನಿದ್ದು ಬಾಲಾರಿಷ್ಟ ಅಶುಭ ಯೋಗದಿಂದಾಗಲಿ ಅಪಘಾತ, ಆತ್ಮ ಹತ್ಯೆಗಳಂಥ ಅಶುಭಯೋಗಗಳಿಂದಾಗಲಿ ದುರ್ಮರಣಕ್ಕೆ ಈಡಾಗಬಹುದಾಗಿದೆ. ಇದರಂತೆ ಮೇಲೆ ಬರೆದ ಎಂಟು ಸಂಗತಿಗಳಲ್ಲಿ ಯಾವ ಯಾವ ಜಾತಕನಿಗೆ ಯಾವ ಯಾವ ಸಂಗತಿಗಳು ಪೂರಕವಿರುತ್ತವೆ. ಯಾವ ಯಾವ ಸಂಗತಿಗಳು ಪ್ರತಿಕೂಲವಿರುತ್ತವೆ. ಎಂಬುದನ್ನು ಅವರ ಜಾತಕದ ಆಧಾರದ ಮೇಲಿಂದ ಖಚಿತ ಪಡಿಸಿಕೊಂಡು ಅದಕ್ಕೆ ಯಾವ ಯಾವ ಮುಂಜಾಗ್ರತೆ ಕ್ರಮತೆಗೆದುಕೊಳ್ಳಬೇಕು ಯಾವ ಪರಿಹಾರ ಕ್ರಮ ಕೈಕೊಳ್ಳಬೇಕು ಎಂಬುದನ್ನು ಪರಿಶೀಲಿಸುವಾ.

1) **ತನು ಸ್ಥಾನದ (ಲಗ್ನ) ಮೇಲಿಂದ:-** ಜಾತಕದ ತನು ಸ್ಥಾನದಿಂದ ರೋಗದ ವೈಶಿಷ್ಟ್ಯಕ್ಕಿಂತ ರೋಗಿಯ ವಿಷಯವಾಗಿಯೇ ಹೆಚ್ಚು ವಿವರಿಸಲು ಬರುತ್ತದೆ. ಅಂದರೆ ಲಗ್ನದಲ್ಲಿರುವ ಗ್ರಹಗಳ ಮೇಲಿಂದಲೂ ಲಗ್ನೇಶ ಮೇಲಿಂದಲೂ ಭಿನ್ನ ಭಿನ್ನ ವಿಷಯಗಳು ತಿಳಿಯುತ್ತದೆ. ಲಗ್ನದಲ್ಲಿರುವ ಗ್ರಹಗಳು ಆಯಾ ರಾಶಿಯ ಗುಣಧರ್ಮದಂತೆ ಫಲಗಳನ್ನು ಕೊಡುವವು ಇದರಂತೆ ಲಗ್ನೇಶನು ಕೂಡ ಯಾವ ರಾಶಿಯಲ್ಲಿರುವನೋ ಆ ರಾಶಿಯ ಗುಣಧರ್ಮದಂತೆ ಫಲಗಳನ್ನು ಕೊಡುವನು ಜಾತಕನ ನೈಸರ್ಗಿಕ ಜೀವನಶಕ್ತಿ (Vital) ಹೇಗಿದೆ ? ರೋಗಿಯ ಪ್ರತಿಕಾರ ಶಕ್ತಿ ಹೇಗಿದೆ. ವಾತ, ಪಿತ್ತ, ಕಫಾದಿ ಪ್ರಕೃತಿಯ ಗುಣಧರ್ಮ ಯಾವುದು ? ಸಾತ್ವಿಕ, ರಾಜಸ, ತಾಮಸ ಮೊದಲಾದ ಮನೋಧರ್ಮ ಗುಣಧರ್ಮ ಯಾವುದು? ಕಾಮ ಕ್ರೋಧಿವಾದಿ ಸ್ವಭಾವಗಳಾವವು. ಈ ಎಲ್ಲ ಸಂಗತಿಗಳು ಜಾತಕದ ತಾನುಸ್ಥಾನದಿಂದ ಅಂದರೆ ಲಗ್ನದಲ್ಲಿರುವ ಗ್ರಹ ಹಾಗೂ ಲಗ್ನಾಧೀಶನ ಬಲಾಬಲದ ಮೇಲೆ ಕಂಡು ಬರುತ್ತದೆ.

ಜಾತಕನ ಜಾತಕದಲ್ಲಿ ತನು ಸ್ಥಾನದಲ್ಲಿ ಅಂದರೆ ಲಗ್ನದಲ್ಲಿ ಬಲಾಢ್ಯ ಗ್ರಹ ಅಥವಾ ಬಲಾಢ್ಯ ಗ್ರಹಗಳಿದ್ದು, ಲಗ್ನೇಶನು ಸಹ ಬಲಾಢ್ಯನಿದ್ದರೆ ಇಂಥ ವ್ಯಕ್ತಿಗಳು (ಇಂಥ ಜಾತಕರು) ಸದೃಢ ಪ್ರಕೃತಿಯುಳ್ಳವರಿರುತ್ತಿದ್ದು (General health condition is Good) ಹಾಗೂ ಅವರ ನೈಸರ್ಗಿಕ ಜೀವನಶಕ್ತಿ (Vital Power) ಸಹ ಉತ್ತಮವಿರುತ್ತದೆ. ಲಗ್ನದಲ್ಲಿ ದುರ್ಬಲ ನಿರ್ಬಲ ಗ್ರಹ ಅಥವಾ ಗ್ರಹಗಳಿದ್ದು, ಲಗ್ನೇಶನು ದುರ್ಬಲ ನಿರ್ಬಲನಿದ್ದ ಜಾತಕನು ಸದಾ ರೋಗ ಪೀಡಿತನಿರುತ್ತಾನೆ. ದುರ್ಬಲ ನಿರ್ಬಲವೆಂದರೆ ಶತ್ರುದೃಷ್ಟಿತ, ಶತ್ರುಕ್ಷೇತ್ರ, ಶತ್ರುಮಧ್ಯ, ನೀಚ ಅಸ್ತಾಂಗತ ವೃದ್ಧಾಪ್ಯ ಬಾಲ್ಯಾವಸ್ಥೆ ಪಾಪಗ್ರಹ ಮಧ್ಯ ವಕ್ರೀ ಇವೇ ಮೊದಲಾದ ಅವಸ್ಥೆಗಳಿದ್ದರೆ ದುರ್ಬಲ ನಿರ್ಬಲರಿರುತ್ತಾರೆ.

ಲಗ್ನದಲ್ಲಿ ಬಲಾಢ್ಯ ಗ್ರಹ ಅಥವಾ ಗ್ರಹಗಳಿದ್ದು, ಲಗ್ನೇಶನು ದುರ್ಬಲ

ನಿರ್ಬಲನಿದ್ದ ಜಾತಕನಿಗೆ ಪ್ರತಿನಾಲ್ಕು ವರುಷಕ್ಕೊಮ್ಮೆ ಅಥವಾ ಸಾಡೇಸಾತಿ ಪಂಚಮಾಷ್ಟಮಶನಿ ಹಾಗೂ ಗೋಚರಿ ಗುರುವು 4ನೇ 6ನೇ 8ನೇ 12ನೇಯವನಾಗಿ ಬಂದಾಗ ಕೆಲ ಅವಧಿಯವರೆಗೆ ರೋಗಪೀಡಿತರಾಗುತ್ತಾರೆ. ಶಾರೀರಿಕ ಪೀಡೆ ಉಂಟಾಗುತ್ತದೆ. ಇದರಂತೆ ಲಗ್ನದಲ್ಲಿ ದುರ್ಬಲ, ನಿರ್ಬಲ ಗ್ರಹ ಅಥವಾ ಗ್ರಹಗಳಿದ್ದು, ಲಗ್ನೇಶನು ಬಲಾಢ್ಯನಿದ್ದ ಜಾತಕನಿಗೆ ಕೂಡ ಮೇಲೆ ಬರೆದಂತೆ ಫಲಗಳು ಸಿಗುತ್ತವೆ. ಅಂದರೆ ಪ್ರತಿ ನಾಲ್ಕು ವರುಷಕ್ಕೊಮ್ಮೆ ಅಥವಾ ಸಾಡೇಸಾತಿ ಪಂಚಮಾಷ್ಟಮಶನಿ ಹಾಗೂ ಗೋಚರೀ ಗುರುವು 4ನೇ 6ನೇ 8ನೇ 12ನೇಯವನಾಗಿ ಬಂದಾಗ ಕೆಲ ಅವಧಿಯವರೆಗೆ ರೋಗಪೀಡಿತರಾಗುತ್ತಾರೆ. ಶಾರೀರಿಕ ಪೀಡೆ ಉಂಟಾಗುತ್ತದೆ. ಈ ಎರಡು ಸಂಗತಿಗಳಲ್ಲಿ ಲಗ್ನದಲ್ಲಿಯ ಗ್ರಹದ ಅಥವಾ ಗ್ರಹಗಳ ಬಲಾಬಲಕ್ಕಿಂತ ಲಗ್ನೇಶನ ಬಲಾಬಲದ ಬಗೆಗೆ ಹೆಚ್ಚು ಪರಿಣಾಮ ಉಂಟುಮಾಡುತ್ತದೆ. ಕಾರಣ **ಸ್ಥಾನದಲ್ಲಿರುವ ಗ್ರಹಗಳಿಗಿಂತ ಸ್ಥಾನಾಧೀಶರ ಬಲಾಬಲದ ಪ್ರಭಾವ ಪರಿಣಾಮವು** ಹೆಚ್ಚು ಇರುತ್ತದೆ. ಅರ್ಥಾತ್ ಯಾವುದೇ ಲಗ್ನದ ಲಗ್ನೇಶನು ದುರ್ಬಲ, ನಿರ್ಬಲವಿದ್ದರೆ ಆರೋಗ್ಯ ದೃಷ್ಟಿಯಿಂದ ಹೆಚ್ಚು ಹಾನಿಕಾರಕವು.

ಜಾತಕದ ತನುಸ್ಥಾನದಿಂದ ಅನೇಕ ಸಂಗತಿಗಳು ತಿಳಿಯುತ್ತವೆ. ಉದಾ:— ಯಾರೊಬ್ಬರ ಸ್ವಭಾವ,ಶೀಲ, ಮನಸ್ಸು, ಸೌಂದರ್ಯ, ವ್ಯಕ್ತಿತ್ವ ಇತ್ಯಾದಿ ಪ್ರಸ್ತುತ ಈ ಗ್ರಂಥದ ಅಧ್ಯಾಯದಲ್ಲಿ ಆರೋಗ್ಯ ದೃಷ್ಟಿಯಿಂದ ಮಾತ್ರ ಇಲ್ಲಿ ವಿವರಿಸಲಾಗಿದೆ.

2) **ಷಷ್ಠ ಸ್ಥಾನ :—** ಯಾರೊಬ್ಬ ಜಾತಕನ ರೋಗದ ವಿಷಯವಾಗಿ ಹಾಗೂ ರೋಗ ನಿಧಾನ ಮಾಡುವಾಗ ಷಷ್ಠಸ್ಥಾನವನ್ನು ಪ್ರಮುಖವಾಗಿ ಇಟ್ಟುಕೊಂಡು ನಿರ್ಣಯಿಸಬೇಕಾಗುತ್ತದೆ. ಅಂತೆಯೇ ಷಷ್ಠಸ್ಥಾನಕ್ಕೆ ರೋಗ ಸ್ಥಾನವೆನ್ನುತ್ತಾರೆ. ಅದರಲ್ಲಿಯೂ ತೀವ್ರಬಾಧೆಯ (Acutediseases) ಎಲ್ಲ ರೋಗಗಳಿಗೂ ಷಷ್ಠಸ್ಥಾನವೇ ಕಾರಕವು ವಿಶೇಷವಾಗಿ ಅಗ್ನಿಮಾಂದ್ಯ, ಅಪಚನ, ಅತಿಸಾರ, ಸಂಗ್ರಹಣಿ, ಇವೇ ಮೊದಲಾದ ಎಲ್ಲ ಪ್ರಕಾರದ

ತೀವ್ರಬಾಧೆಯ ರೋಗಗಳಸ್ಥಾನವಿರುತ್ತದೆ. ಇದಲ್ಲದೆ ಸಣ್ಣಕರಳು ಪಕ್ವಾಶಯ ಆಂತ್ರಿಕದಲ್ಲಿಯ ಅಸ್ತಿಗಳು ಕರುಳಿನಲ್ಲಿರುವ ತಿರ್ಯಕ್ ಸ್ನಾಯುಗಳು ಯಕೃತ್ತದಲ್ಲಿಯ ಮತ್ತು ನಾಭಿ ಭಾಗದಲ್ಲಿರುವ ಮತ್ತು ಪಕ್ವಶಾಯಗತವಾಗಿರುವ ಶಿರಗಳು ಜಠರಾಂತಗತ ಧಮನಿಗಳು ಈ ಎಲ್ಲ ದೇಹದಲ್ಲಿರುವ ಅವಯವಗಳನ್ನು ಈ ಸ್ಥಾನದಿಂದಲೇ ನೋಡುತ್ತಾರೆ.

ದೀರ್ಘಾವಧಿ ರೋಗಗಳ ವಿಷಯವಾಗಿ ಚತುರ್ಥ, ದ್ವಾದಶಸ್ಥಾನಗಳನ್ನು ಅಪಘಾತ, ಆತ್ಮಹತ್ಯೆ, ಮೊದಲಾದ ದುರ್ಮರಣಗಳಿಂದ ತೀವ್ರ ಮರಣ ಸೂಚಕ ಸ್ಥಾನವಾದ ಅಷ್ಟಮಸ್ಥಾನವನ್ನು ಸ್ವಭಾವ ಜನ್ಮದಿಂದ ರೋಗಗಳನ್ನು ನಿರ್ಮಾಣಮಾಡಿಕೊಳ್ಳುವ ತನು ಸ್ಥಾನವನ್ನು ಹೇಗೆ ಪರಿಶೀಲಿಸುತ್ತಾರೊ ಹಾಗೆ ತೀವ್ರಬಾಧೆಯ ರೋಗಗಳ ಸ್ಥಾನವಾದ ಷಷ್ಠಸ್ಥಾನವು ದೂಷಿತರಿರದೇ ಯಾರೂ ಮೇಲಿಂದ ಮೇಲೆ ಬೇನೆಗೆ ತುತ್ತಾಗರು ಅದು ಅಲ್ಲದೇ ಹೆಸರೇ ರೋಗಸ್ಥಾನ ಆದುದರಿಂದ ಷಷ್ಠಸ್ಥಾನದೊಂದಿಗೆ ಇನ್ನುಳಿದ ಸ್ಥಾನಗಳ ತುಲನಾತ್ಮಕವಾಗಿ ಪರಿಶೀಲಿಸ ಬೇಕಾಗುತ್ತದೆ. ಆದುದರಿಂದ ಷಷ್ಠ ಸ್ಥಾನದಲ್ಲಿರುವ ಗ್ರಹ ಇಲ್ಲವೇ ಗ್ರಹಗಳು ಬಲಾಢ್ಯರಿದ್ದು ಷಷ್ಠೇಶನು ಬಲಾಢ್ಯನಿರುವ ಜಾತಕನು ನಿರೋಗಿ ಇರುತ್ತಾನೆ ಹಾಗೂ ಇವರಿಗೆ ತೀವ್ರ ಬಾಧೆಯ ರೋಗಗಳು ಬರುವುದು ಕಡಿಮೆ. ಆದರೆ ಷಷ್ಠಸ್ಥಾನದಲ್ಲಿ ದುರ್ಬಲ, ನಿರ್ಬಲ ಗ್ರಹ ಇಲ್ಲವೆ ಗ್ರಹಗಳಷ್ಟು ಷಷ್ಠೇಶನು ಸಹ ದುರ್ಬಲ. ನಿರ್ಬಲನಿದ್ದ ಜಾತಕನು ಸದಾರೋಗ ಪೀಡಿತ ನಿರುತ್ತಾನೆ ಹಾಗೂ ಇವರಿಗೆ ತೀವ್ರಬಾಧೆಯ ರೋಗಗಳು ತೀವ್ರವಾಗಿ ಅಂಟಿ ಕೊಳ್ಳುತ್ತವೆ.

ಷಷ್ಠಸ್ಥಾನದಲ್ಲಿ ಬಲಾಢ್ಯಗ್ರಹ ಇಲ್ಲವೇ ಗ್ರಹಗಳಿದ್ದು, ಷಷ್ಠೇಶ ನಿರ್ಬಲ. ದುರ್ಬಲನಿದ್ದ ಜಾತಕನಿಗೆ ಪ್ರತಿ 4 ವರುಷಕ್ಕೊಮ್ಮೆ 12 ವರುಷಕ್ಕೊಮ್ಮೆ ಇಲ್ಲವೆ ಸಾಡೇಸಾತಿ ಹಾಗೂ ಪಂಚಮಾಷ್ಟಮ ಗೋಚರಿ ಶನಿಯ ಪರಿಭ್ರಮಣ ವಿರುವಾಗ ಇದರಂತೆ ಗೋಚರಿ ಗುರುವು 4ನೇ 6ನೇ 8ನೇ 12ರಲ್ಲಿ ಬಂದಾಗ ಕೆಲ ಅವಧಿಯವರೆಗೆ ಶಾರೀರಿಕ ಪೀಡೆ ಉಂಟಾಗುತ್ತದೆ. ಇದರಂತೆ ಷಷ್ಠಸ್ಥಾನದಲ್ಲಿ ದುರ್ಬಲ ನಿರ್ಬಲ ಗ್ರಹ ಇಲ್ಲವೆ ಗ್ರಹಗಳಿದ್ದು,

ಷಷ್ಠೇಶ ಬಲಾಢ್ಯನಿದ್ದ ಜಾತಕನಿಗೆ ಮೇಲೆ ಬರೆದಂತೆ ಫಲಸಿಗುತ್ತವೆ. ಅಂದರೆ ಪ್ರತಿ4 ವರುಷಕ್ಕೊಮ್ಮೆ 12 ವರುಷಕ್ಕೊಮ್ಮೆ ಸಾಡೇಸಾತಿ ಹಾಗೂ ಪಂಚಮಾಷ್ಟಮಾ ಶನಿಯು ಗೋಚರಿ ಪರಿಭ್ರಮಣ ಕಾಲಕ್ಕೆ ಹಾಗೂ ಗೋಚರಿ ಗುರುವು 4ನೇ 6ನೇ 8ನೇ 12ನೇ ಯುವನಾಗಿ ಬಂದಾಗ ಕೆಲ ಅವಧಿಯವರೆಗೆ ಶಾರೀರಿಕ ಪೀಡೆ ಉಂಟಾಗುತ್ತದೆ.

ಯಾವ ಪ್ರಕಾರದ ರೋಗ ಬರಬಹುದೆಂಬುದರ ಸುಧೀರ್ಘ ವಿವರಣೆಯು ನಾವು ಬರೆದು ಪ್ರಕಟಿಸಿದ "**ಆರೋಗ್ಯ ಜ್ಯೋತಿಷ್ಯ**" ಗ್ರಂಥದಲ್ಲಿ ವಿವರಿಸಲಾಗಿದೆ. ಉದಾಹರಣೆಗೆ ಚಂದ್ರನು ಷಷ್ಠೇಶನಾಗಿ ದುರ್ಬಲ, ನಿರ್ಬಲನಿದ್ದ ಜಾತಕನಿಗೆ ಕಫ ಪ್ರಧಾನವಾದ ರೋಗಗಳು ಹಾಗೂ ಶರೀರದಲ್ಲಿಯ ಯಾವ ಯಾವ ಅವಯವಗಳ ಮೇಲೆ ಚಂದ್ರನ ಆಧಿಪತ್ಯವಿರುವುದೋ ಆ ಅವಯವಗಳಿಗೆ ಸಂಬಂಧಿಸಿದ ರೋಗಗಳು ಅಂಟಿಕೊಳ್ಳುವವು. ಇದರಂತೆ ಚಿಕ್ಕಮಕ್ಕಳಿಗೆ ಬರುವ ರೋಗಗಳು ಸ್ತ್ರೀಯರಿಗೆ ಬರುವ ರೋಗಗಳು ಕೂಡ ಷಷ್ಠೇಶನಾದ ಚಂದ್ರನು ದುರ್ಬಲ ನಿರ್ಬಲನಿದ್ದರೆ ಅಂಟಿಕೊಳ್ಳುವವು. ಹೀಗೆ ಷಷ್ಠದಲ್ಲಿರುವ ದುರ್ಬಲ, ನಿರ್ಬಲ ಗ್ರಹಗಳಿಗೆ ಸಂಬಂಧಿಸಿದ ಹಾಗೂ ಷಷ್ಠೇಶ ದುರ್ಬಲ ನಿರ್ಬಲನಿರುವ ಗ್ರಹಗಳಿಗೆ ಸಂಬಂಧಿಸಿದ ರೋಗಗಳು ತಗಲುವವು.

3) **ಅಷ್ಟಮಸ್ಥಾನ :—** ಅಷ್ಟಮಸ್ಥಾನವಿದು ಮೃತ್ಯುಸ್ಥಾನವಿರುತ್ತದೆ. ಎಲ್ಲ ಪ್ರಕಾರದ ದುರ್ಮರಣಕಾರಕ ಸ್ಥಾನವು (Accidental deaths) ಹೌದು ದುರ್ಮರಣದಲ್ಲಿ ಕೂಡ ಮೂರು ಪ್ರಕಾರಗಳಿವೆ 1) ಅಪಘಾತ 2) ಆತ್ಮಹತ್ತೆ 3) ಕೊಲೆ ದುರ್ಮರಣಗಳಲ್ಲಿಯೂ ಅನೇಕ ಪ್ರಕಾರಗಳಿವೆ. ಇದರಂತೆ ಆತ್ಮಹತ್ಯೆಯಲ್ಲಿಯೂ ಕೊಲೆಗಳಲ್ಲಿ ಅನೇಕ ಪ್ರಕಾರಗಳಿವೆ. ಈ ಎಲ್ಲ ವಿಷಯಗಳ ವಿವರಣೆ ಇಲ್ಲಿ ವಿಶ್ಲೇಶಿಸುವದಿಲ್ಲ ಅನಗತ್ಯ ಏಕೆಂದರೆ ಈ ಎಲ್ಲ ವಿಷಯಗಳ ಸುಧೀರ್ಘ ವಿವರಣೆ ನಮ್ಮ ಆರೋಗ್ಯ ಜ್ಯೋತಿಷ್ಯ ಗ್ರಂಥದಲ್ಲಿದೆ.

ಅಷ್ಟಮ ಸ್ಥಾನವು ತೀವ್ರ ಮರಣ ಸೂಚಕ ರೋಗಗಳ ಸ್ಥಾನವೂ ಹೌದು ಅಲ್ಲದೇ ಪ್ಲೇಗು, ಕಾಲರಾ ಮೊದಲಾದ ಸಾಂಸರ್ಗಿಕ ರೋಗಗಳ

ಸ್ಥಾನವೂ ಹೌದು. ಎಲ್ಲಕ್ಕಿಂತ ಮುಖ್ಯ ವಿಷಯವೇನೆಂದರೆ ಅಷ್ಟಮ ಸ್ಥಾನವಿದು ಆಯುರ್ಮಾನ, ಆಯುರ್ದಾಯ ಸ್ಥಾನವಿರುತ್ತದೆ. (Life Span) ಯಾರೊಬ್ಬರ ಆಯುರ್ದಾಯದ ಬಗೆಗೆ ವಿಚಾರಿಸುವಾಗ ನಾವು ಸ್ಥೂಲವಾಗಿ ಮೂರು ರೀತಿಯಿಂದ ವಿಂಗಡಿಸುತ್ತೇವೆ. 1. ಅಲ್ಪಾಯು 2) ಮಧ್ಯಮಾಯು 3) ದೀರ್ಘಾಯು.

1) ಅಲ್ಪಾಯುವೇಂದರೆ 8ನೇ ವಯಸ್ಸಿನಿಂದ 40 ನೇಯ ವಯಸ್ಸಿನವರೆಗೆ 2) ಮಧ್ಯಮಾಯುವೆಂದರೆ 41 ನೇ ವಯಸ್ಸಿನಿಂದ 70 ರ ವಯಸ್ಸಿನವರಗೆ 3) ದೀರ್ಘಾಯುವೆಂದರೆ 71 ನೇ ವಯಸ್ಸಿನಿಂದ 120 ವರುಷದವರೆಗೆ ಜನನದಿಂದ 8 ವರುಷದವರೆಗೆ ಬಾಲಾರಿಷ್ಟ ಯೋಗವಿರುವುದರಿಂದ ಎಂಟನೇ ವಯಸ್ಸಿನ ಮೇಲೆಯೇ ಆಯುರ್ಮಾನದ ವಿಚಾರ ಮಾಡುತ್ತೇವೆ ಹಾಗೂ ಎಂಟನೇ ವಯಸ್ಸಿಗೆ ಉಪನಯನ (ಮುಂಜಿ) ಸಂಸ್ಕಾರ ಕೈಕೊಳ್ಳುತ್ತಾರೆ.

ಅಷ್ಟಮ ಸ್ಥಾನದಲ್ಲಿ ಬಲಾಢ್ಯಗ್ರಹ, ಇಲ್ಲವೇ ಬಲಾಢ್ಯ ಗ್ರಹಗಳಿದ್ದು, ಅಷ್ಟಮೇಶನೂ ಬಲಾಢ್ಯನಿದ್ದ ಜಾತಕರು ದೀರ್ಘಾಯುಗಳಾಗಿರುತ್ತಾರೆ. ಹಾಗೂ ಇವರಿಗೆ ಸಾಂಸರ್ಗಿಕ ರೋಗಗಳಾಗಲೀ ತೀವ್ರ ಮರಣ ಸೂಚಕ ರೋಗಗಳಾಗಲೀ ತಾಕುವದಿಲ್ಲ ಇವರ ವಿರುದ್ಧವೆಂದರೆ ಅಷ್ಟಮಸ್ಥಾನದಲ್ಲಿ ದುರ್ಬಲ, ನಿರ್ಬಲ ಗ್ರಹ ಇಲ್ಲವೇ ಗ್ರಹಗಳಿದ್ದು ಅಷ್ಟಮೇಶನೂ ಕೂಡ ದುರ್ಬಲ, ನಿರ್ಬಲನಿದ್ದ ಜಾತಕರು ಅಲ್ಪಾಯುಗಳಿರುತ್ತಾರೆ.

ಅಷ್ಟಮಸ್ಥಾನದಲ್ಲಿ ದುರ್ಬಲ, ನಿರ್ಬಲ, ಗ್ರಹಗಳಿದ್ದು, ಅಷ್ಟಮೇಶ ಮಾತ್ರ ಬಲಾಢ್ಯನಿದ್ದ ಜಾತಕರು ಮಧ್ಯಮಾಯುಗಳಿರುತ್ತಾರೆ. ಇದರಂತೆ ಅಷ್ಟಮ ಸ್ಥಾನದಲ್ಲಿ ಬಲಾಢ್ಯ ಗ್ರಹ ಇಲ್ಲವೇ ಗ್ರಹಗಳಿದ್ದು, ಅಷ್ಟಮೇಶನು ಮಾತ್ರ ದುರ್ಬಲನಿದ್ದರೆ ಇಂಥ ಜಾತಕರು ಮಧ್ಯಮಾಯುಗಳೇನೋ ಇರುತ್ತಾರೆ. ಆದರೆ ತೀವ್ರ ಮರಣ ಸೂಚಕ ರೋಗಗಳಾಗಲೀ ಸಾಂಸರ್ಗಿಕ ರೋಗಗಳಾಗಲಿ ತಾಕುವ ಸಂಭವವಿದೆ ಅಲ್ಲವೇ ಅಪಘಾತಗಳಿಂದ ದುರ್ಮರಣದ

ಭೀತಿ ಇದೆ. ಯಾರೊಬ್ಬ ಜಾತಕನ ಆಯುರ್ಮಾನದ (Life Span) ವಿಷಯವಾಗಿ ನಾವು ಬರೆದು ಪ್ರಕಟಿಸಿದ '**ಆರೋಗ್ಯ ಜ್ಯೋತಿಷ್ಯ**' ಎಂಬ ಗ್ರಂಥದ 3 ನೇ ಅಧ್ಯಾಯದ 27 ನೇ ಪುಟದಿಂದ 37 ನೇ ಪುಟದವರೆಗಿನ ಹತ್ತು ಪುಟಗಳನ್ನು ವಿವರ ವಿವರವಾಗಿ ವಿಶ್ಲೇಷಿಸಲಾಗಿದೆ ಪ್ರಸ್ತುತ ಈ ಗ್ರಂಥದ ಈ ಅಧ್ಯಾಯದ ಚೌಕಟ್ಟಿನಲ್ಲಿ ಮಾತ್ರ ಇಲ್ಲಿ ವಿಶ್ಲೇಷಿಸಲಾಗಿದೆ.

4) **ಸೂರ್ಯ :** ಯಾರೊಬ್ಬರ ಆರೋಗ್ಯದ ಬಗೆಗೆ ವಿಚಾರಿಸುವಾಗ ಜಾತಕದಲ್ಲಿಯ ಸೂರ್ಯನ ಬಲಾಬಲವನ್ನು ಪ್ರಮುಖವಾಗಿ ಪರಿಶೀಲಿಸ ಬೇಕಾಗುತ್ತದೆ. ಏಕೆಂದರೆ ಮಾನವ ಸಮುದಾಯಕ್ಕೆ ಸೂರ್ಯನು ಆತ್ಮ ಸ್ವರೂಪನು ಸೂರ್ಯನಿಂದಲೇ ಹಗಲು ರಾತ್ರಿಗಳು ಋತು ಮಾಸಾದಿಗಳು ಅಯನಾದಿಗಳ ಬೆಳವಣಿಗೆಗಳು ಜಾತಕದಲ್ಲಿಯ ಲಗ್ನಾದಿಗಳಿಗೂ ಸೂರ್ಯನೇ ಕಾರಣ ಶರೀರದಲ್ಲಿಯ ರುಧಿರಾಭಿಸರಣ, ಕಣ್ಣು, ಹೃದಯ, ಶಿರಸ್ಸು [ಮಸ್ತಿಷ್ಕ] ಬೆನ್ನೆಲುಬು, ಬೆನ್ನು, ಸಣ್ಣ ಕರಳು, (ಎಲುಬು) ರಕ್ತದಲ್ಲಿಯ ಕೆಂಪು ಗೋಲಕ ಈ ಎಲ್ಲ ಅವಯವಗಳಮೇಲೆ ಅವನದೇ [ಸೂರ್ಯನದೇ] ಅಧಿಪತ್ಯವಿರುವುದರಿಂದ ಈ ಎಲ್ಲ ಅವಯವಗಳಿಗೆ ಸಂಬಂಧಿಸಿದ ವಿಕಾರಗಳಿಗೆ. ರೋಗಗಳಿಗೆ ಅವನೇ ಕಾರಣಕಾರನು ಇದು ಅಲ್ಲದೇ ಎಲ್ಲ ಪ್ರಕಾರದ ಜ್ವರಗಳಿಗೆ ಪಿತ್ತ ಪ್ರಧಾನವಾದ ಎಲ್ಲ ರೋಗಗಳು ಮಧ್ಯಮ ವಯಸ್ಸಿಗೆ ಬರುವ ರೋಗಗಳು ನೇತ್ರವಿಕಾರ, ಹೃದಯವಿಕಾರ ಬೆನ್ನುರಿ. ಬೆನ್ನುನೋವು. ಬ್ಲಡ್‌ಪ್ರೆಶರ್, ರಕ್ತಪಿತ್ತ, ದಾಹ, ಮೂರ್ಛೆ. ಬಾವು ಶೋಥ ಈ ಎಲ್ಲ ರೋಗಗಳಿಗೆ ರವಿಯೇಕಾರಕನು ಅಷ್ಟೇ ಏಕೆ ಪ್ರಾಣ ವಾಯುವಿನ ಮೇಲೆ ಕೂಡ ಸೂರ್ಯನ ಅಧಿಪತ್ಯವಿರುತ್ತದೆ.

ಪಂಚಮಹಾಭೂತದಲ್ಲಿ ತೇಜದ ಮೇಲೆ ಸೂರ್ಯನ ಅಧಿಪತ್ಯವಿರುತ್ತದೆ. ಆಯುರ್ವೇದ ಪ್ರಕಾರ ಪಿತ್ತಪ್ರಕೃತಿಯ ಗುಣಧರ್ಮದ ಸೂರ್ಯನು ಪಿತೃಕಾರಕನೂ ಹೌದು ಅಂತಿಯೇ ಫಲ ಜ್ಯೋತಿಷ್ಯದಲ್ಲಿ **ಆತ್ಮ ಕಾರಕನಾದ ಸೂರ್ಯನಿಗೆ ಆರೋಗ್ಯದಾಯಕ, ಆಯುಷ್ಯದಾಯಕ ಗ್ರಹವೆಂದು ಪರಿಗಣಿಸುತ್ತಾರೆ.** ಆದುದರಿಂದ ಜಾತಕದಲ್ಲಿ ಸೂರ್ಯನು ಬಲಾಢ್ಯನಿದ್ದರೆ

ಸಧೃಡ ಪ್ರಕೃತಿಯುವನು ನಿರೋಗಿಯು ಇರುತ್ತಾರೆ ಇಷ್ಟೇ ಅಲ್ಲಾ ಆಯುಷ್ಯದ ಬಹು ಭಾಗ ಔಷಧ ಸೇವಿಸುವ ಪ್ರಸಂಗ ಬರುವದಿಲ್ಲ. ಆದರೆ ಜಾತಕದಲ್ಲಿ ಸೂರ್ಯನು ದುರ್ಬಲ, ನಿರ್ಬಲ ಶನಿ ದೃಷ್ಟಿತ ಶನಿಯೊಂದಿಗೆ ಯುತಿಯೋಗ, ಪ್ರತಿಯೋಗದವನಾಗಿದ್ದರೆ ಸೂರ್ಯಗ್ರಹಣದಲ್ಲಿ ಜನಿಸಿದವನಾಗಿದ್ದರೆ ಇಂಥ ಜಾತಕನ ಜಾತಕದಲ್ಲಿ ಸೂರ್ಯನು ಬಲಹೀನನಿರುತ್ತಾನೆ. ಇಂಥ ಜಾತಕರು ಸದಾ ರೋಗ ಪೀಡಿತರಿರುವರಲ್ಲದೇ ಮೇಲೆ ಬರೆದಂತೆ ಸೂರ್ಯನ ಸಂಬಂಧಿಸಿದ ಅವಯವಗಳಿಗೆ ರೋಗ ತಗಲುತ್ತವೆ. ಅಲ್ಲದೇ ಸೂರ್ಯನ ಸಂಬಂಧಿಸಿದ ರೋಗಗಳು ಮೇಲಿಂದ ಮೇಲೆ ಆಕ್ರಮಣ ಮಾಡುವವು.

5) **ಚಂದ್ರ :** ಯಾರೊಬ್ಬ ಜಾತಕನ ಆರೋಗ್ಯ ಹಾಗೂ ಆಯುರ್ಮಾನದ ಬಗೆಗೆ ವಿಚಾರಿಸುವಾಗ ಸೂರ್ಯನ ಬಲಾಬಲದ ನಂತರ ಚಂದ್ರನ ಬಲಾಬಲವನ್ನು ಪರಿಶೀಲಿಸಬೇಕು. ಏಕೆಂದರೆ ಸೂರ್ಯನ ತರುವಾಯ ಅತ್ಯಂತ ಮಹತ್ವದ ಗ್ರಹವೆಂದರೆ ಚಂದ್ರನು. ಸೂರ್ಯನು ಒಂದು ರಾಶಿಯಿಂದ ಇನ್ನೊಂದು ರಾಶಿಗೆ ಪ್ರವೇಶಿಸಲು ಒಂದು ತಿಂಗಳು ಬೇಕಾದರೆ ಚಂದ್ರನಿಗೆ ಎರಡೂ ಕಾಲ ದಿನಗಳಲ್ಲಿ ಒಂದೊಂದು ರಾಶಿ ಪ್ರವೇಶಿಸುತ್ತಾನೆ. ಸೂರ್ಯನ ರಾಶ್ಯಾಂತರದ ಪರಿಣಾಮವಾಗಿ ದೇಹದ ಮೇಲೆ (ಶರೀರದ ಮೇಲೆ) ಆದರೆ ಚಂದ್ರನ ರಾಶ್ಯಾಂತರದ ಪರಿಣಾಮ ಮನಸ್ಸಿನ ಮೇಲೆ ಆಗುತ್ತದೆ. ಅಲ್ಲದೇ ಭಯ, ಭೀತಿ ಶತೃಪೀಡೆ, ಮಾಟ–ಮದ್ದುಗಳ ಕಾಟ ದೆವ್ವ, ಪಿಶಾಚಿ, ಭಾನಾಮಿ ಈ ಎಲ್ಲ ತೊಂದರೆಗಳು ಚಂದ್ರನಿಂದಲೇ ನಿರ್ಮಾಣವಾಗುತ್ತವೆ. ಸೂರ್ಯನು ಪುರುಷ ಗ್ರಹವಿದ್ದರೆ ಚಂದ್ರನು ಸ್ತ್ರೀಗ್ರಹವು. ಸೂರ್ಯನು ಪಿತೃಕಾರಕನಿದ್ದರೆ ಚಂದ್ರನು ಮಾತೃಕಾರಕ. ಸೂರ್ಯನು ಧನವಿದ್ಯುತನಿದ್ದರೆ ಚಂದ್ರನು ಋಣ ವಿದ್ಯುತ್‌ಕಾರಕನು ಸೂರ್ಯನು ಆನುವಂಶವೃದ್ಧಿಕಾರಕನಿದ್ದರೆ ಚಂದ್ರನು ಪ್ರಜಾಪ್ರತಿನಿಧಿ ಹಗಲಿನಲ್ಲಿ ಸೂರ್ಯ ಬಲಾಢ್ಯನಿದ್ದರೆ ರಾತ್ರಿಯಲ್ಲಿ ಚಂದ್ರನು ಬಲಾಢ್ಯನಿರುತ್ತಾನೆ. ಅಮವಾಸಿಯಲ್ಲಿ ಸೂರ್ಯನು ಬಲಾಢ್ಯನಿದ್ದರೆ ಹುಣ್ಣಿಮೆಯಲ್ಲಿ ಚಂದ್ರನು ಬಲಾಢ್ಯನಿರುತ್ತಾನೆ ಕೃಷ್ಣ ಪಕ್ಷದಲ್ಲಿ ಸೂರ್ಯನು ಬಲಿಷ್ಠನಿದ್ದರೆ ಶುಕ್ಲ ಪಕ್ಷದಲ್ಲಿ ಚಂದ್ರನು ಬಲಿಷ್ಠ ಪಂಚ ಮಹಾಭೂತಗಳಲ್ಲಿ ತೇಜದ ಮೇಲೆ ಸೂರ್ಯನು ಕಾರಕನಿದ್ದರೆ ಆಪ ಅಂದರೆ ನೀರಿನ ಮೇಲೆ ಚಂದ್ರನು ಕಾರಕನು.

ಸೂರ್ಯನು ಆತ್ಮಕಾರಕನಿದ್ದರೆ. ಚಂದ್ರನು ಮನಸ್ಸಿನಕಾರಕ ಸುಖ ದುಃಖ ಲಾಭಹಾನಿ ಭಯ ಭೀತಿ ಮೊದಲಾದ ಭಾವನೆಗಳಿಗೆ ಚಂದ್ರನೇ ಕಾರಕನು ಮನಸ್ಸು ಅತ್ಯಂತ ಮಹತ್ವದ ಜ್ಞಾನೇಂದ್ರಿಯ ಈ ಮನಸ್ಸಿನ ಕಾರಕನೆಂದರೆ ಚಂದ್ರನು ಅಲ್ಲದೇ ಶರೀರದಲ್ಲಿಯ ಮಿದುಳು, ಮೂತ್ರಪಿಂಡ, ಉದರ, ತುಟಿ, ಆಮಾಶನು, ಗರ್ಭಾಶಯ, ವಕ್ಷಸ್ಥಳ, ಅನ್ನನಳ, ಅನ್ನನಳಿಕೆ, ಮಗು ದುಗ್ಧ ಪಿಂಡ ಸ್ತ್ರೀಯರ ಮೊಲೆ, ಧಮನಿ, ಮಜ್ಜಾ,ರಸ ಮೊಳಕಾಲ ಮೇಲಿರುವ ಚಿಪ್ಪುಗಳು ಸ್ಪರ್ಶಜನ್ನಜ್ಞಾನ ಈ ಎಲ್ಲ ಅವಯುವಗಳ ಮೇಲೆ ಚಂದ್ರನದೇ ಅಧಿಪತ್ಯವಿರುವುದರಿಂದ ಈ ಎಲ್ಲ ಅವಯುವಗಳಿಗೆ ಸಂಬಂಧಿಸಿದ ವಿಕಾರಗಳಿಗೆ. ರೋಗಗಳಿಗೆ ಅವನೇ ಕಾರಕನು ಜಗತ್ತಿನಲ್ಲಿ ಪುರುಷ ಸ್ತ್ರೀಯರು ಸಂಖ್ಯೆಯಲ್ಲಿ ತುಸು ಹೆಚ್ಚು ಕಡಿಮೆ ಸಮ ಸಮವಾಗಿಯೇ ಇದ್ದರೆ ರಾಷ್ಟ್ರದ ರಾಜ್ಯದ ಕೆಲ ಭಾಗದಲ್ಲಿ ಸ್ತ್ರೀಯರ ಸಂಖ್ಯೆಯೂ ಹೆಚ್ಚಾಗಿದೆ ಚಂದ್ರನು ಸ್ತ್ರೀ ಗ್ರಹವಿರುವದರಿಂದ ಸ್ತ್ರೀಯರಿಗೆ ಸಂಬಧಿಸಿದ ಸ್ತ್ರೀಯರಿಗೆ ಮಾತ್ರ ಬರುವ ಎಲ್ಲ ಪ್ರಕಾರದ ಆರ್ತವದೋಷ (ಮುಟ್ಟು ದೋಷ) ಸೂತಿಕಾ ವಿಕಾರಗಳು ಬಾಣಂತಿ ಬೇನೆ ಮೊದಲಾದ ಸ್ತ್ರೀರೋಗ ಗಳಿಗೆ ಚಂದ್ರನೆಕಾರಕನು ಅಲ್ಲದೇ ಸಣ್ಣಮಕ್ಕಳಿಗೆ ಚಂದ್ರನೇ ಕಾರಕನು ಆದುದ ರಿಂದ ಚಿಕ್ಕಮಕ್ಕಳಿಗೆ ಬರುವ ಎಲ್ಲ ರೋಗಗಳಿಗೂ ಚಂದ್ರನೇ ಕಾರಕನು ಅಂತೆಯೇ ಜಾತಕದಲ್ಲಿ ಚಂದ್ರನು ದುರ್ಬಲನಿರುವ ಮಕ್ಕಳಿಗೆ ಬಾಲಾರಿಷ್ಟ ಉಂಟಾಗುತ್ತದೆ. ಇದೂ ಅಲ್ಲದೇ ಕೆಮ್ಮು, ದಮ್ಮು, ಗಂಟಲಿಗೆ ಮೂಗಿಗೆ ಸಂಬಂಧಿಸಿದ ರೋಗಗಳು ಕ್ಷಯ, ಗಂಡಮಾಲೆ ಮನಸ್ಸಿಗೆ ಸಂಬಂಧಿಸಿದರೋಗ ಗಳಾದ ಉನ್ಮಾದ ಹುಚ್ಚು ಹಿಡಿಯುವಿಕೆ ಜಲೋದರ ಹೊಟ್ಟೆಗೆ ಸಂಬಂಧಿಸಿದ ರೋಗಗಳ ವಿಕಾರಗಳಿಗೆ ಚಂದ್ರನೇಕಾರಕನು ಅಲ್ಲದೇ ಗೊಬ್ಬರ, ಧ್ವನಿಗೆ ಸಂಬಂಧಿಸಿದ ಗಂಟಲಿಕೆ ಸಂಬಂಧಿಸಿದ ಅನ್ನನಳಿಗೆ ಸಂಬಂಧಿಸಿದ ರೋಗಗಳು ಶ್ವಾಸ ಕಾಸ, ನೆಗಡಿ, ಛಳೀಜ್ವರ, ಪ್ರಮೇಹ.ಮಧುಮೇಹ, ಅಲ್ಲದೇ ದೇಹದ ಯಾವುದೇ ಭಾಗದಲ್ಲಿ ನೀರು ಸಂಚಯವಾಗಿ ಅದರಿಂದ ಬರುವ ರೋಗಗಳಿಗೆ ಚಂದ್ರನೇಕಾರಕನು ಇದು ಅಲ್ಲದೆ ಸಮಗ್ರ ಚಕ್ಷುವಿನ ಮೇಲೆ ಸೂರ್ಯನ ಅಧಿಪತ್ಯವಿದ್ದಾಗ್ಯೂ ಪುರುಷರ ಬಲಗಣ್ಣಿನ ಮೇಲೆ ಹಾಗೂ ಸ್ತ್ರೀಯರ ಎಡ ಗಣ್ಣಿನ ಮೇಲೆ ಚಂದ್ರನ ಅಧಿಪತ್ಯವಿರುತ್ತದೆ

ಆದುದರಿಂದ ಜಾತಕದಲ್ಲಿ ಚಂದ್ರನು ಬಲಾಢ್ಯನಿದ್ದರೆ ಜಾತಕನು ಮಾನಸಿಕವಾಗಿಯೂ ಬಲಿಷ್ಠನಿರುತ್ತಾನೆ ಏಕೆಂದರೆ ಮನಸ್ಸು ಖಿನ್ನವಾದರೆ ವ್ಯಾಕುಲವಾದರೆ ಜಾತಕನ ಗುಣಸ್ವಭಾವದ ಮೇಲೆಯೂ ಪ್ರಭಾವಾಗುತ್ತದೆ. ಹೇಗೆಂದರೆ ಸೌಜನ್ಯ, ಶಾಂತತೆ, ಧೀರ, ಗಂಭೀರ ಅಂಜುಬುರಕತನ ಸ್ಮರಣ, ವಿಸ್ಮರಣೆ ಮೊದಲಾದ ಸ್ವಭಾವ ಚಂದ್ರನ ಬಲಾಬಲದ ಅವಲಂಬಿಸಿರುತ್ತದೆ. ಅಲ್ಲದೆ ಮೇಲಿಂದ ಮೇಲೆ ಪ್ರವಾಸಕೈಕೊಳ್ಳುವಿಕೆ, ತೀರ್ಥಯಾತ್ರಾ ಸುದರ್ಶನ ಪ್ರೇಕ್ಷಣೆಯ ಸ್ಥಳಗಳ ಸಂದರ್ಶನ ಮೇಲಿಂದ ಮೇಲೆ ವಿದೇಶಿಯಾತ್ರೆ ಕೈಕೊಳ್ಳುವಿಕೆ ಹೀಗೆ ಚಂದ್ರನಗುಣ ಸ್ವಭಾವ ಹಾಗೂ ಅವಯವಗಳ ಮೇಲಿರುವ ಆಧಿಪತ್ಯ ಚಂದ್ರನಿಂದಾಗುವ ರೋಗಗಳು ಇವೇ ಮೊದಲಾದವಿವರಣೆಯನ್ನು ಈ ಗ್ರಂಥದ ಈ ಅಧ್ಯಾಯಕ್ಕೆ ಸಂಬಂಧಿಸಿದವಿಷಯಗಳ ಚೌಕಟ್ಟಿನಲ್ಲಿ ವಿವರಿಸಲಾಗಿದೆ.

ಸೂರ್ಯ, ಚಂದ್ರ, ಕುಜ, ಬುಧ, ಗುರು, ಶುಕ್ರ, ಶನಿ, ರಾಹು, ಕೇತು ಎಲ್ಲ ನವಗ್ರಹಗಳ ಸಮಗ್ರ ವಿವರಣೆಯನ್ನು ನಾವು ಬರೆದು ಪ್ರಕಟಿಸಬೇಕೆಂದಿರುವ **"ಗ್ರಹದರ್ಶನ"** ಗ್ರಂಥದಲ್ಲಿ ವಿಸ್ತಾರವಾಗಿ ವಿವರಿಸಲಾಗುವುದು. ಆದುದರಿಂದ ಜಾತಕದಲ್ಲಿ ಚಂದ್ರನು ಬಲಾಢ್ಯನಾಗಿದ್ದರೆ ಇಂಥ ಜಾತಕರು ಮಾನಸಿಕವಾಗಿಯು ಸಧೃಡವಿರುತ್ತಾರೆ. ಹಾಗೂ ಮೇಲೆ ವಿವರಿಸಿದ ಚಂದ್ರನಿಗೆ ಸಂಬಂಧಿಸಿದ ಅವಯವಗಳಿಗೆ ತಗಲುವ ರೋಗಗಳಾಗಲಿ ಚಂದ್ರನಿಂದ ಬರುವ ರೋಗಗಳಾಗಲೀ ಜಾತಕನಿಗೆ ಅಂಟಿಕೊಳ್ಳುವುದಿಲ್ಲ. ಆದರೆ ಅದೇ ಚಂದ್ರನು ನಿರ್ಬಲ ದುರ್ಬಲ, ಕ್ಷೀಣನಿದ್ದರೆ ಚಂದ್ರನ ಸ್ವಭಾವ ಗುಣಾನುಸಾರವಾಗಿಯೂ ಚಂದ್ರನಿಗೆ ಸಂಬಂದಿಸಿದ ಅವಯವಗಳಿಗೆ ಸಂಬಂಧಿಸಿದ ರೋಗಗಳು ಚಂದ್ರನಿಂದ ಬರುವ ರೋಗಗಳು ಜಾತಕನಿಗೆ ತಗಲುತ್ತದೆ. ಹಾಗಾದರೆ ಚಂದ್ರನು ದುರ್ಬಲ, ನಿರ್ಬಲ ಕ್ಷೀಣ ಬಲಾಢ್ಯನೆಂದರೇನು ಎಂಬ ಪ್ರಶ್ನೆ ಉದ್ಭವಿಸುತ್ತದೆ. ಇವುಗಳ ಅರ್ಥ ವಿವರಣೆಯನ್ನ ನಮ್ಮ ವ್ಯವಸಾಯ ಜ್ಯೋತಿಷಿಗಳಿಗೆ ಹೇಳುವುದು ಅವಶ್ಯಕತೆ ಇಲ್ಲಾ, ಆದಾಗ್ಯೂ ಸಂಕ್ಷಿಪ್ತವಲ್ಲಿ ಹೇಳಬೇಕೆಂದರೆ ಚಂದ್ರನು ಪಾಪ ಗ್ರಹಗಳ ಮಧ್ಯ, ಪಾಪಗ್ರಹಯುಕ್ತ, ಪಾಪಗ್ರಹದೃಷ್ಟಿತ ಶತೃಕ್ಷೇತ್ರ ನೀಚರಾಶಿ

ಬಾಲ್ಯಾವಸ್ಥೆ, ವೃದ್ಧಾಪ್ಯ ಹೀಗಿದ್ದರೆ ದುರ್ಬಲ, ನಿರ್ಬಲನಿರುತ್ತಾನೆ. ಇದು ಅಲ್ಲದೇ ಕ್ಷೀಣ ಚಂದ್ರನಿದ್ದರೂ ದುರ್ಬಲನಾಗುತ್ತಾನೆ. ಕ್ಷೀಣ ಚಂದ್ರ ನೆಂದರೆ ಯಾವುದೇ ಮಾಸದ ಬಹುಳ (ಕೃಷ್ಣ, ವದ್ಯ) ದಶಮಿಯಿಂದ ಶುದ್ಧ ಪಂಚಮೀವರೆಗೆ ಜನಿಸಿದ ಜಾತಕ ಇದೇ ಮೊದಲಾದ ದುರ್ಬಲ. ನಿರ್ಬಲ ಚಂದ್ರನಿದ್ದ ಜಾತಕನು ಮನಸ್ವಾಸ್ಥ್ಯವನ್ನು ಕಳೆದುಕೊಂಡು ತನ್ನ ಮೂಲಕ ರೋಗಪೀಡಿತನಾಗುತ್ತಾನೆ.

6] **ಶುಭ, ಅಶುಭ ಯೋಗಗಳು :** ಯಾರೊಬ್ಬರ ಜಾತಕವನ್ನು ಪರಿಶೀಲಿಸುವಾಗ ಅವರ ಜಾತಕದಲ್ಲಿಯ ಗ್ರಹಯೋಗಗಳನ್ನು ಕೂಲಂಕುಷ ವಾಗಿ ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ಫಲಜ್ಯೋತಿಷ್ಯಶಾಸ್ತ್ರದಲ್ಲಿ ಅರ್ಥಾತ ಕುಂಡಲೀ ವಿಜ್ಞಾನಶಾಸ್ತ್ರದಲ್ಲಿ ಈ ಶುಭ-ಅಶುಭ ಯೋಗಗಳು ಜೀವನದ ವಿವಿಧ ಮುಖಗಳಲ್ಲಿ ವಿಶಿಷ್ಟ ಪಾತ್ರವನ್ನು ವಹಿಸುತ್ತವೆ. ಯೋಗಗಳಲ್ಲಿ ಕೂಡ ಅನೇಕ ಪ್ರಕಾರಗಳಿವೆ. ಹೇಗೆ ಸಂಗೀತದಲ್ಲಿ ಅನೇಕ ರಾಗಗಳಿರುವವೋ ಹಾಗೆ ಫಲಜ್ಯೋತಿಷ್ಯಶಾಸ್ತ್ರದಲ್ಲಿ ಅನೇಕ ಯೋಗಗಳಿವೆ. ಹೇಗೆ ರಾಗಗಳು ಅಸಂಖ್ಯಗಳಿದ್ದರೂ ಕಲಾವಿದರು ಸಂಗೀತಗಾರರು ಕೆಲ ಪ್ರಚಲಿತ ವಿಶಿಷ್ಠ ರಾಗಗಳಲ್ಲಿಯೇ ಪ್ರಭುತ್ವ ಪಡೆದವರಿರುತ್ತಾರೆ. ಹಾಗೆ ಯೋಗಗಳು ಅನೇಕವಿದ್ದರು ಆಯಾ ಜ್ಯೋತಿಷಿಗಳು ಅವರವರ ಅನುಭವದ ಮೇಲೆ ಕೆಲ ಯೋಗಗಳ ಬಗೆಗೆ ಮಾತ್ರ ಹೆಚ್ಚು ಅಭ್ಯಾಸ ಮಾಡಿರುತ್ತಾರೆ.

ಮೇಲೆ ಹೇಳಿದಂತೆ ಯೋಗಗಳಲ್ಲಿ ಅನೇಕ ಪ್ರಕಾರಗಳಿವೆ ಹಾಗೂ ಆಯಾ ಯೋಗಗಳ ಫಲಗಳು ವಿಭಿನ್ನವಿರುತ್ತವೆ.ಉದಾ: ಧನಯೋಗಗಳು ಬೇರೆಇದ್ದರೆ ಅಧಿಕಾರಯೋಗಗಳು ವಿದ್ಯಾಯೋಗಗಳು ರಾಜಯೋಗಗಳು ಬೇರೆಇರುತ್ತವೆ, ಯೋಗಗಳಲ್ಲಿ ಅನೇಕ ಪ್ರಕಾರಗಳಿದ್ದರು ವೈವಿಧ್ಯವಿದ್ದರೂ ಫಲಜ್ಯೋತಿಷ್ಯದ ಪ್ರಕಾರ ಎರಡೇ ಎರಡು ಪ್ರಕಾರಗಳನ್ನಾಗಿ ವಿಂಗಡಿಸಬಹುದು.

1] ಶುಭ ಯೋಗಗಳು 2] ಅಶುಭ ಯೋಗಗಳು [ಕುಯೋಗ]. ಈ ಶುಭಾ - ಅಶುಭ ಯೋಗಗಳು ಕೂಡ ಆಯಾ ಸ್ಥಾನಗಳಲ್ಲಿಯ ಗ್ರಹಗಳ ಹಾಗೂ ಆಯಾ ಭಾವಗಳ ಆಯಾ ಸ್ಥಾನಾಧೀಶರ ಗುಣಧರ್ಮದಂತೆ ವಿಶಿಷ್ಠ ಫಲಗಳು ದೊರೆಯುತ್ತವೆ.

ಯಾರೊಬ್ಬ ಜಾತಕನ ಆರೋಗ್ಯಕ್ಕೆ ಸಂಬಂಧಿಸಿದ ಶುಭಾ-ಶುಭಯೋಗಗಳ ಭಿನ್ನವಿದ್ದರೆ ಆರ್ಥಿಕಕ್ಕೆ ಸಂಬಂಧಿಸಿದ ಹಾಗೂ ಗೃಹಸೌಖ್ಯಕ್ಕೆ ಸಂಬಂಧಿಸಿದ ಶುಭಾ-ಅಶುಭ ಯೋಗಗಳು ಭಿನ್ನ ಭಿನ್ನವಿರುತ್ತವೆ. ಯೋಗಗಳೆಂದರೇನು. ಯಾವ ಯಾವ ಯೋಗಗಳು ಶುಭ ಫಲ ಕೊಡುತ್ತವೆ. ಯಾವ ಯಾವ ಯೋಗಗಳು ಅಶುಭ ಫಲ ಕೊಡುತ್ತವೆ. ಯೋಗಗಳಲ್ಲಿಯ ವೈವಿಧ್ಯ ಇವೇ ಮೊದಲಾದ ಯೋಗಗಳಿಗೆ ಸಂಬಂಧಿಸಿದ ಸಮಗ್ರ ವಿಶ್ಲೇಷಣೆಯನ್ನು ನಾವು ಬರೆದು ಪ್ರಕಟಿಸಬೇಕೆಂದಿರುವ **॥ಗ್ರಹಯೋಗ॥** ಎಂಬ ಗ್ರಂಥದಲ್ಲಿ ವಿವರ ವಿವರವಾಗಿ ವಿವರಿಸಲಾಗುವುದು. ಏಕೆಂದರೆ ಇದೊಂದೇ ವಿಷಯದ ಮೇಲೆ ನೂರಾರು ಪುಟಗಳಷ್ಟು ವಿವರಿಸುವಷ್ಟು ಈ ವಿಷಯದ ವ್ಯಾಪ್ತಿ ಇರುತ್ತದೆ. ಪ್ರಸ್ತುತಃ ಈ ಗ್ರಂಥದ ಈ ಅಧ್ಯಾಯಕ್ಕೆ ಸಂಬಂಧಿಸಿದ ಯೋಗಗಳ ಬಗೆಗೆ ಮಾತ್ರ ಇಲ್ಲಿ ವಿವರಿಸಲಾಗಿದೆ ಅಲ್ಲದೇ ಆಯಾ ಅಧ್ಯಾಯಕ್ಕೆ ಸಂಬಂಧಿಸಿದ ಯೋಗಗಳ ವಿವರಣೆಯನ್ನು ಆಯಾ ಅಧ್ಯಾಯಗಳಲ್ಲಿ ವಿವರಿಸಲಾಗಿದೆ.

ಆರೋಗ್ಯಕ್ಕೆ ಹಾನಿಕಾರಕ ಯೋಗಗಳಾವವು ಹಾಗೂ ಆರೋಗ್ಯಕ್ಕೆ ಪೂರಕವೂ ಪೋಷಕವೂ ಇರುವ ಯೋಗಗಳಾವುವು ಎಂಬುದನ್ನು ಈ ಕೆಳಗಿನಂತೆ ಬರೆಯಲಾಗಿದೆ.

1) ದುರ್ಬಲ ನಿರ್ಬಲನಾದ ಸೂರ್ಯನನ್ನು ಶನಿಯು ನೋಡುತ್ತಿದ್ದ ಜಾತಕನು ಸದಾರೋಗಪೀಡಿತನು.

2) ರವಿ–ಶನಿಯರ ಪ್ರತಿಯೋಗ ಲಗ್ನ–ಸಪ್ತಮ,ವ್ಯ ದ್ವಿತೀಯ,–ಅಷ್ಟಮ, ಷಷ್ಠ-ದ್ವಾದಶ ಈ ಸ್ಥಾನಗಳಲ್ಲಾಗುತ್ತಿದ್ದರೆ ಇಂಥ ಜಾತಕನು ಸದಾರೋಗ ಪೀಡಿತನಿರುತ್ತಾನೆ.

3) ರವಿ,ಶನಿಯರ ಯುತಿಯೋಗವು ಲಗ್ನ, ಷಷ್ಠ, ಅಷ್ಟಮ ಈ ಯಾವುದೆಂದು ಸ್ಥಾನಗಳಲ್ಲಿ ಆಗುತ್ತಿದ್ದ ಜಾತಕನು ಸದಾರೋಗ ಪೀಡಿತನಿರುತ್ತಾನೆ.

4) ಷಷ್ಠದಲ್ಲಿ ಶನಿಯು ಇದ್ದು, ಅಷ್ಟಮ ಇಲ್ಲವೇ ದ್ವಾದಶದಲ್ಲಿ ನಿರ್ಬಲ, ದುರ್ಬಲ ಸೂರ್ಯನಿದ್ದ ಜಾತಕನು ಸದಾರೋಗಪೀಡಿತನಿರುತ್ತಾನೆ.

6] ಚತುರ್ಥದಲ್ಲಿ ಶನಿಯಿದ್ದು, ಲಗ್ನ, ಷಷ್ಠದಲ್ಲಿ ದುರ್ಬಲ ನಿರ್ಬಲ ಸೂರ್ಯನಿದ್ದ ಜಾತಕನು ಸದಾ ರೋಗ ಪೀಡಿತನಿರುತ್ತಾನೆ.

6] ದುರ್ಬಲ, ನಿರ್ಬಲನಾದ ಚಂದ್ರನನ್ನು ಶನಿಯುನೋಡುತ್ತಿದ್ದ ಜಾತಕನಿಗೆ ಶತೃಪೀಡೆ, ಮಾಟ-ಮದ್ದು ಗಳ ಕಾಟ ಬಹಳ, ಅಲ್ಲದೆ ಭಯ ಭೀತಿ ಯಿಂದಲೂ ಮಾನಸಿಕ ತೊಂದರೆಯಿಂದ ಶಾರೀರಕ ಪೀಡೆ ಉಂಟಾಗುತ್ತದೆ.

7] ಚಂದ್ರ, ಶನಿಯರ ಪ್ರತಿಯೋಗವು, ಲಗ್ನ, ಸಪ್ತಮ, ಚತುರ್ಥ-ದಶಮ, ದ್ವಿತೀಯ-ಅಷ್ಟಮ, ಷಷ್ಠ-ವ್ಯಯ ಈ ಸ್ಥಾನಗಳಲ್ಲಿದ್ದ ಜಾತಕನಿಗೆ ಶತೃಪೀಡೆ ಮಾಟ, ಮದ್ದುಗಳ ಕಾಟ ಬಹಳ ಅಲ್ಲದೇ ಭಯ ಭೀತಿಯಿಂದಲೂ ಮಾನಸಿಕ ತೊಂದರೆ ಶಾರೀರಿಕ ಪೀಡೆ ಉಂಟಾಗುತ್ತದೆ.

8) ಷಷ್ಠದಲ್ಲಿ ಶನಿ ಇದ್ದು, ಅಷ್ಟಮ ಇಲ್ಲದೇ ದ್ವಾದಶಸ್ಥಾನಗಳಲ್ಲಿ ದುರ್ಬಲ, ನಿರ್ಬಲ ಚಂದ್ರನಿದ್ದು ಜಾತಕನಿಗೆ ಶತೃಪೀಡೆ ಮಾಟ ಮದ್ದುಗಳ ಕಾಟ ಮಾನಸಿಕ ತೊಂದರೆ ಬಹಳ ಇರುತ್ತದೆ.

9) ಚತುರ್ಥದಲ್ಲಿ ಶನಿಯಿದ್ದು ಲಗ್ನ ಇಲ್ಲವೇ ಷಷ್ಠದಲ್ಲಿ ದುರ್ಬಲ. ನಿರ್ಬಲ ಚಂದ್ರನಿದ್ದ ಜಾತಕನಿಗೆ ಶತೃಪೀಡೆ ಮಾಟ ಮದ್ದುಗಳ ಕಾಟ ಹಾಗೂ ಮಾನಸಿಕ ತೊಂದರೆ ಬಹಳ.

10) ಶನಿ, ಚಂದ್ರರ ಯತಿಯೋಗವು ಲಗ್ನ, ಚತುರ್ಥ, ಷಷ್ಠ, ಅಷ್ಟಮ, ದ್ವಾದಶ ಈ ಯಾವುದೊಂದು ಸ್ಥಾನದಲ್ಲಿದ್ದ ಜಾತಕನಿಗೆ ಶತೃಪೀಡೆ ಮಾಟಮದ್ದುಗಳ ಕಾಟ ಹಾಗೂ ಮಾನಸಿಕ ತೊಂದರೆ ಬಹಳ,

11) ಶನಿ, ಮಂಗಳರ ಯುತಿ ಯೋಗವು ಲಗ್ನ,ಷಷ್ಠ, ಚತುರ್ಥ, ಅಷ್ಟಮ ದ್ವಾದಶ ಈ ಯಾವುದೊಂದು ಸ್ಥಾನಗಳಲ್ಲಿ ಆಗುತ್ತಿದ್ದ ಜಾತಕನಿಗೆ ವಾಹನ ಮೊದಲಾದ ಅಪಘಾತಗಳು ಬಹಳ.

12) ಶನಿ, ಮಂಗಳರ ಪ್ರತಿಯೋಗವು ಲಗ್ನ-ಸಪ್ತಮ, ಚತುರ್ಥ, ದಶಮ, ದ್ವಿತೀಯ-ಅಷ್ಟಮ ಷಷ್ಠ-ವ್ಯಯ ಯಾವುದೊಂದು ಸ್ಥಾನಗಳಲ್ಲಿ ಇದ್ದ ಜಾತಕನಿಗೆ ವಾಹನದ ಅಪಘಾತ ಬಹಳ.

13) ಷಷ್ಠದಲ್ಲಿ ಶನಿ ಇದ್ದು, ಅಷ್ಟಮ ಇಲ್ಲವೇ ದ್ವಾದಶದಲ್ಲಿ ಮಂಗಳ ನಿದ್ದ ಜಾತಕನಿಗೆ ವಾಹನಾದಿ ಅಪಘಾತಗಳು ಬಹಳ

14) ಚತುರ್ಥದಲ್ಲಿ ಶನಿಯಿದ್ದು, ಷಷ್ಠ ಇಲ್ಲವೆ ಲಗ್ನದಲ್ಲಿ ಮಂಗಳ ನಿದ್ದ ಜಾತಕನಿಗೆ ವಾಹನಾದಿ ಅಪಘಾತಗಳು ಬಹಳ

15) ಚಂದ್ರ ರಾಹುಗಳ ಗ್ರಹಯೋಗ ಇಲ್ಲವೇ ಯುತಿಯೋಗವು, ಲಗ್ನ, ಷಷ್ಠ, ಚತುರ್ಥ,ಅಷ್ಟಮ, ವ್ಯಯ ಈ ಯಾವುದೊಂದುಸ್ಥಾನದಲ್ಲಿದ್ದ ಜಾತಕನಿಗೆ ಶತ್ರುಪೀಡೆ, ಮಾಟ, ಮದ್ದುಗಳ ಕಾಟ ಹಾಗೂ ಮಾನಸಿಕ ತೊಂದರೆಗಳು ಬಹಳ.

16) ಚಂದ್ರ, ರಾಹುಗಳ ಪ್ರತಿಯೋಗವು ಲಗ್ನ–ಸಪ್ತಮ,–ಷಷ್ಠ, ದ್ವಾದಶ, ದ್ವಿತೀಯ–ಅಷ್ಟಮದಲ್ಲಿದ್ದ ಜಾತಕನಿಗೆ ಶತ್ರುಪೀಡೆ ಮಾಟ ಮದ್ದುಗಳ ಕಾಟ ಬಹಳ.

17) ರವಿ–ಕೇತುಗಳ ಯುತಿಯೋಗವು ಗ್ರಹ ಯೋಗಗಳು ಲಗ್ನ, ಷಷ್ಠ, ಅಷ್ಟಮಗಳಲ್ಲಿದ್ದ ಜಾತಕನಿಗೆ ಶಾರೀರಿಕ ಪೀಡೆ ಬಹಳ.

18) ರವಿ–ಕೇತುಗಳ ಪ್ರತಿಯೋಗವು ಲಗ್ನ–ಸಪ್ತಮ ಚತುರ್ಥ ದಶಮ, ಷಷ್ಠ-ದ್ವಾದಶ, ದ್ವಿತೀಯ–ಅಷ್ಟಮದಲ್ಲಿದ್ದ ಜಾತಕನಿಗೆ ಶಾರೀರಿಕ ಪೀಡೆ ಬಹಳ.

19) ಲಗ್ನದಲ್ಲಿ ಮಂಗಳನಿದ್ದು ಚತುರ್ಥದಲ್ಲಿ ಶನಿ ಇದ್ದರೆ ಅಥವಾ, ಚತುರ್ಥದಲ್ಲಿ ಮಂಗಳನಿದ್ದು ಸಪ್ತಮದಲ್ಲಿ ಶನಿ ಇದ್ದರೆ ಅಥವಾ ದಶಮದಲ್ಲಿ ಮಂಗಳನಿದ್ದು, ಶನಿಯು ಲಗ್ನದಲ್ಲಿದ್ದ ಜಾತಕನಿಗೆ ವಾಹನಾದಿ ಅಪಘಾತ ದಿನಗಳು ಬಹಳ.

20) ಮಂಗಳನಿಂದ ನೋಡಲ್ಪಟ್ಟ ಶನಿಯು ಲಗ್ನ, ಷಷ್ಠ, ಅಷ್ಟಮ ದ್ವಾದಶ ಈ ಯಾವುದೇ ಸ್ಥಾನಗಳಲ್ಲಿದ್ದರೂ ವಾಹಾನಾದಿ ಅಪಘಾತಾದಿಗಳು ಬಹಳ.

21] ಲಗ್ನೇಶ, ಷಷ್ಠೇಶ, ಅಷ್ಟಮೇಶ, ಸೂರ್ಯ ಚಂದ್ರ ಈ ಐದು ಸಂಗತಿಗಳು ಪೂರಕರಿಂದ ಜಾತಕನು ನಿರೋಗಿ ಇರುತ್ತಾನೆ.

ಯಾವ ಯಾವ ಗ್ರಹಗಳ ಗ್ರಹಯೋಗದಿಂದ ಯಾವ ಯಾವ ರೋಗಗಳು ಉಂಟಾಗುತ್ತವೆ ಎಂಬುದರ ಸಮಗ್ರ ವಿವರಣೆಯು ನಾವು ಬರೆದು ಪ್ರಕಟಿಸಿದ **"ಆರೋಗ್ಯ ಜ್ಯೋತಿಷ್ಯ"** ಗ್ರಂಥದಲ್ಲಿ ವಿವರಿಸಲಾಗಿದೆ. ಪ್ರಸ್ತುತಃ ಈ ಗ್ರಂಥದ ಈ ಅಧ್ಯಾಯದಲ್ಲಿ ಗ್ರಹಯೋಗಗಳ ರೂಪರೇಷೆಯನ್ನು ಮಾತ್ರ ಇಲ್ಲಿ ಬರೆಯಲಾಗಿದೆ.

## 7] ಗೋಚರೀ ಗ್ರಹಗಳ ಪರಿಭ್ರಮಣದ ಪರಿಣಾಮ ಹಾಗೂ ಮಹರ್ದಸೆ, ಅಂತರ್‌ದೆಶೆಗಳ ಪ್ರಭಾವ

ಯಾರೊಬ್ಬರ ಆರೋಗ್ಯದ ವಿಷಯವಾಗಿ ಅವರ ಮೂಲ ಜಾತಕದೊಂದಿಗೆ ಗೋಚರೀ ಗ್ರಹಗಳ ಪರಿಭ್ರಮಣದ ಪರಿಣಾಮಹಾಗೂ ಮಹರ್ದಶೆ ಅಂತರ್‌ದಶೆಗಳ ಪ್ರಭಾವವನ್ನು ತುಲನಾತ್ಮಕವಾಗಿ ಪರಿಶೀಲಿಸಬೇಕು ಏಕೆಂದರೆ ಅವರ ಮೂಲ ಜಾತಕದ ಪ್ರಕಾರ ಆರೋಗ್ಯ ಭಾಗ್ಯವನ್ನು ಪಡೆದುಕೊಂಡು ಬಂದಿರುವರೇ ಹೇಗೆ ಎಂಬುದನ್ನು ಖಚಿತ ಪಡಿಸಿಕೊಳ್ಳಬೇಕು. ಜಾತಕನು ಯಾವ ಸಂಗತಿಗಳನ್ನು [ಭಾವಗಳು] ಜನ್ಮಾರಭ್ಯ ಸಂಸ್ಕಾರ ರೂಪದಿಂದ ಇಲ್ಲವೋ ಅದು ಗೋಚರಿ ಗ್ರಹಗಳು ಎಷ್ಟೇ ಶುಭದಾಯಕವಿದ್ದರೂ ಮಹರ್ದಶೆ ಅಂತರ್‌ದಶೆಗಳು ಶುಭರಿದ್ದಾಗ್ಯೂ ಫಲ ಮಾತ್ರ ದೊರೆಯುವಾರದು.

ಇದರಂತೆ ಯಾವುದರ ಬಗೆಗೆ ಲವಲೇಶವಾದರೂ ಕಡಿಮೆ ಇಲ್ಲವೋ ಅದು ಗೋಚರೀ ಗ್ರಹಗಳು. ಎಷ್ಟೇ ಅಶುಭವಿದ್ದರೂ ಹಾಗೂ ಮಹರ್ದಶೆ ಅಂತರ್‌ದಶೆಗಳು ಅಶುಭವಿದ್ದರೂ ಆ ವಿಷಯದ ಬಗೆಗೆ ಆ ಭಾವಗಳ ಬಗೆಗೆ ಸ್ವಲ್ಪವೂ ಕೂಡ ಕಡಿಮೆ ಆಗಲಾರದು. ಈ ದೃಷ್ಟಿಯಿಂದ ಗೋಚರೀ ಗ್ರಹಗಳ ಪರಿಭ್ರಮಣದ ಪರಿಣಾಮ ಹಾಗೂ ಮಹರ್ದಶೆ ಅಂತರ್‌ದಶೆಗಳ ಪ್ರಭಾವವನ್ನು ತುಲನಾತ್ಮಕವಾಗಿ ಪರಿಶೀಲಿಸಬೇಕು.

ಈ ಹಿಂದೆ ವಿವರಿಸಿದಂತೆ ಆರು ಸಂಗತಿಗಳು ಯಾರ ಜಾತಕದಲ್ಲಿ ಪೂರಕವಿರುವವೋ ಆ ಜಾತಕನಿಗೆ ಏಳನೇ ಸಂಗತಿಯಾದ ಗೋಚರೀ ಗ್ರಹಗಳ

ಪರಿಭ್ರಮಣದ ಪರಿಣಾಮ ಹಾಗೂ ಮಹರ್ದಶೆ ಅಂತರ್‌ದರ್ಶಗಳ ಪರಿಣಾಮದ ಅಶುಭ ಫಲ ದೊರೆಯಲಾರದು ಆದರೆ ಈ ಆರು ಸಂಗತಿಗಳಲ್ಲಿ 1-2 ಸಂಗತಿಗಳು ಅಥವಾ ಅರ್ಧಕ್ಕಿಂತ ಹೆಚ್ಚು ಸಂಗತಿಗಳು ಪ್ರತಿಕೂಲ ವಿದ್ದರೆ ಆಗ ಮಾತ್ರ ಗೋಚರೀ ಗ್ರಹಗಳ ಪರಿಭ್ರಮಣ ಹಾಗೂ ಮಹರ್ದಶೆ ಅಂತರ್‌ದರ್ಶೆಗಳ ಶುಭಾ-ಅಶುಭ ಫಲಗಳು ದೊರೆಯುವವು ಎಂಬುದನ್ನು ಪ್ರಮುಖ್ಯವಾಗಿ ಲಕ್ಷದಲ್ಲಿಡಬೇಕು. ಇಲ್ಲಿ ಇನ್ನೊಂದು ಗಮನಿಸಬೇಕಾದ ವಿಷಯವೆಂದರೆ ಗೋಚರೀ ಗ್ರಹಗಳ ಪರಿಭ್ರಮಣದ ಪರಿಣಾಮವಾಗಲಿ ಮಹರ್ದಶೆ ಅಂತರ್‌ದರ್ಶೆಗಳ ಪರಿಣಾಮವಾಗಲಿ ಕೆಲ ಅವಧಿಯವರೆಗೆ ಮಾತ್ರವಿರುತ್ತದೆ. ಎಷ್ಟು ಅವಧಿಯವರೆಗೆ ಎಂಬುದನ್ನು ನಮ್ಮ ವೃತ್ತಿ ಬಾಂಧವರಿಗೆ ತಿಳಿಸಿ ಹೇಳುವ ಅವಶ್ಯಕತೆ ಇಲ್ಲಾ.

ಪ್ರಸ್ತುತಃ ಈ ಅಧ್ಯಾಯದಲ್ಲಿ ಆರೋಗ್ಯ ದೃಷ್ಟಿಯಿಂದ ಯಾವ ಯಾವ ಗೋಚರೀ ಗ್ರಹಗಳು ಅಶುಭ ಫಲ ಕೊಡುವವು ಯಾವ ಗ್ರಹಗಳ ಮಹದರ್ಶೆ ಅಂತರ್‌ದಶೆಗಳು ಅಶುಭ ಫಲ ಕೊಡುವವು ಎಂಬುದನ್ನು ಈ ಕೆಳಗಿನಂತೆ ಬರೆಯಲಾಗಿದೆ.

1] ಸೂರ್ಯನು ಗೋಚರಿಯಿಂದ 1-4-8-12 ನೇಯವನಾಗಿ ಬಂದಾಗ ಶಾರೀರಿಕ ಪೀಡೆ ಕೊಡುತ್ತಾನೆ.

2] ಚಂದ್ರನು ಗೋಚರಿಯಿಂದ 4-6-8-12 ನೇಯವನಾಗಿ ಬಂದಾಗ ವ್ಯಾಕುಲತೆ ಶಾರೀರಿಕ ಪೀಡೆ, ಶತ್ರುಪೀಡೆ, ಭಯ. ಭೀತಿ. ಮಾನಸಿಕವಾಗಿ ಉದಾಸೀನತೆ.ಅಸಮಾಧಾನದ ಪ್ರವೃತ್ತಿ ಉಂಟುಮಾಡುತ್ತಾನೆ.

3] ಮಂಗಳನು ಗೋಚರಿಯಿಂದ 1-4-8-12 ನೇಯವನಾಗಿ ಬಂದಾಗ ಶಾರೀರಿಕ, ಪೀಡೆ, ಶತ್ರುಪೀಡೆ. ವಾಹನದ ಅಪಘಾತ, ಅಗ್ನಿ ಭಯ ಚೋರ ಭಯ ಮೊದಲಾದ ಅಶುಭ ಫಲ ಕೊಡುವನು.

4] ಬುಧನು ಗೋಚರಿಯಿಂದ 4-6-8-12 ನೇಯವನಾಗಿ ಬಂದಾಗ ಶತ್ರುವೃದ್ಧಿ, ರೋಗಬಾಧೆ, ಶಾರೀರಿಕ ಪೀಡೆ ಕೊಡುತ್ತಾನೆ.

5] ಗುರುವು ಗೋಚರಿಯಿಂದ 4-6-8-12ನೇಯವನಾಗಿ ಬಂದಾಗ ಶಾರೀರಿಕ ಪೀಡೆ, ರೋಗವೃದ್ಧಿ ಚಿಂತಾತುರತೆ ವ್ಯಾಕುಲತೆ ಮೊದಲಾದ ಅಶುಭ ಫಲ ಕೊಡುತ್ತಾನೆ.

6] ಶುಕ್ರನು ಗೋಚರಿಯಿಂದ 3-4-6-8ನೇಯವನಾಗಿ ಬಂದಾಗ ರೋಗವೃದ್ಧಿ, ಶತ್ರುಪೀಡೆ ಶಾರೀರಿಕ ಪೀಡೆ ಕೊಡುತ್ತಾನೆ.

7] ಶನಿಯು ಗೋಚರಿಯಿಂದ 1–2–4-5–8–12 ನೇಯವನಾಗಿ ಬಂದಾಗ ಶಾರೀರಿಕ ಪೀಡೆ, ಶತ್ರುಪೀಡೆ ರೋಗ ವೃದ್ಧಿ ಮೊದಲಾದ ಅಶುಭ ಫಲ ಕೊಡುವನು.

8] ರಾಹುವಿನ ಗೋಚರಿ ಫಲಗಳು ಮಂಗಳನಂತೆಯೂ ಕೇತುವಿನ ಗೋಚರಿ ಫಲಗಳು ಶನಿಯಂತೆ ದೊರೆಯುತ್ತವೆ.

ಗ್ರಹಗಳ ಗೋಚರಿ ಫಲದ ವಿಷಯವಾಗಿ ನಾವು ಬರೆದು ಪ್ರಕಟಿಸಿದ **"ಗ್ರಹಗತಿ"** ಹಾಗೂ **"ಸಾಡೇಸಾತಿ"** ಗ್ರಂಥಗಳಲ್ಲಿ ವಿವರ ವಿವರವಾಗಿ ಬರೆಯಲಾಗಿದೆ.

## ದಶಾಪದ್ಧತಿಯಿಂದ ಆರೋಗ್ಯದ ವಿಚಾರ

ಮೂಲ ಜಾತಕದಲ್ಲಿ ಲಗ್ನೇಶ, ಷಷ್ಠೇಶ, ಅಷ್ಟಮೇಶ, ಸೂರ್ಯ, ಚಂದ್ರರು ಇವರು ಬಲಾಢ್ಯರಿದ್ದು ಅವರ ಮಹರ್ದಶೆ ಅಂತರದಶೆಗಳ ಫಲಗಳು ಶುಭವಿರುವುದರಿಂದ ಈ ಅವಧಿಯಲ್ಲಿ ಜಾತಕನಿಗೆ ಶಾರೀರಿಕ ಪೀಡೆ ಉಂಟಾಗವುದಿಲ್ಲ ಆದರೆ ಇವರಲ್ಲಿ ಯಾರೆ [ಯಾವುದೇ ಗ್ರಹ] ನಿರ್ಬಲ ದುರ್ಬಲ ರಿದ್ದು ಅವರ ಮಹರ್ದಶೆ ಅಂತರದಶೆಗಳ ಅವಧಿಯಲ್ಲಿ ಜಾತಕನಿಗೆ ಶಾರೀರಿಕ ಪೀಡೆ ಉಂಟಾಗುತ್ತದೆ. ಉದಾ : ಯಾರೊಬ್ಬರ ಜಾತಕನ ಜಾತಕನಲ್ಲಿ ಲಗ್ನೇಶ ದುರ್ಬಲ, ನಿರ್ಬಲನಿದ್ದು ಷಷ್ಠೇಶ ಅಷ್ಟಮೇಶ ಸೂರ್ಯ ಚಂದ್ರರು ಬಲಾಢ್ಯರಿದ್ದಾರೆ ಎಂದು ತಿಳಿಯಿರಿ. ಇಲ್ಲಿ ದುರ್ಬಲ ನಿರ್ಬಲನಿದ್ದ ಲಗ್ನೇಶನ ಮಹರ್ದಶೆ ಅಂತರದಶೆಗಳಲ್ಲಿ ಮಾತ್ರ ಶಾರೀರಿಕ ಪೀಡೆ ಉಂಟಾಗುತ್ತದೆ ವಿನಃ ಷಷ್ಠೇಶ, ಅಷ್ಟಮೇಶ, ಸೂರ್ಯ, ಚಂದ್ರರ, ಮಹರ್ದಶೆ ಅಂತರದಶೆಗಳಲ್ಲಿ ಇರುವದಿಲ್ಲ ಹೀಗೆ ಲಗ್ನೇಶ, ಷಷ್ಠೇಶ,ಅಷ್ಟಮೇಶ,ಸೂರ್ಯ

ಚಂದ್ರರಲ್ಲಿ ಯಾರು ದುರ್ಬಲ, ನಿರ್ಬಲರಿರುತ್ತಾರೋ ಅವರ ಮಹರ್ದಶೆ ಅಂತರದಶೆಗಳಲ್ಲಿ ಮಾತ್ರ ಶಾರೀರಿಕ ಪೀಡೆ ಉಂಟಾಗುತ್ತದೆ ವಿನಃ ಉಳಿದ ಗ್ರಹಗಳ ಮಹರ್ದಶೆ ಅಂತರದಶೆಗಳಲ್ಲಿ ಇರುವುದಿಲ್ಲ. ಇಲ್ಲಿ ಇನ್ನೊಂದು ಅವಧಿಯಲ್ಲಿಗಮನಿಸತಕ್ಕ ಸಂಗತಿಯೆಂದರೆ ಮಹರ್ದಶೆ ಅಂತರದಶೆಗಳು ಗಡಿಯಾರದ ತಾಸಿನ ಮುಳ್ಳುಗಳಾದರೆ ಗೋಚರಿ ಗ್ರಹಗಳ ಪರಿಭ್ರಮಣ ಮಿನಿಟಿನ ಮುಳ್ಳು ಇದ್ದಂತೆ. ಮಹರ್ದಶೆ ಅಂತರದರ್ಶೆಗಳ ಸಮಗ್ರ ವಿವರಣೆಯನ್ನು ನಾವು ಬರೆದು ಪ್ರಕಟಿಸಬೇಕೆಂದಿರುವ **"ದಶಾದರ್ಪಣ"** ಗ್ರಂಥದಲ್ಲಿ ವಿವರವಾಗಿ ವಿವರಿಸಲಾಗುವುದು.

## 8] ಜಾತಕನ ಜನನ ಸಮಯದಲ್ಲಿಯ ನಕ್ಷತ್ರಾದಿ ದೋಷಗಳ ವಿಚಾರ

ಯಾರೊಬ್ಬರ ಆರೋಗ್ಯದ ಬಗೆಗೆ ವಿಚಾರಿಸುವಾಗ ಅವರ ಜನ್ಮ ಸಮಯದಲ್ಲಿಯ ನಕ್ಷತ್ರಾದಿ ದೋಷಗಳ ವಿಚಾರ ಮಾಡಬೇಕಾಗುತ್ತದೆ. ಅಷ್ಟೇಏಕೆ ಕೆಲ ದುಷ್ಟನಕ್ಷತ್ರಗಳಲ್ಲಿಜನಿಸಿದ ಮಕ್ಕಳ ತಂದೆ-ತಾಯಿ ಅಣ್ಣ ತಮ್ಮ, ಸೋದರಮಾವಂದಿರಿಗೂ ಕೂಡ ಅನಿಷ್ಟವಾಗಬಹುದಾಗಿದೆ. ಇವುಗಳಿಗೆಲ್ಲ ಶಾಸ್ತ್ರ ಪ್ರಕಾರ ವಿಧಿ, ವಿಧಾನ (ಶಾಂತಿ) ಗಳನ್ನು ಅನುಸರಿಸಿದರೆ ಆ ದೋಷಗಳು ಪರಿಹಾರವಾಗುತ್ತವೆ. ಆದುದರಿಂದ ಜನನ ಸಮಯದಲ್ಲಿಯ ನಕ್ಷತ್ರಾದಿ ದೋಷಗಳಾವುವು ಎಂಬುದನ್ನು ಈ ಕೆಳಗಿನಂತೆ ಬರೆಯಲಾಗಿದೆ.

1] **ತಿಥಿದೋಷ**:— ಯಾವುದೇ ತಿಂಗಳ ಕೃಷ್ಣ ಪಕ್ಷದ ಚತುರ್ದಶಿ ಹಾಗೂ ಅಮಾವಾಸಿ ದಿನ ಜನನವಾದರೆ ಮಗುವಿನ ಆರೋಗ್ಯ ದೃಷ್ಟಿಯಿಂದ ಅನಿಷ್ಟದಾಯಕವು.

2] **ತಿಥಿಗಂಡಾಂತರ** :— ಯಾವುದೇ ತಿಂಗಳ ಯಾವುದೇ ಪಕ್ಷದ ಪಂಚಮಿ ಹಾಗೂ ಷಷ್ಠಿ, ದಶಮಿ ಹಾಗೂ ಏಕಾದಶಿ ಮತ್ತು ಪೂರ್ಣಿಮಾಯುಕ್ತ ವದ್ಯ ಪ್ರತಿಪದಾ, ಅಮಾವಾಸಿ ಯುಕ್ತ ಶುದ್ಧ ಪ್ರತಿಪದಾ, ಈ ತಿಥಿಗಳ ಸಂಧಿಕಾಲದಲ್ಲಿ ಜನಿಸಿದರೆ ಮಗುವಿಗೆ

ಅನಿಷ್ಟವಿದೆ ಸಂಧೀಕಾಲವೆಂದರೆ ಮೇಲೆ ಬರೆದ ತಿಥಿಗಳ ಕೊನೆಯ ಹಾಗೂ ಪ್ರಾರಂಭದ ತಿಥಿಗಳ 2 ಘಳಿಗೆ ಮಧ್ಯದಲ್ಲಿ ಜನಿಸಿದ ಮಗುವಿನ ಆರೋಗ್ಯಕ್ಕೆ ತ್ರಾಸದಾಯಕ.

3] **ಲಗ್ನಗಂಡಾಂತರ:—** ಕರ್ಕ–ಸಿಂಹ, ವೃಶ್ಚಿಕ–ಧನು, ಮೀನ–ಮೇಷ ಈ ಲಗ್ನಗಳ ಸಂಧಿಗ್ದಕಾಲದಲ್ಲಿ ಜನಿಸಿದ ಜಾತಕನ ಆರೋಗ್ಯದೃಷ್ಟಿಯಿಂದ ಅನಿಷ್ಟದಾಯಕ ಎರಡು ಲಗ್ನಗಳ ಪಾರಂಭ ಹಾಗೂ ಅಂತ್ಯದ ಒಂದು ಘಳಿಗೆ ಮಧ್ಯದಲ್ಲಿ ಜನಿಸಿದ ಜಾತಕನಿಗೆ ತ್ರಾಸದಾಯಕ.

4] **ಕ್ಷಯತಿಥಿ:—** ಕ್ಷಯತಿಥಿಯಲ್ಲಿ ಜನಿಸಿದ ಶಿಶುವಿಗೆ ಆರೋಗ್ಯಕ್ಕೆ ಹಾನಿಕಾರಕವು.

5] **ನಕ್ಷತ್ರಾದಿದೋಷಗಳು:—** ಆಶ್ಲೇಷಾ, ಜೇಷ್ಠಾ, ಮೂಲಾ ಈ ಮೂರು ನಕ್ಷತ್ರದಲ್ಲಿ ಜನಿಸಿದ ಮಕ್ಕಳಿಗೆ ಅನಿಷ್ಟವಿರುತ್ತದೆ. ಇಷ್ಟೇಅಲ್ಲ ಅವರ ಮಾತಾ–ಪಿತರಿಗೂ, ಸಹೋದರ, ಸಹೋದರಿಯರಿಗೂ ಅರಿಷ್ಟವಿರುತ್ತದೆ.

6] **ದುಷ್ಟನಕ್ಷತ್ರಗಳು:—** ಚಿತ್ತಾನಕ್ಷತ್ರದ ಪೂರ್ವಾರ್ಧ ಅಂದರೆ ಮೊದಲಿನ 2ಚರಣಗಳು ಪುಷ್ಯ ನಕ್ಷತ್ರದ 2ನೇ 3ನೇ ಚರಣ ಪೂರ್ವಾಷಾಢದ 3ನೇ ಚರಣ ಉತ್ತರಾ ನಕ್ಷತ್ರದ ಪ್ರಥಮ ಚರಣ, ಮಘಾ ನಕ್ಷತ್ರದ ಪ್ರಥಮ ಚರಣ ರೇವತೀ ನಕ್ಷತ್ರದ ಕೊನೆಯ ಚರಣದ 2 ಘಳಿಗೆ ಅಶ್ವಿನಿ ನಕ್ಷತ್ರದ ಪ್ರಥಮ ಚರಣದ ಪ್ರಾರಂಭದ 2 ಘಳಿಗೆ ವಿಶಾಖ ನಕ್ಷತ್ರದ ಕೊನೆಯ ಚರಣ ಹೀಗೆ ಮೇಲೆ ಬರೆದ ನಕ್ಷತ್ರದಲ್ಲಿ ಜನಿಸಿದ ಮಕ್ಕಳಿಗೆ ಅನಿಷ್ಟವಿರುತ್ತದೆ.

7] **ಎಕ ನಕ್ಷತ್ರದೋಷ:—** ಮಾತಾ–ಪಿತರ ಹಾಗೂ ಸಹೋದರ–ಸಹೋದರೀಯರ ಜನನದ ನಕ್ಷತ್ರ ಒಂದೇ ಆದರೆ ಎಕ ನಕ್ಷತ್ರದ ದೋಷ ಉಂಟಾಗುತ್ತದೆ.

8) **ಯೋಗಕರಣಗಳ ದೋಷ:—** ವೈಧೃತಿ, ವ್ಯತಿಪಾತ, ಭದ್ರಾ ಪರೀಘ ದಗ್ಧ ತಿಥಿ, ಮೃತ್ಯುಯೋಗ, ದಾರುಣಯೋಗ ಈ ಯೋಗಕರಣಗಳು ಜನನಕ್ಕೆ ಅನಿಷ್ಟವು.

9) **ಗ್ರಹಣ ಗಂಡಾಂತರ** :— ಚಂದ್ರಗ್ರಹಣ, ಸೂರ್ಯ ಗ್ರಹಣದ ಸಮಯದಲ್ಲಿ ಜನಿಸಿದ ಮಗುವಿನ ಆರೋಗ್ಯದೃಷ್ಟಿಯಿಂದ ಅನಿಷ್ಟದಾಯಕ.

10) **ಅವಳಿ-ಜವಳಿ ಜನನ ದೋಷ** :— ಅವಳಿ-ಜವಳಿ ಮಕ್ಕಳಾದರೆ ಮಕ್ಕಳಿಗೆ ದೋಷವಿರುತ್ತದೆ.

11] **ತ್ರೀಪ್ರಸವದೋಷ**:— ಮೂರು ಗಂಡಿನಮೇಲೆ ಒಂದು ಹೆಣ್ಣು ಹಾಗೂ ಮೂರು ಹೆಣ್ಣಿನ ಮೇಲೆ ಗಂಡು ಜನನವಾದರೆ ತ್ರಿಪ್ರಸವದೋಷ ವಾಗುತ್ತದೆ.

12] **ದಂತಜನನದೊಷ**:— ಕೆಲ ಶಿಸುಗಳಿಗೆ ಜನಿಸಿದ ಸಮಯ ದಲ್ಲಿಯೇ ಹಲ್ಲುಗಳು ಬಂದಿರುತ್ತವೆ. ಅದು ದೋಷವಿರುತ್ತದೆ.

13] **ಅಧೋಮುಖ ಜನನದೋಷ** :— ಅಧೋಮುಖ ವಾಗಿ ಜನಿಸಿದರೆ ಅರಿಷ್ಟವು ಇದರಂತೆ ಕಾಲು ಮುಂದಾಗಿ ಜನಿಸಿದರೆ ಅನಿಷ್ಟವು.

ಯಾರೊಬ್ಬರ ಆರೋಗ್ಯದ ವಿಷಯವಾಗಿ ವಿಚಾರಿಸುವಾಗ ಜನನ ಸಮಯದಲ್ಲಿಯ ನಕ್ಷತ್ರಾದಿ ದೋಷಗಳ ವಿಚಾರ ಮಾಡುವುದು ಅತ್ಯಾವಶ್ಯಕ ಏಕೆಂದರೆ ಜನನ ಸಮಯದಲ್ಲಿಯ ನಕ್ಷತ್ರದ ದೋಷಗಳು ಕೆಲವೊಮ್ಮೆ ಆ ಮಕ್ಕಳ ಮಾತಾ-ಪಿತರರಿಗೂ ಸಹೋದರ ಸಹೋದರಿಯರಿಗೂ ಅರಿಷ್ಟ ದಾಯಕ ವಿರುತ್ತವೆ.

ಯಾರೊಬ್ಬರ ಆರೋಗ್ಯ ಹಾಗೂ ಆಯುರ್ಮಾನದ ವಿಷಯವಾಗಿ ಪ್ರಮುಖವಾಗಿ ಎಂಟುಸಂಗಾತಿಗಳನ್ನು ಏಕೆ ಹಾಗೂ ಹೇಗೆ ಪರಿಶಿಲಿಸಬೇಕೆಂ ದನ್ನು ಪರಿಶೀಲಿಸಿದ್ದಾಯಿತು. ಇನ್ನು ಯಾವ ಯಾವ ಮುಂಜಾಗ್ರತೆ ಕ್ರಮ ಗಳನ್ನು ಕೈಕೊಳ್ಳಬೇಕು ಯಾವ ಯಾವ ಪರಿಹಾರ ಕ್ರಮಗಳನ್ನು ಕೈಕೊಳ್ಳ ಬೇಕು ಎಂಬುದನ್ನು ಪರಿಶೀಲಿಸುವಾ

1] **ಆರೋಗ್ಯದ ವಿಷಯವಾಗಿ ಮುಂಜಾಗ್ರತೆ ಕ್ರಮ** :— ಆರೋಗ್ಯದ ವಿಷಯವಾಗಿ ಯಾವ ಯಾವ ಮುಂಜಾಗ್ರತೆ ಕ್ರಮಗಳನ್ನು ಕೈ

ಕೊಳ್ಳಬೇಕು. ಎಂಬುದನ್ನು ಮೊದಲು ಪ್ರಸ್ತಾಪಿಸುತ್ತೇನೆ. ಏಕೆಂದರೆ ಮುಂಜಾಗ್ರತೆ ಕ್ರಮ ಕೈಕೊಳ್ಳುವ ವಿಧಾನವೆಂದರೆ **"ಪ್ರಯತ್ನವಾದವು** ಅರ್ಥಾತ್ ವ್ಯಕ್ತಿಯು ಕೈಕೊಳ್ಳುವ ಕ್ರಮವು ದೈವಜ್ಞರು ಪ್ರಯತ್ನವಾದ ವನ್ನು ಅಲ್ಲಗಳೆಯುವುದಿಲ್ಲ. ಅಶುಭ ಕಾಲ ವಿದ್ದಾಗ ಸಾವಧಾನದಿಂದ ನಡೆ ಯಿರಿ ಎಂದು ಎಚ್ಚರಿಸುವರೇ ವಿನಃ ಕೈಕಟ್ಟಿಕೊಂಡು ಕುಳಿತುಕೊಳ್ಳಿರಿ. ಎಂದು ಹೇಳುವುದಿಲ್ಲ ಗಾಳಿಬಿಟ್ಟಾಗ ತೂರಿಕೊಳ್ಳಿರಿ ಅನುಕೂಲ ಕಾಲ ವಿದ್ದಾಗ ರಭಸದಿಂದ ಕಾರ್ಯಕ್ಕೆಕೊಳ್ಳಿರಿ ಎಂದು ಸೂಚಿಸುವರು. ಅಲ್ಲದೆ ಹಿಂದೆ ಹೇಳಿ ದಂತೆ ಮುಂಜಾಗ್ರತೆ ಕ್ರಮವು ಪೂರ್ವಾರ್ಧವಾದರೆ ಪರಿಹಾರವು ಉತ್ತ ರಾರ್ಧವು ಮುಂಜಾಗ್ರತೆ ಕ್ರಮವು ವ್ಯಕ್ತಿಯ ಕೈಯಲ್ಲಿ ಅರ್ಥಾತ ಪ್ರಯತ್ನ ವಾದವಾದರೆ ಪರಿಹಾರ ಕ್ರಮದಿಂದ ತೊಂದರೆ ನಿವಾರಣೆ ಯಾಗುವುದು. ದೈವಾಧೀನವು ಈ ದೃಷ್ಟಿಕೋನದಿಂದ ಆರೋಗ್ಯದ ವಿಷಯವಾಗಿ ಯಾವ ಯಾವ ಮುಂಜಾಗ್ರತೆ ಕ್ರಮಗಳನ್ನು ಕೈಕೊಳ್ಳಬೇಕೆಂಬುದನ್ನು ಈ ಕೆಳಗಿನಂತೆ ಕೊಡಲಾಗಿದೆ.

1] ಲಗ್ನದಲ್ಲಿ ದುರ್ಬಲ, ನಿರ್ಬಲ ಗ್ರಹಗಳಿದ್ದು ಇಲ್ಲವೇ ಲಗ್ನದಲ್ಲಿ ಯಾವುದೇ ಗ್ರಹವಿಲ್ಲದಿರುವಿಕೆ] ಲಗ್ನೇಶು ದುರ್ಬಲ ನಿರ್ಬಲನಿದ್ದ ಜಾತಕನು ಸದಾ ರೋಗಪೀಡಿತನಿರುತ್ತಾನೆ. ಅಲ್ಲದೇ ಸ್ವಭಾವ ಜನ್ಮರೋಗಪೀಡಿತನೂ ಇರುತ್ತಾನೆ. ಇದರಂತೆ ಷಷ್ಠಸ್ಥಾನದಲ್ಲಿ ದುರ್ಬಲ, ನಿರ್ಬಲ ಗ್ರಹಗಳಿದ್ದು, [ಷಷ್ಠದಲ್ಲಿ ಯಾವುದೇ ಗ್ರಹವಿಲ್ಲದಿರುವಿಕೆ] ಷಷ್ಠೇಶನೂ ದುರ್ಬಲ, ನಿರ್ಬಲ, ನಿದ್ದ ಜಾತಕನು ಸದಾರೋಗ ಪೀಡಿತನಿರುತ್ತಾನೆ. ಅಲ್ಲದೆ **"ತೀವ್ರ ಬಾಧೆಯ ರೋಗಗಳು"** ತೀವ್ರವಾಗಿ ಅಂಟಿಕೊಳ್ಳುತ್ತವೆ. ಆದುದರಿಂದ ಇಂಥ ಜಾತ ಕನು ಪ್ರತಿನಿತ್ಯ ಅರುಣೋದಯದ ಸಮಯದಲ್ಲಿ ಊರಹೊರಗಿನ ಬೈಲು ಪ್ರದೇಶದಲ್ಲಿ ವಾಯು ವಿಹಾರ ಕೈಕೊಳ್ಳಬೇಕು ಅಂದರೆ ಓಝೋನ್ ಹೆಚ್ಚು ಇರುವ ಸಮಯದಲ್ಲಿ ವಾಯು ವಿಹಾರ ಕೈಕೊಳ್ಳಬೇಕು ಹಾಗೂ ಪ್ರತಿನಿತ್ಯ ವ್ಯಾಯಾಮ ಮಾಡಬೇಕು ಆಸನಗಳನ್ನು ಹಾಕಬೇಕು. ಇಲ್ಲಿ ಒಂದು ಮಹ ತ್ವದ ಸಂಗತಿಯನ್ನು ಸ್ಪಷ್ಟೀಕರಿಸಬೇಕಾಗಿದೆ ಅದೇನೆಂದರೆ ಆಸನ ಮಾಡುವು ದೆಂದರೆ ಯೋಗಸಾಧನ ಮಾಡುವುದೆಂಬುದು ಕೆಲ ಜನರ ತಿಳುವಳಿಕೆಯಾಗಿದೆ

ಆದರೆ ಆಸನ ಮಾಡುವುದೆಂದರೆ ಒಂದು ಪ್ರಕಾರದ ವ್ಯಾಯಾಮ ಮಾಡುವಿಕೆ ಕೈಕಾಲುಗಳನ್ನು ಬಗ್ಗಿಸುವಿಕೆ ಹೊರಳಿಸುವಿಕೆ ಇತ್ಯಾದಿ ಆದರೆ ಯೋಗಾಸನ ದಲ್ಲಿ ಅಧ್ಯಾತ್ಮಿಕ ಹಿನ್ನಲೆ. ಚಿಂತನೆ ಇದೆ ಇದಕ್ಕೊಂದು ಸಣ್ಣ ಉಧಾರಣೆ ಕೇವಲ ಸೂರ್ಯ ನಮಸ್ಕಾರ ಹಾಕಿದರೆ ಆಸನವಾಗುತ್ತದೆ. ಆದರೆ ಅದೇ ಸೂರ್ಯನಮಸ್ಕಾರವನ್ನು ಸೂರ್ಯನ ನಾಮಾವಳಿಯನ್ನು ಉಚ್ಚರಿಸುತ್ತ ಆಸನ ಹಾಕಿದರೆ ಇದಕ್ಕೆ ಯೋಗಾಸನ ಎನ್ನಬಹುದು ಇದರಂತೆ ಪ್ರಾಣಾ ಯಾಮ ಇತ್ಯಾದಿ ಯೋಗಾಸನಗಳಿವೆ ಯೋಗಾಸನಗಳಲ್ಲಿ ಅನೇಕ ಪ್ರಕಾರ ಗಳಿವೆ ಪಾತಂಜಲಿ ಯೋಗವೊದಲಾದವುಗಳು ಅಲ್ಲದೇ ಪಾತಂಜಲಿ ರೂಪಿಸಿದ ಎಂಟು ಅಂಗಗಳಾದ [ಅಷ್ಟಾಂಗ ಯೋಗ] ಯಮ, ನಿಯಮ, ಆಸನ ಪ್ರಾಣಾಯಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ ಈ ಎಂಟು ಅಂಗ ಗಳನ್ನಾದರೂ ಜಾತಕನು ಸಾಧಿಸಿದಲ್ಲಿ ಆತನ ಆರೋಗ್ಯ ಸುಧಾರಿಸು ತ್ತದೆ.

2] ಅಷ್ಟಮ ಸ್ಥಾನದಲ್ಲಿ ದುರ್ಬಲ ನಿರ್ಬಲಗ್ರಹಗಳಿದ್ದು [ಅಷ್ಟಮ ದಲ್ಲಿ ಯಾವುದೇ ಗ್ರಹಇಲ್ಲದಿರುವಿಕೆ] ಅಷ್ಟಮೇಶನೂ ದುರ್ಬಲ ನಿರ್ಬಲ ನಿದ್ದ ಜಾತಕನಿಗೆ **"ತೀವ್ರ ಮರಣ ಸೂಚಕ ರೋಗಗಳ ಭೀತಿ"** ಇದೆ ಅಲ್ಲದೇ ಪ್ಲೇಗ, ಕಾಲರಾ ಮೊದಲಾದ ಸಾಂಸರ್ಗಿಕ ರೋಗಗಳು ಕೂಡ ಅಷ್ಟಮೇಶ ದುರ್ಬಲನಿರುವ ವ್ಯಕ್ತಿಗಳಿಗೆ ಅಂಟಿಕೊಳ್ಳುವ ಸಂಭವವಿದೆ ಇದರಂತೆ ಶನಿ ದೃಷ್ಟಿತ ಸೂರ್ಯನಿದ್ದ ಜಾತಕನಿಗೆ ಜಾತಕದಲ್ಲಿ ಸೂರ್ಯನೂ ದುರ್ಬಲನಿದ್ದ ಜಾತಕನಿಗೆ ತೀವ್ರ ಮರಣ ಸೂಚಕ ರೋಗಗಳು ಹಾಗೂ ಕಾಲರಾ, ಪ್ಲೇಗ ಮೊದಲಾದ ಸಾಂಸರ್ಗಿಕ ರೋಗಗಳು ತಗಲುವ ಸಂಭವವಿದೆ. ಅಲ್ಲದೇ ಗೋಚರಿ ಗ್ರಹಗಳು ಅಶುಭರಿದ್ದಾಗ ಆದರಲ್ಲಿಯೂ ಗುರು, ಶನಿಯರು ಅಶುಭರಿದ್ದಾಗ ಮೇಲೆ ಬರೆದ ರೋಗಗಳು ತಾಲಗುಬಹುದಾಗಿದೆ ಅಲ್ಲದೇ ಮಹರ್ವಾಶಿ ಅಂತರದರ್ಶಿಗಳು ಅಶುಭರಿದ್ದಾಗ ಕೂಡ ಮೇಲೆ ಬರೆದ ರೋಗ ಗಳು ತಾಗಲು ಬಹುದಾಗಿದೆ ಆದುದರಿಂದ ಈ ಸಮಯದಲ್ಲಿ ಸಾಂಸರ್ಗಿಕ ರೋಗಗಳು ಸುಳುವು ಸಿಕ್ಕಕೂಡಲೇ ಮುಂಜಾಗ್ರತೆ ಕ್ರಮ ವಹಿಸಬೇಕು ಇವ ರಂತೆಶನಿ, ಮಂಗಳದ ಯುತಿಯೋಗ ಪ್ರತಿಯೋಗ ದೃಷ್ಟಿಯೋಗಶನಿ-ಚಂದ್ರರ

ಯುತಿಯೋಗ ಪ್ರತಿಯೋಗ ಶನಿದೃಷ್ಟತ ಚಂದ್ರ, ಶನಿ ದೃಷ್ಟಿತ ಮಂಗಳ ನಿದ್ದ ಜಾತಕನ ಹಾಗೂ ಜಾತಕದಲ್ಲಿ ಕಾಳಸರ್ಪ ಯೋಗ ವಿದ್ದ ಜಾತಕನಿಗೆ ವಾಹನಗಳಿಂದಲೂ ಮಶಿನರಿಗಳಿಂದ ಅಪಘಾತಗಳಾಗಬಹುದಾಗಿದೆ. ಆದುದ ರಿಂದ ಈ ಪ್ರಕಾರದ ಯೋಗಗಳ ಜಾತಕನು ವಾಹನ ಚಲಾಯಿಸುವಾಗ ಮಶಿನರೀ ಉಪಯೋಗಿಸುವಾಗ ಎಚ್ಚರವಾಗಿರಬೇಕು ಅದರಲ್ಲಿಯೂ ಓಡಾಡಿ ಮಾಡುವ ಬಾಹ್ಯ ಕೆಲಸಗಾರರು ತಾಂತ್ರಿಕ ಕೆಲಸಗಾರರು ಶ್ರಮ ಜೀವಿಗಳು ವಿಶೇಷ ಎಚ್ಚರಿಕೆ ವಹಿಸಬೇಕು.

ಶನಿ ದೃಷ್ಟತ ಚಂದ್ರನ ದುರ್ಬಲನಾಗಿದ್ದ ಜಾತಕನಿಗೆ ಶತ್ರುಪೀಡೆ ಮಾಟ ಮದ್ದುಗಳಕಾಟ ಭೂತ ಪಿಶಾಚಿಗಳ ಕಾಟಗಳಿಂದ ಮಾನಸಿಕ ತೊಂದರೆಗೊಳ ಗಾಗಬಹುದಾಗಿದೆ. ಅದಕ್ಕಾಗಿ ಇಂಥ ಜಾತಕರು ಅಪರಿಚಿತರಲ್ಲಿ ಅನ್ನಪಾನಾದಿ ಸೇವಿಸುದಾಗ ಎಚ್ಚರ ವಹಿಸಬೇಕು ಹಾಗೂ ಮೇಲೆ ವಿವರಿಸಿದ ಅಂಷ್ಟಾಂಗ ಗಳಲ್ಲಿ ಮೊವಲಿನ 4 ಅಂಗಗಳನ್ನು ರೂಡಿಸಿಕೊಂಡಲ್ಲಿ ಇವುಗಳ ಬಾಧೆತಗಲು ವುದಿಲ್ಲ.

**ಆರೋಗ್ಯ ಸುಧಾರಣೆಗಾಗಿ ಹಾಗೂ ಆಯುಷಿ ವೃದ್ಧಿಗಾಗಿ ಪರಿ ಹಾರದ ಕ್ರಮಗಳು :—** ಆಯುಷ್ಯ ವೃದ್ಧಿಗಾಗಿ ಆರೋಗ್ಯ ಸುಧಾರಣೆ ಗಾಗಿ ಯಾವ ಯಾವ ಪರಿಹಾರ ಕ್ರಮಗಳನ್ನು ಕೈಕೊಳ್ಳಬೇಕೆಂಬುದನ್ನು ಈ ಕೆಳಗಿನಂತೆ ಬರೆಯಲಾಗಿದೆ.

ಪ್ರಪ್ರಥಮವಾಗಿ ಇದೇ ಅಧ್ಯಾಯ 36ರಿಂದ 38ನೇ ಪುಟಗಳಲ್ಲಿ ವಿವರಿಸಿದಂತೆ ಜನನ ಸಮಯದಲ್ಲಿಯ ಆಶ್ಲೇಷಾ,ಜ್ಯೆಷ್ಠಾ, ಮೂಲಾ ನಕ್ಷತ್ರಾದಿ ದೋಷಗಳು ದುಷ್ಟ ನಕ್ಷತ್ರಾದಿ ದೋಷಗಳು ತಿಥಿಗಂಡಾಂತರ ಲಗ್ನಗಂಡಾಂತರ ತ್ರಿಪ್ರಸವ ದೋಷ, ಯೋಗಕರಣಾದಿ ದೋಷ ಅಧೋಮುಖಿಜನನ, ದಂತ ಜನನ ಮೊದಲಾದ ಜನನ ಸಮಯದಲ್ಲಿಯ 13 ದೋಷಗಳ ನಿವಾರಣೆಗಾಗಿ ತಕ್ಕ ಶಾಂತಿ ಮಾಡಿಸಬೇಕು.

ಮಗು ಜನಿಸಿದ 2ನೇ ದಿನದಿಂದ 12ನೇ [ದಿನದವರೆಗಿನಕಾಲದಲ್ಲಿ ಅಂದರೆ ನಾಮಕರಣ ಸಮಾರಂಭವಾಗುವವರೆಗೆ ಶಾಂತಿ ಪಠಣ ಇಲ್ಲವೆ ರಾತ್ರಿ

ಸೂಕ್ತಾಗಳನ್ನು ಪಠಿಸಬೇಕು. ಏಕೆಂದರೆ ಕುಸು ಬಾಣಂತಿಯರನ್ನು ನೋಡಲು ಬರುವ ಕೆಲಜನರ ದೃಷ್ಟಿದೋಷ ನಿವಾರಣೆಗಾಗಿ ಹಾಗೂ ಕ್ರಿಮಿ, ಕೀಟ, ಹಾವು ಚೇಳು ಮೊದಲಾದ ವಿಷಜಂತುಗಳಿಂದಾಗುವ ಬಾಧೆ ನಿವಾರಣೆಗಾಗಿ ಹಾಗೂ ಹಸೀ ಬಾಣಂತಿಯರಿಗೆ ತಗುಲಬಹುದಾದ ಭೂತ, ಪಿಶಾಚಿಗಳ ಕಾಟ ನಿವಾರಣೆಗಾಗಿ ಹೀಗೆ ಮೂರು ಉದ್ದೇಶಕ್ಕಾಗಿ **"ಶಾಂತಿ ಪಾಠ" "ರಾತ್ರಿ ಸೂಕ್ತ"** ಗಳನ್ನು ಕುಸುಮಬಾಣಂತಿಯರಿಗೆ ಕೇಳಿಸುವಂತೆ ಗಟ್ಟಿ ಧ್ವನಿಯಲ್ಲಿ ಪ್ರಸವವಾದ 2ನೇದಿನದಿಂದ 12ನೇ ದಿನದವರೆಗೆ ಅಥವಾ 13ನೇ ದಿನದವರೆಗೆ ಅಂದರೆ ನಾಮಕರಣ ಸಮಾರಂಭದವರೆಗೆ ಈ ಎರಡು ಮಂತ್ರ ಗಳನ್ನು ಪಠಿಸಬೇಕು. ಅಥವಾ ಬಲ್ಲವರಿಂದ ಪಠಿಸಲು ಹಚ್ಚಬೇಕು.

3) ಜನನ ಸಮಯದಲ್ಲಿಯ ನಕ್ಷತ್ರಾದಿ ದೋಷಗಳ ನಿವಾರಣೆಯ ನಂತರ ಜಾತಕನಅಷ್ಟಮ ಸ್ಥಾನವನ್ನು ಮೊದಲು ಪರಿಶೀಲಿಸಿ ಅಷ್ಟಮಸ್ಥಾನ ದಿಂದಾಗುವ ದೋಷಗಳ ಪರಿಹಾರದ ಕ್ರಮಗಳನ್ನು ಮೊದಲು ಕೈಕೊಳ್ಳ ಬೇಕು. ಏಕೆಂದರೆ ಅಷ್ಟಮಸ್ಥಾನವಿದು ಮೃತ್ಯುಸ್ಥಾನ ಎಲ್ಲ ಪ್ರಕಾರದ ದುರ್ಮರಣಕಾರಕ ಸ್ಥಾನವೂ ಹೌದು. ಅಂದರೆ ಆತ್ಮಹತ್ಯೆ, ಕೊಲೆ ಅಪಘಾತ ಮೊದಲಾದ ರೀತಿಯಿಂದ ತೀವ್ರ ಮರಣ ಸೂಚಕ ಸ್ಥಾನವು ಇರುತ್ತದೆ. ಇದು ಅಲ್ಲದೇ ಯಾರೊಬ್ಬ ಜಾತಕನ ಆಯುರ್ಮಾನದ ಸ್ಥಾನವೂ ಹೌದು ಅಂದರೆ ಯಾರೊಬ್ಬ ಜಾತಕನು ಅಲ್ಪಾಯು, ಮಧ್ಯ- ಮಾಯು, ದೀರ್ಘಾಯು ಇರುವನೋ ಹೇಗೆ ಎಂಬುದನ್ನು ಕಂಡು ಹಿಡಿಯಲು ಅಷ್ಟಮ ಸ್ಥಾನವನ್ನು ಪರಿಶೀಲಿಸುತ್ತಾರೆ. ಇದು ಅಲ್ಲದೆ ಅಷ್ಟಮಸ್ಥಾನವು ಬಾಲಾರಿಷ್ಟ ಅಶುಭಯೋಗದ ಸ್ಥಾನವೂ ಇರುತ್ತದೆ. ಆದುದರಿಂದ ಅಷ್ಟಮ ಸ್ಥಾನದಲ್ಲಿ ದುರ್ಬಲ, ನಿರ್ಬಲ ಗ್ರಹಗಳಿದ್ದು ಅಷ್ಟ ಮೇಶನು ದುರ್ಬಲ ನಿರ್ಬಲನಿದ್ದ ಜಾತಕನು ತೀವ್ರ ಮರಣ ಸೂಚಕ ರೋಗಗಳ ಭೀತಿ, ಸಾಂಸರ್ಗಿಕ ರೋಗಗಳ ಭೀತಿ ಅಲ್ಲದೆ ಆತ್ಮಹತ್ಯೆ, ಕೊಲೆ, ಅಪಘಾತಾದ ದುರ್ಮರಣದ ಭೀತಿಯೂ ಇರುತ್ತದೆ. ಅಲ್ಲದೆ ಕುಜ-ರಾಹು ಮಹರ್ದೆಶೆಯ ಸಂಧಿಕಾಲದಲ್ಲಿ ಆರೋಗ್ಯಕ್ಕೆ ಗಂಡಾಂತರವಿರುತ್ತದೆ.

ಶನಿ-ಮಂಗಳ, ಶನಿ-ಚಂದ್ರ, ಶನಿ-ರವಿ ಈ ಗ್ರಹಗಳ ಯುತಿ ಯೋಗ, ಪ್ರತಿಯೋಗ, ದೃಷ್ಟಿಯೋಗ, ಲಗ್ನ, ಷಷ್ಠ, ಅಷ್ಟಮ, ವ್ಯಯ ಈ ಸ್ಥಾನಗಳಲ್ಲಿದ್ದರೆ ದುರ್ಮರಣದ ಭೀತಿಯು ಉಂಟು ಇದು ಅಲ್ಲದೆ ಅಷ್ಟಮದಲ್ಲಿ ದುರ್ಬಲ, ನಿರ್ಬಲ, ಗ್ರಹಗಳಿದ್ದು, ಅಷ್ಟಮೇಶನು ದುರ್ಬಲ, ನಿರ್ಬಲನಿದ್ದು ಆ ಗ್ರಹಗಳು ಅಂದರೆ ಅಷ್ಟಮದಲ್ಲಿರುವ ದುರ್ಬಲ ಗ್ರಹಗಳ ಹಾಗೂ ದುರ್ಬಲ, ನಿರ್ಬಲ ಅಷ್ಟಮೇಶರ ಮಹದರ್ಸೆ ಅಂತರ ದಸೆ ನಡೆಯುವ ಸಮಯದಲ್ಲಿ ಹಾಗೂ ಗೋಚರಿ ಗ್ರಹಗಳ ಅಶುಭರಿದ್ದಾಗ ವಿಶೇಷವಾಗಿ ಗುರು-ಶನಿಯರು ಅಶುಭರಿದ್ದಾಗ ಸಾಂಸರ್ಗಿಕ ರೋಗಗಳಿಂದಾಗಲಿ ದುರ್ಮರಣಗಳಂಥ ಅಶುಭ ಯೋಗಗಳಿಂದಾಗಲೀ ತೀವ್ರ ಮರಣ ಸೂಚಕ ರೋಗಗಳ ಭೀತಿಯಿಂದಾಗಲಿ ಜೀವಕ್ಕೆ ಗಂಡಾಂತರವಾಗುವುದಾಗಿದೆ. ಈ ಎಲ್ಲ ದೋಷಗಳ ನಿವಾರಣೆಗಾಗಿ ಈ ಕೆಳಗೆ ಬರೆದ ಪರಿಹಾರ ಕ್ರಮಗಳನ್ನು ಕೈಕೊಳ್ಳಬೇಕು.

1) ಮಹಾಮೃತ್ಯುಂಜಯದ 11ಲಕ್ಷ ಜಪಮಾಡಬೇಕು ಹೋಮ ಮಾಡಿದರಂತೂ ಇನ್ನೂ ಉತ್ತಮ 2) ಋಗ್ವೇದದೊಳಗಿನ ಮನ್ಯು ಸೂತ್ರದ 10 ಸಾವಿರ ಜಪ ಮಾಡಬೇಕು. 3) ನರಸಿಂಹ ಕವಚ ಅಥವಾ ಸ್ತೋತ್ರ ಪಠಣಮಾಡಬೇಕು 4)ಶಿವಕವಚ ಪಠಣಮಾಡಬೇಕು 5)ಅಲ್ಪಾಯು ವ್ಯಕ್ತಿಗಳು ಪ್ರತಿ ಅಮಾವಾಸ್ಯ ದಿನ ತುಪ್ಪದ ಬಟ್ಟಲಿನಲ್ಲಿ ತನ್ನ ಮುಖನೋಡಿ ಯಥಾಶಕ್ತಿ ದಕ್ಷಿಣೆ ಹಾಗೂ ತುಪ್ಪದೊಂದಿಗೆ ಸತ್‌ಪಾತ್ರರಿಗೆ ದಾನಮಾಡಬೇಕು. 6] ಗಾಯಿತ್ರಿಮಂತ್ರ ಹಾಗೂ ವಿಷ್ಣುಸಹಸ್ರನಾಮ ನಿತ್ಯ ಪಠಣ ಮಾಡಬೇಕು. 7] ಪ್ರತಿ ನಿತ್ಯ ರುದ್ರ ಪಠಣ ಮಾಡಬೇಕು. 8] ಓಂ **ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಮ್। ಉರ್ವಾರುಕಮ್ಮಿವ ಬಂಧನಾತ್ ಮೃತ್ಯೋರ್‌ಮುಕ್ಷೀಯಮಾಮ್‌ಅಮೃತಾತ್॥** ಈ ಮಂತ್ರ ಪ್ರತಿನಿತ್ಯ 108 ಸಾರೆ ಪಠಣ ಮಾಡಬೇಕು. 9] ಬಹುಳ ಚತುರ್ದಶಿ ಶಿವರಾತ್ರಿವ್ರತ. 10] ದೇಶದಲ್ಲಿ ಪ್ರಾಂತದಲ್ಲಿ ಅಥವಾ ತಮ್ಮ ಊರಲ್ಲಿ ಪ್ಲೇಗ, ಕಾಲರಾ ಮೊದಲಾದಸಾಂಸರ್ಗಿಕ ರೋಗ ಪ್ರಾರಂಭವಾದ ಸುಳಿವು ಸಿಕ್ಕರೆ ಸಹಸ್ರ ಚಂಡಿಯಾಗ ಮಾಡಬೇಕು. ಅಥವಾ ಲಘುರುದ್ರ.

ಮಹಾರುದ್ರ, ಅತಿರುದ್ರ ಯಾಗ ಮಾಡಬೇಕು.

6. ಲಗ್ನದಲ್ಲಿ ದುರ್ಬಲ ನಿರ್ಬಲ ಗ್ರಹಗಳಿದ್ದು ಇಲ್ಲವೇ ಯಾವುದೇ ಗ್ರಹಗಳಿಲ್ಲದೇ ಇದ್ದು ಲಗ್ನೇಶನು ದುರ್ಬಲ ನಿರ್ಬಲನಿದ್ದರೆ ಇಂಥ ಜಾತಕರು ಸದಾ ರೋಗಪೀಡಿತರಿರುತ್ತಾರೆ. ಇದರಂತೆ ಷಷ್ಠದಲ್ಲಿ ದುರ್ಬಲ, ನಿರ್ಬಲ ಗ್ರಹಗಳಿದ್ದು ಇಲ್ಲವೇ ಗ್ರಹಗಳಿಲ್ಲದೇ ಇದ್ದು ಷಷ್ಠೇಶನು ದುರ್ಬಲ, ನಿರ್ಬಲನಿರುವ ಜಾತಕನು ಸದಾ ರೋಗಪೀಡಿತನಿರುತ್ತಾನೆ. ಇಷ್ಟೇ ಅಲ್ಲ ಇವರಿಗೆ ತೀವ್ರ ಬಾಧೆಯು ರೋಗಗಳು ತೀವ್ರ ಅಂಟಿಕೊಳ್ಳುತ್ತವೆ ಮೇಲೆ ಬರೆದ ಈ ಎರಡು ಸಂಗತಿಗಳು ದೋಷವಿರುವ ಜಾತಕರಿಗೆ ಪರಿಹಾರ ಕ್ರಮಗಳೆಂದರೆ ಸೂರ್ಯೋಪಾಸನೆ ಮಾಡಬೇಕು ಇದಕ್ಕಾಗಿ ನನ್ನವೃತ್ತಿಯಲ್ಲಿ ಬಂದ 2ಉದಾಹರಣೆಗಳನ್ನು ಕೊಡುವೆ, ಕನ್ಯಾಲಗ್ನದ ವ್ಯಯಸ್ಥಾನದಲ್ಲಿ ಸಿಂಹರಾಶಿಯ ಶುಕ್ರನೂ ದ್ವಿತೀಯದಲ್ಲಿ ನೀಚರಾಶಿಯ ಅರ್ಥಾತ್ ತುಲಾರಾಶಿಯ ಸೂರ್ಯನು ಇದ್ದು, ಅಷ್ಟಮದಲ್ಲಿ ಶನಿಯು ಸೂರ್ಯನನ್ನು ನೋಡುತ್ತಾ ವಿರಾಜನಾಗಿದ್ದನು ಈ ಜಾತಕನಿಗೆ ಕಣ್ಣುಗಳೇ ಸರಿಯಾಗಿ ಕಾಣುತ್ತಿದ್ದಿಲ್ಲ ಅನೇಕ ಪ್ರಸಿದ್ಧ ನೇತ್ರತಜ್ಞ ಡಾಕ್ಟರರನ್ನು ಸಂಪರ್ಕಿಸಿದಾಗ ಎಲ್ಲರ ಅಭಿಪ್ರಾಯ ಒಂದೇ ಆಗಿತ್ತು. ನೀವು ದುರ್ದೈವಿಗಳು ದೃಷ್ಟಿದೋಷ ನಿವಾರಣೆಯಾಗುವದಿಲ್ಲ ಹೀಗೆ ಹತಾಶರಾಗಿ ನನ್ನ ಬಳಿಗೆ ಬಂದಿದ್ದರು. ನಾನು ಅವರ ಜಾತಕದ ಸೂಕ್ಷ್ಮವಲೋಕನಮಾಡಿದೆ ಡಾಕ್ಟರ ಅಭಿಪ್ರಾಯ ಸರಿಯಿತ್ತು. ಏಕೆಂದರೆ ನಮ್ಮ ಶಾಸ್ತ್ರದಪ್ರಕಾರ ಯಾರ ಜಾತಕದಲ್ಲಿ ದ್ವಿತೀಯ, ದ್ವಾದಶ ಸ್ಥಾನಗಳಲ್ಲಿ ದುರ್ಬಲ ನಿರ್ಬಲ ಸೂರ್ಯ, ಶುಕ್ರ ಇರುತ್ತಾರೋ ಅವರಿಗೆ ದೃಷ್ಟಿದೋಷವಿರುತ್ತದೆ. ಮೇಲೆ ಬರೆದ ಜಾತಕನಿಗೆ ವ್ಯಯದಲ್ಲಿ ಶತ್ರುಕ್ಷೇತ್ರ ಶುಕ್ರನು ಹಾಗೂ ನೀಚರಾಶಿಯ ದ್ವಿತೀಯದಲ್ಲಿದ್ದ ಸೂರ್ಯನನ್ನು ನೀಚರಾಶಿಯ ಅಷ್ಟಮದಲ್ಲಿದ್ದ ಶನಿಯು ನೋಡುತ್ತಾನೆ. ಅರ್ಥಾತ ಶನಿ, ರವಿಯರ ಪ್ರತಿಯೋಗ ದ್ವಿತೀಯ, ಅಷ್ಟಮದಲ್ಲಿ ಇಂಥ ಜಾತಕನಿಗೆ ದೃಷ್ಟಿದೋಷವಿರುವುದರಲ್ಲಿ ಆಶ್ಚರ್ಯವಿಲ್ಲ. ಆದಾಗ್ಯೂ ಅವರಿಗೊಂದು ನಾನು ಪರಿಹಾರಸೂಚಿಸಿದ್ದೆ ಪ್ರತಿನಿತ್ಯ ಸೂರ್ಯನು ಉದಯಿಸುವ ಸಮಯದಲ್ಲಿ (ಅರುಣೋದಯ) ಸೂರ್ಯನ ಎಳೆಬಿಸಿಲು

ಪೂರ್ವಾಭಿಮುಖವಾಗಿಪದ್ಮಾಸನದಲ್ಲಿಕುಳಿತು ಅವನ ನಾಮಸ್ಮರಣೆಮಾಡುತ್ತಾ ಸೂರ್ಯನನ್ನು ನೋಡುತ್ತಾ 5, 10 ಮಿನಿಟು ತಪ್ಪದೇ ಮಾಡಿರಿ ಹೀಗೆ 90 ದಿನಗಳಾದಬಳಿಕ ನನ್ನನ್ನು ಭೆಟ್ಟಿಯಾಗಲು ಹೇಳಿದ್ದೆ ಇಲ್ಲಿ ಒಂದು ಆಶ್ಚರ್ಯದ ಸಂಗತಿಅಂದರೆ ಸೂರ್ಯನನಾಮಸ್ಮರಣೆಯು ಪ್ರಭಾವವೋ ಸೂರ್ಯೋದಯದ ಸಮಯದಲ್ಲಿ ಸೂರ್ಯನನ್ನು ನೋಡುತ್ತಿರುವ ಕಿರಣದ ಪ್ರಭಾವದಿಂದಲೊ ಅಥವಾ ಅವರ ಸೂರ್ಯನಲ್ಲಿರುವ ಧೃಢಭಕ್ತಿಯ ಪರಿಣಾಮವೋ ಅಥವಾ ಅವರ ದೃಷ್ಟಿದೋಷ ನಿವಾರಣೆಯಾಗುವ ಕಾಲ ಕೂಡಿ ಬಂದಿತೊ ಅಂತೂ ಅವರಿಗೆ ಕ್ರಮಶಃ ದೃಷ್ಟಿದೋಷ ನಿವಾರಣೆ ಆಗ ಹತ್ತಿದೆ. ಇನ್ನೊಂದು ಉದಾಹರಣೆ ಮೀನಲಗ್ನದ ನೀಚರಾಶಿಯ ಅಷ್ಟಮದಲ್ಲಿ ಸೂರ್ಯನಿದ್ದು, ಷಷ್ಠದಲ್ಲಿ ನೀಚರಾಶಿಯ ಶನಿಯು ಇದ್ದು ಜಾತಕನು ನನ್ನ ಬಳಿ ಬಂದು ಹೀಗೆ ಹೇಳಿದನು. ಶಾಸ್ತ್ರಿಗಳೇ ನನ್ನ ಪಚನ ಕ್ರಿಯೆ ದುರ್ಬಲವಾಗಿದೆ ಏನು ತಿಂದರೂ ಪಚನ ವಾಗುವುದಿಲ್ಲ ಡಾಕ್ಟರ ಬಳಿ ಹೋಗಿ ಗುಳಿಗಿ ನುಂಗಿ ನುಂಗಿ ಸಾಕಾಗಿದೆ. ಯಾವುದಾದರೂ ದೇವರ ಸೇವೆ ಇದ್ದರೆ ಹೇಳಿ ಅದನ್ನು ಮಾಡುವೆ ಎಂದು ವಿನಂತಿಸಿಕೊಂಡರು ಅವರ ಜಾತಕವನ್ನುಸೂಕ್ಷ್ಮವಲೋಕನಮಾಡಲಾಗಿಅವರು ಹೇಳಿದ್ದರಲ್ಲಿ ತಥ್ಯವಿದೆ ಎನಿಸಿತು ಏಕೆಂದರೆ ಷಷ್ಠಸ್ಥಾನವಿದು ದೇಹದ ಅಂಗ ರಚನೆ ಪ್ರಕಾರ ಸಣ್ಣ ಕರುಳಿನ ಸ್ಥಾನವು ಷಷ್ಠೇಶನು ದುರ್ಬಲ ನಿರ್ಬಲನಿದ್ದ ಜಾತಕನಿಗೆ ಅಗ್ನಿಮಾಂದ್ಯ ಇರುವುದು ಸ್ವಾಭಾವಿಕವು ಹೌದು ಮೇಲೆ ಬರೆದ ಜಾತಕನಿಗೆ ಷಷ್ಠೇಶನಾದ ಸೂರ್ಯನು ನೀಚರಾಶಿಯವನಾಗಿ ಅಷ್ಟಮದಲ್ಲಿ ನೀಚರಾಶಿಯ ಶನಿಯಿಂದ ನೋಡಲ್ಪಡುತ್ತಿದ್ದಾನೆ. ಆದ್ದರಿಂದಲೇ ಇವರಿಗೆ ಜನ್ಮತಃ ಅಗ್ನಿಮಾಂದ್ಯ ದೋಷವಿದೆ ಇವರಿಗೂ ಕೂಡ ನಿತ್ಯಸೂರ್ಯೋಪಾಸನೆ ಹಾಗೂ ಗುರುಚರಿತ್ರೆಯ ಸಪ್ತಾಹ ಮಾಡಲು ಹೇಳಿದೆ. ಅದರಿಂದ ಅವರ ಅಗ್ನಿಮಾಂದ್ಯ ದೋಷ ಕ್ರಮಶಃ ಕಡಿಮೆ ಆಗಹತ್ತಿತು ಹೀಗೆ ನನ್ನ ವೃತ್ತಿಯಲ್ಲಿ ಬಂದ ಅನೇಕ ಪ್ರಕಾರದ ರೋಗಗಳ ರೋಗಿಗಳಿಗೆ ನಾನು ಸೂಚಿಸಿದ ದೇವತಾ ಆರಾಧನೆಯಿಂದ ಗುಣಮುಖವಾದ ನೂರಾರು ಉದಾಹರಣೆಗಳಿವೆ **ಆರೋಗ್ಯ ಪರಿಹಾರ** ಎಂಬ ಇಂದೊಂದೇ ವಿಷಯದ ಮೇಲೆ ನೂರಾರು ಪುಟಗಳಷ್ಟು ಬರೆಯುವ ವಿಷಯ ಸಂಗ್ರಹವಿದೆ ಪ್ರಸ್ತುತಃ ಈ ಗ್ರಂಥದ ಈ ಅಧ್ಯಾಯದ ಚೌಕಟ್ಟಿನಲ್ಲಿ ವಿವರಿಸಲಾಗಿವೆ. ಅದರಲ್ಲಿಯೂ ಲಗ್ನದಲ್ಲಿಯ ದುರ್ಬಲ

ಗ್ರಹಗಳು ಲಗ್ನೇಶನು ದುರ್ಬಲನು ಹಾಗೂ ಷಷ್ಠದಲ್ಲಿ ದುರ್ಬಲ ಗ್ರಹಗಳು ಷಷ್ಠೇಶನೂ ದುರ್ಬಲನು ಮತ್ತು ದುರ್ಬಲ. ನಿರ್ಬಲ ಷಷ್ಠೇಶ ಅಷ್ಟಮೇಶ ಲಗ್ನೇಶರ ಮಹಾದಶೆ ಅಂತರ್ದಶೆ ಇರುವ ಅವಧಿಯಲ್ಲಿ ಜಾತಕನು ರೋಗ ಗ್ರಸ್ಥನಾಗುತ್ತಾನೆ. ಶನಿ-ಮಂಗಳ, ಶನಿ-ರವಿ, ಶನಿ-ಚಂದ್ರರ ಪ್ರತಿಯೋಗ ಯುತಿಯೋಗ, ದೃಷ್ಟಿಯೋಗ ಹೀಗೆ ಗ್ರಹಸ್ಥಿತಿ ಇದ್ದ ಜಾತಕನು ಸದಾರೋಗ ಪೀಡಿತನಿರುತ್ತಾನೆ ಎಂಬ ಅಂಶವನ್ನು ಈಗಾಗಲೇ ವಿವರಿಸಲಾಗಿದ್ದು ಪ್ರಸ್ತುತ ಹೀಗೆ ಗ್ರಹಸ್ಥಿತಿ ಇದ್ದ ಜಾತಕನು ರೋಗ ಪರಿಹಾರಕ್ಕಾಗಿ ಯಾವ ಯಾವ ದೇವತೆಗಳ ಉಪಾಸನೆ ಪ್ರಾರ್ಥನೆ ಜಪ, ಹೋಮಗಳನ್ನು ಕೈಕೊಳ್ಳಬೇಕೆಂಬು ದನ್ನು ಈ ಕೆಳಗಿನಂತೆ ಬರೆಯಲಾಗಿದೆ.

1] ರಾಮಾಯಣದ ಆದಿ ಅಥವಾ ಬಾಲಕಾಂಡವನ್ನು ಪಾರಾಯಣ ಮಾಡಬೇಕು. ಅದರಲ್ಲಿಯೂ ದೇಶದಲ್ಲಿ ಅನಾವೃಷ್ಟಿ ಮೇಲಿಂದ ಮೇಲೆ ಜರಿಗರಿವ ಭೂಕಂಪ ಜ್ವಾಲಾಮುಖಿ ಆಗುವ ಸಮಯದಲ್ಲಿ ಗೋಚರೀಯಿಂದ ಶನಿ-ಮಂಗಳ, ಯುತಿಯೋಗ ಪ್ರತಿಯೋಗವಿರುವ ಸಮಯದಲ್ಲಿ ಯುದ್ಧದ ಕಾಲದಲ್ಲಿ ಸಾಂಕ್ರಾಮಿಕ ರೋಗ ಹರಡುವ ಸಮಯದಲ್ಲಿ ವಯಕ್ತಿಕವಾಗಿ ಸಾಡೇಸಾತಿ, ಪಂಚಮಾಷ್ಟಮ ಶನಿ ಇರುವ ಸಮಯದಲ್ಲಿ ಗುರುಪು ಗೋಚರೀಯಿಂದ 4-6-8-12 ನೇಯವನಾಗಿ ಬಂದಾಗ ರಾಮಾಯಣದ ಬಾಲಕಾಂಡವನ್ನು ಪಾರಾಯಣ ಮಾಡಬೇಕು.

2] ಗುರುಚರಿತ್ರೆ ಸಪ್ತಾಹ ಮಾಡಬೇಕು.

3] ಮೇಲಿಂದ ಮೇಲೆ ಜ್ವರ ಬರುತ್ತಿದ್ದರೆ ಟೈಫಾಯಿಡ ಮಲೇರಿಯಾ ಸೂರ್ಯೋಪಾಸನೆಯು ಸಂಗಡ "**ಇಂದ್ರಾಕ್ಷೀ ಸ್ತೋತ್ರ**" ಪ್ರತಿನಿತ್ಯ ಪಠಣ ಮಾಡಬೇಕು ಇಲ್ಲವೇ ರಾಮರಕ್ಷಾ, ಮಾರುತಿ ಸ್ತೋತ್ರ ಪಠಿಸಬೇಕು.

4] ಮೇಲಿಂದ ಮೇಲೆ ಬಿಜ್ಜ ಗಾದರಿ ಬಕ್ಕಿ ಮೊದಲಾದ ಚರ್ಮದ ರೋಗಗಳ – ನಿವಾರಣೆಗಾಗಿ "**ಶೀತಲಾ ಸ್ತೋತ್ರ**" ಪಠಿಸಬೇಕು. ಇಲ್ಲವೆ ರೇಣುಕಾ, ಬನಶಂಕರಿ ಮೊದಲಾದ ಶಕ್ತಿದೇವತೆಗಳ ಉಪಾಸನೆ ಮಾಡಬೇಕು.

5] ಎಲ್ಲ ರೋಗಗಳ ಪರಿಹಾರ ಹಾಗೂ ಆಯುಷ್ಯ ವರ್ಧನೆಗಾಗಿ "**ರಥಸಪ್ತಮಿ ವೃತ್ತ**" ಪ್ರತಿ ವರುಷ ಮಾಡಬೇಕು.

6] ಆಯುಷ್ಯ ವರ್ಧನೆಗಾಗಿ ಪ್ರತಿ ಮಾಸದ ಬಹಳ ಚತುರ್ದಶಿ [ಶಿವರಾತ್ರಿ] ವ್ರತ ಮಾಡಬೇಕು.

7] ಪ್ರತಿ ದಿನ ಧನ್ವಂತರಿ ಪೂಜಾ ಪ್ರಾರ್ಥನೆ ಮೊದಲಾದ ಉಪಾಸನೆ ಮಾಡಬೇಕು.

8] ಯಾರ ಜಾತಕದಲ್ಲಿ ಲಗ್ನೇಶ, ಷಷ್ಠೇಶ, ಅಷ್ಟಮೇಶ, ದುರ್ಬಲ ನಿರ್ಬಲರಿರುತ್ತಾರೋ ಆ ಗ್ರಹಗಳ ಅನುಗ್ರಹ ಪಡೆಯಲು ಹಾಗೂ ಆಯಾ ಗ್ರಹಗಳ ಅಶುಭ ಫಲ ನಿವಾರಣೆಗಾಗಿ ದಾನ ಮಾಡುವ ಧಾನ್ಯವಸ್ತುಗಳಾವವು ಆರಾಧ್ಯ ವೃಕ್ಷಗಳಾವವು ಧರಿಸುವ ರತ್ನಗಳಾವವು ಎಂಬುದರ ವಿವರಣೆ ಇದೇ ಗ್ರಂಥದ ಪುಟ 13, 14, 15 ರಲ್ಲಿ ವಿವರಿಸಿದಂತೆ ಆಚರಿಸಬೇಕು. ಅಂದರೆ ಆ ಜಾತಕನ ಆರೋಗ್ಯ ಸುಧಾರಣೆ ಆಗಿ ಆಯುಷ್ಯ ವೃದ್ಧಿಯಾಗುವದರಲ್ಲಿ ಸಂದೇಹವಿಲ್ಲ.

4] **ಸೂರ್ಯೋಪಾಸನೆ :** ಯಾರ ಜಾತಕದಲ್ಲಿ ಸೂರ್ಯನು ದುರ್ಬಲ, ನಿರ್ಬಲನಿರುವನೋ ಅಂಥ ಜಾತಕರು ಸೂರ್ಯೋಪಾಸನೆಕೈಕೊಳ್ಳುವುದರಿಂದಆರೋಗ್ಯದಲ್ಲಿ ಸುಧಾರಣೆಯಾಗಿ ಆಯುಷ್ಯವೃದ್ಧಿ ಆಗುವುದರಲ್ಲಿ ಸಂದೇಹವಿಲ್ಲ. ಸೂರ್ಯೋಪಾಸನೆ ಅಂದರೆ ಸೂರ್ಯನನ್ನು ಪೂಜಿಸುವುದು, ಪ್ರಾರ್ಥಿಸುವುದು ಆದರಿಂದ ಸೂರ್ಯನು ಸಂತುಷ್ಟನಾಗಿ ಜಾತಕನಿಗೆ ಆರೋಗ್ಯ ಸುಧಾರಣೆ ಆಗಿ ಆಯುಷ್ಯ ವೃದ್ಧಿಯಾಗುವುದರಲ್ಲಿ ಸಂದೇಹವಿಲ್ಲ. ಏಕೆಂದರೆ ಶರೀರದಲ್ಲಿಯ ಹೃದಯ, ಕಣ್ಣು, ಅಸ್ಥಿ ಅದರಲ್ಲಿಯೂ ಬೆನ್ನೆಲುಬು, ಸಣ್ಣ ಕರುಳು, ಶಿರಸ್ಸು, ಇವೇ ಮೊದಲಾದ ಮಾನವನ ಪ್ರಮುಖ ಅಂಗಾಂಗಗಳ ಮೇಲೆ ಅವಯವಗಳ ಮೇಲೆ ಸೂರ್ಯನ ಅಧಿಪತ್ಯವಿರುತ್ತದೆ. ಆದುದರಿಂದ ಸೂರ್ಯನನ್ನು ಆರಾಧಿಸುವುದನ್ನು ಈ ಕೆಳಗಿನಂತೆ ಬರೆಯಲಾಗಿದೆ.

1] ಪ್ರತಿ ನಿತ್ಯ ಸೂರ್ಯೋದಯದ ಒಳಗೆ ಎದ್ದು ಪ್ರಾತರ್ ವಿಧಿ ತೀರಿಸಿಕೊಂಡು ಎಳೆ ಸೂರ್ಯನನ್ನು ನೋಡಬೇಕು ಹಾಗೂ ವಾಯುವಿಹಾರ ಕೈಕೊಳ್ಳಬೇಕು.

2] ಸೂರ್ಯ ನಮಸ್ಕಾರ ಅವನ ನಾಮಸ್ಮರಣೆ ಮಾಡುತ್ತಾ ಹಾಕಬೇಕು.

3] ಗಾಯತ್ರೀ ಜಪ ತಪ್ಪದೇ ಪ್ರತಿನಿತ್ಯ ಪಠಿಸಬೇಕು ಗಾಯತ್ರೀ ಹೋಮ, ಗಾಯತ್ರೀ ಪುರಶ್ಚರಣೆ ಮಾಡಿದರಂತೂ ಇನ್ನೂ ಉತ್ತಮ

4] ಆದಿತ್ಯ ಹೃದಯ ಪ್ರತಿನಿತ್ಯ ಪಠಿಸಬೇಕು

5] ಇದೇ ಗ್ರಂಥದ ಇದೇ ಅಧ್ಯಾಯದ 13, 14, 15 ನೇ ಪುಟಗಳಲ್ಲಿ ವಿವರಿಸಿದಂತೆ ಸೂರ್ಯನ ಅನುಗ್ರಹಕ್ಕಾಗಿ ಮಾಣಿಕ್ಯ ಹರಳು ಧರಿಸಬೇಕು. ಗೋದಿ, ಗೋದಿರವೆ, ದ್ರಾಕ್ಷಿ ತಾಂಬೂಲ, ಕೆಂಪು ಬಟ್ಟೆ, ಯಥಾಶಕ್ತಿ ಸತ್-ಪಾತ್ರರಿಗೆ ದಕ್ಷಿಣೆಯೊಂದಿಗೆ ದಾನ ಮಾಡಬೇಕು.

**ಆ) ಚಂದ್ರೋಪಾಸನೆ :** ಯಾರ ಜಾತಕದಲ್ಲಿ ಚಂದ್ರನು ದುರ್ಬಲ ನಿರ್ಬಲನಿರುವನೋ ಅಂಥ ಜಾತಕನು ಚಂದ್ರೋಪಾಸನೆ ಕೈಕೊಳ್ಳುವದರಿಂದ ಆರೋಗ್ಯದಲ್ಲಿ ಸುಧಾರಣೆಯಾಗಿ ಆಯುಷ್ಯವೃದ್ಧಿಯಾಗುವುದರಲ್ಲಿ ಸಂದೇಹ ವಿಲ್ಲ ಏಕೆಂದರೆ ಆರೋಗ್ಯ ಹಾಗೂ ಆಯುರ್ಮಾನದ ಬಗೆಗೆ ಚಂದ್ರನ ಪ್ರಭಾವ ಪರಿಣಾಮದ ವಿಷಯವಾಗಿ ಇದೇ ಗ್ರಂಥದ 26, 27, 28ನೇಯ ಪುಟಗಳಲ್ಲಿ ವಿವರಿಸಲಾಗಿದ್ದು ವಾಚಕರು ಇದನ್ನು ತಿಳಿದಿರಲಿಕ್ಕೇ ಸಾಕು ಶರೀರದಲ್ಲಿಯ ಉದರ, ತುಟಿ, ಆಮಾಶಯ, ಗರ್ಭಾಶಯ, ವಕ್ಷಸ್ಥಳ, ಅನ್ನನಾಳ, ಮಿದುಳು ಮೊದಲಾದ ಅವಯವಗಳ ಮೇಲೆ ಚಂದ್ರನ ಆಧಿಪತ್ಯವಿರುತ್ತದೆ ಆದುದರಿಂದ ಚಂದ್ರನನ್ನು ಆರಾಧಿಸುವುದು ಈ ಕೆಳಗಿನಂತೆ ಬರೆಯಲಾಗಿದೆ.

1] ಚಂದ್ರನನ್ನು ಪ್ರತ್ಯೇಕವಾಗಿ ಪೂಜಿಸುವುದಕ್ಕಿಂತ ಮಹಾದೇವ ನನ್ನು ಪೂಜಿಸಿದರಲ್ಲಿ ಸಾಕು ಏಕೆಂದರೆ ಶಿವನ ಜಡೆಯಲ್ಲಿ ಚಂದ್ರನಿರುತ್ತಾನೆ.

2] ಸಂಕಷ್ಟ ವ್ರತ ಮಾಡುವುದರಲ್ಲಿ ಚಂದ್ರನನ್ನು ಪೂಜಿಸಲೇ ಬೇಕಾ ಗುತ್ತದೆ. ಆದ್ದರಿಂದ ಸಂಕಷ್ಟೀ ವ್ರತ ಮಾಡಬೇಕು.

3] ತಾಯಂದಿರಲ್ಲಿ ಹಾಗೂ ಸಣ್ಣ ಮಕ್ಕಳ ಮೇಲೆ ಚಂದ್ರನ ಆಧಿ ಪತ್ಯವಿರುವುದರಿಂದ ತಾಯಂದಿರನ್ನು ಭಕ್ತಿಗೌರವದಿಂದ ಕಾಣಬೇಕು ಹಾಗೂ ಸಣ್ಣ ಮಕ್ಕಳನ್ನು ವಿಶೇಷವಾಗಿ ಪ್ರೀತಿಸಬೇಕು.

4] ಪ್ರತಿ ಸೋಮವಾರ ಉಪಾಸನೆ ಮಾಡಬೇಕು.

5] ಕಬ್ಬು, ಅಕ್ಕಿ, ಬಾರ್ಲಿ, ಹಾಲು, ಬಿಳಿವಸ್ತ್ರಗಳನ್ನು ಯಥಾಶಕ್ತಿ ಸತ್‌ಪಾತ್ರರಿಗೆ ದಾನ ಮಾಡಬೇಕು. 6] ಮುತ್ತನ್ನು ಧರಿಸಬೇಕು.

7] ಮುತ್ತಲವಿಲೆಯಲ್ಲಿ ಸಣ್ಣಮಕ್ಕಳಿಗೆ ಯಥಾಶಕ್ತಿ ಭೋಜನ ಮಾಡಿಸಬೇಕು 8] ಚಂದ್ರನ ನಾಮಸ್ಮರಣೆ ಮಾಡಬೇಕು.

## ಜಪ,ಧ್ಯಾನ, ಸ್ತೋತ್ರ, ಪಠಣ, ಹೇಗೆ ಮಾಡಬೇಕು?

ರೋಗಿಯ ರೋಗದ ಶಮನಕ್ಕಾಗಲೀ ಆಯುಷ್ಯ ವೃದ್ಧಿಗಾಗಲೀ ಇಲ್ಲವೇ ಯಾವುದೇ ಕಾಮನೆ ಪೂರ್ತಿಗಾಗಿ ಕೈಕೊಳ್ಳಬೇಕಾದ ಜಪ, ಧ್ಯಾನ. ಸ್ತೋತ್ರ, ಪಠಣ, ಹೇಗೆ ಮಾಡಬೇಕು ಎಂಬುದನ್ನು ಅನೇಕರು ವಿಚಾರಿಸುತ್ತಾರೆ ಸ್ನಾನ ಮಾಡಿ ಒಗೆದ ಬಟ್ಟೆ ಉಟ್ಟುಕೊಂಡು ಗಂಧ. ಭಸ್ಮ. ಅಕ್ಷಂತಿ. ಕುಂಕುಮ ಯಾವುದಾದರೊಂದು ಹಚ್ಚಿಕೊಂಡು ತುಪ್ಪದ ದೀಪಿಗೆ ಅಥವಾ ಎಣ್ಣೆ ಸಮೆಯನ್ನು ಹಚ್ಚಿರಿ ಕಡೆಯ ಪಕ್ಷ ಊದಿನಕಡ್ಡಿ ದೇವರ ಎದುರಿಗೆ ಹಚ್ಚಿ ನಿಮ್ಮ ಇಷ್ಟ ದೇವರ ಮುಂದೆಯಾಗಲೀ ಅಥವಾ ಯಾವುದಾದರೊಂದು ಫೋಟೋದ ಎದುರಿಗೆ ಪೂರ್ವಾಭಿಮುಖವಾಗಿ ಪದ್ಮಾಸನದಲ್ಲಿಕುಳಿತುಕೊಂಡು ತಾಂಬ್ರದ ತಂಬಿಗೆಯಲ್ಲಿ ಅಥವಾ ವಾಟೆಯಲ್ಲಿ ನೀರು ತುಂಬಿಕೊಂಡು ಭಸ್ಮ ಅಥವಾ ಅಂಗಾರ ಹತ್ತಿರ ಇಟ್ಟುಕೊಂಡು ಇಂದ್ರಾಕ್ಷಿ ಮಂತ್ರವಾಗಲೀ ಆದಿತ್ಯಹೃದಯವಾಗಲೀ ಗಾಯತ್ರಿ ಜಪವಾಗಲೀ ರಾಮರಕ್ಷಾವಾಗಲೀ ಆಂಜನೇಯ ಸ್ತೋತ್ರವಾಗಲಿ, ಗಣಪತಿಯ ಅಥರ್ವಶೀರ್ಷಯಾಗಲೀ, ದೇವಿ ಪ್ರಾರ್ಥನೆಯಾಗಲೀ ಯಾವುದೇ ಇಷ್ಟದೇವರ ಜಪ,ಧ್ಯಾನ. ಸ್ತೋತ್ರ, ಪಠಣವಾದ ಬಳಿಕ ತಾಂಬ್ರದ ತಂಬಿಗೆ ಯಲ್ಲಿರುವ ನೀರನ್ನು ತೀರ್ಥವೆಂದು ಸೇವಿಸಬೇಕು ಹಾಗೂ ಅಂಗಾರ [ಬೂದಿ] ವನ್ನು ಹಚ್ಚಿಕೊಳ್ಳಿರಿ ಸ್ವಥಃ ಜಪ. ಧ್ಯಾನ ಪಠಣಮಾಡಲು ಶಕ್ಯವಿಲ್ಲದಿದ್ದಲ್ಲಿ ಬಲ್ಲವರಿಂದಾಗಲೀ ಪಠಿಸಿ ಆ ತೀರ್ಥ ತೆಗೆದುಕೊಳ್ಳಿರಿ. ಹಾಗೂ ಆಸಕ್ತರಿಗೆ ರೋಗಿಗಳಿಗೆ ತೀರ್ಥ ಅಂಗಾರ ವಿತರಿಸಿರಿ ಉದಾಹರಣೆಗೆ ಯಾರೊಬ್ಬರಿಗೆ ಜ್ವರ ಬಂದಾಗ ರಾಮರಕ್ಷಾ ಸ್ತೋತ್ರವಾಗಲೀ ಇಂದ್ರಾಕ್ಷೀ ಸ್ತೋತ್ರವಾಗಲೀ, ಮಾರುತಿ ಸ್ತೋತ್ರವಾಗಲೀ ಪಠಿಸಿ. ಮೇಲೆ ಹೇಳಿದಂತೆ ಪಠಿಸುವ ಸಮಯದಲ್ಲಿರುವ ಆ ತಾಂಬ್ರದ ತಂಬಿಗೆ

ಯಲ್ಲಿಯ ನೀರನ್ನು ತೀರ್ಥವೆಂದು ಜ್ವರ ಬಂದವರು ಸೇವಿಸಿದಲ್ಲಿ ಹಾಗೂ ಹರಿಸುವ ಸಮಯದಲ್ಲಿಯ ತುಸು ಬೂದಿಯನ್ನು ಜ್ವರ ಬಂದವರಿಗೆ ಲೇಪಿಸಿದಲ್ಲಿ, ಹಚ್ಚಿಕೊಂಡಲ್ಲಿ ಖಂಡಿತವಾಗಿ ಜ್ವರ ಶಮನವಾಗುವುದು ಇದರಂತೆ ಭಯ, ದುಸ್ವಪ್ನ, ಶತ್ರುಪೀಡೆ, ಪಿಶಾಚಿ ಬಾಧೆಗಾಗಿ ನರಸಿಂಹ ಸ್ವಾಮೀ ಸ್ತೋತ್ರ, ಮಾರುತಿ ಸ್ತೋತ್ರವಾಗಲಿ ಶ್ರೀದತ್ತಾತ್ರಯ ಸ್ತೋತ್ರ ವಾಗಲಿ ಯಂತ್ರೋದ್ಧಾರ ಹನುಮ ಸ್ತುತಿ ಮಾಡಿದಲ್ಲಿ ಖಂಡಿತವಾಗಿ ಭಯ ನಿವಾರಣೆಯಾಗುವದು ಪಿಶಾಚಿ ಬಾಧೆ, ಶತ್ರುಪೀಡೆ, ಮಾಟಮದ್ದುಗಳ ಕಾಟ ನಿವಾರಣೆ ಆಗುತ್ತದೆ.



# ದ್ವಿತೀಯ ದಳ

## ಆರ್ಥಿಕ-ಪರಿಹಾರ

ಪರಿಹಾರ ಜ್ಯೋತಿಷ್ಯದ ಎರಡನೇಯ ಅಧ್ಯಾಯದಲ್ಲಿ ಆರ್ಥಿಕತೆಯ ಬಗೆಗೆ ಪ್ರಸ್ತಾಪಿಸುತ್ತೇನೆ. ಜ್ಯೋತಿಷಿಗಳು ಯಾರೊಬ್ಬರ ಜಾತಕವನ್ನು ಪರಿಶೀಲಿಸುವಾಗ ಪ್ರಪ್ರಥಮವಾಗಿ ಅವನ ಆಯುರ್ಮಾನ ಹಾಗೂ ಆರೋಗ್ಯದ ಬಗೆಗೆ ಪರಿಶೀಲಿಸುತ್ತಾರೆ ಆದರೆ ಸಲಹೆ ಕೇಳಲು ಬಂದವರು ಹೆಚ್ಚಾಗಿ ತಮ್ಮ ಆರ್ಥಿಕ ಸ್ಥಿತಿಯ ಬಗೆಗೆ ಮೊದಲು ವಿಚಾರಿಸುತ್ತಾರೆ. ಅದು ಸ್ವಾಭಾವಿಕವು ಹೌದು ವ್ಯಕ್ತಿಯ ಜೀವನದ ಆಗು ಹೋಗುಗಳಿಗೆಲ್ಲ, ಸುಖ-ದುಃಖಗಳಿಗೆಲ್ಲ, ಐಶ್ವರ್ಯ-ದಾರಿದ್ರ್ಯಗಳಿಗೆಲ್ಲ ಯಶ-ಅಪಯಶಗಳಿಗೆಲ್ಲ, ಬಹುಮಟ್ಟಿಗೆ ಆತನ ಆರ್ಥಿಕಸ್ಥಿತಿಯ ಮೇಲೆಯೇ ಅವಲಂಬಿಸಿರುತ್ತದೆ. ಈ ಕಾರಣದಿಂದಲೇ ಹಣವೆಂದರೆ ಹೆಣವೂ ಬಾಯಿಬಿಡುತ್ತದೆಂಬ ಗಾದೀ ಮಾತು ಬಳಕೆಯಲ್ಲಿ ಬಂದಿದೆ.

ಮೇಲೆ ಹೇಳಿದಂತೆ ವ್ಯಕ್ತಿಯ ಜೀವನದಲ್ಲಿಯ ಅತ್ಯಂತ ಮಹತ್ವದ ವಿಷಯವಾದ ದ್ರವ್ಯಕ್ಕೂ ಜ್ಯೋತಿಷಿಗಳಿಗೂ ಇರುವ ಸಂಬಂಧ ಬಹಳೇ ಸ್ವಾಭಾವಿಕವಾದದ್ದು, ಸಲಹೆ ಪಡೆಯಲು ಬಂದವರಲ್ಲಿ ಬಹಳಷ್ಟು ಜನ ತಮ್ಮ ಆರ್ಥಿಕ ಪರಿಸ್ಥಿತಿಯ ಬಗೆಗೆ ವಿಚಾರಿಸುತ್ತಾರೆ (ಕೇಳುತ್ತಾರೆ).

ಜ್ಯೋತಿಷಿಗಳೇ, ಪಂಡಿತರೆ, ಶಾಸ್ತ್ರೀಯವರೇ ಗುರುಗಳೇ ಗುರುಜೀಯವರೇ ಆಜ್ಜಾ ಅವರೇ ಈ ಮೊದಲಾದ ರೀತಿಯಿಂದ ಸಂಬೋಧಿಸುತ್ತಾರೆ. ಕೆಲವರು ಅಡ್ಡ ಹೆಸರಿನಿಂದ ಸಂಬೋಧಿಸಿದರೆ ಕೆಲ ಆತ್ಮೀಯರು ವ್ಯವಹಾರ ನಾಮದಿಂದ ಸಂಬೋಧಿಸುತ್ತಾರೆ. ಇನ್ನು ಅವರು ತಮ್ಮ ಆರ್ಥಿಕ ವಿಷಯವಾಗಿ ವಿಚಾರಿಸುವ ರೀತಿ ಪ್ರಶ್ನೆಗಳ ವೈವಿಧ್ಯವನ್ನು ಅವರ ಮಾತಿನಲ್ಲಿಯೇ ಓದಿರಿ.

ನನ್ನ ಆರ್ಥಿಕ ಪರಿಸ್ಥಿತಿ ಎಂದು ಸುಧಾರಿಸುತ್ತದೆ ? ಈ ಜನ್ಮದಲ್ಲಿಯಾದರೂ ನನ್ನ ಆರ್ಥಿಕ ಮುಗ್ಗಟ್ಟು ದೂರವಾದೀತೆ ? ಸಾಲಗಾರರ ಕಾಟದಿಂದ ಅವರಾಡುವ ಚುಚ್ಚುವ್ಯಂಗ ಮಾತುಗಳಿಂದ ಅವಮಾನದಿಂದ ಜೀವನವೇ ಬೇಸರವಾಗಿದೆ ಎಂದು ವಿಚಾರಿಸುತ್ತಾರೆ.

ಕೆಲ ಜಾತಕರು ತಾವು ಸಾಲ ಪಡೆಯುವೇಕೆಂದಿರುವ ಬ್ಯಾಂಕುಗಳಿಂದಾಗಲೀ ಖಾಸಗಿ ಇಲ್ಲವೇ ಕಂಪನೀ ಫೈನಾನ್ಸಗಳಿಂದಾಗಲೀ ಸ್ನೇಹಿತರಿಂದಾಗಲೀ ಆಪ್ತೇಷ್ಟರಿಂದಾಗಲಿ ಚಿಟಫಂಡ ಹೀಗೆ ತಾವು ಸಾಲ ಪಡೆಯುವೇಕೆಂದಿರುವ ನಿರ್ದಿಷ್ಟ ಸಂಸ್ಥೆ ಇಲ್ಲವೆ ವ್ಯಕ್ತಿಗಳ ಹೆಸರು ಹೇಳಿ ಅವರಿಂದ-ಅವುಗಳಿಂದ ಹಣದ ಸಹಾಯ ಸಾಲ ಸಿಗಬಹುದೆ ? ಸಿಗುವುದಾದರೆ ಎಂದು ? ಹಾಗೂ ಎಂದು ವಿಚಾರಿಸಬೇಕು ? ಹೀಗೆಲ್ಲ ವಿಚಾರಿಸುತ್ತಾರೆ.

ಕೆಲ ಜಾತಕರು ತಾವು ಬೇರೆ ಅವರಿಗೆ ಕೈಗಡ ರೂಪದಿಂದಾಗಲೀ ಬಡ್ಡಿ ರೂಪದಿಂದಾಗಲೀ ಮನೆ-ವಸ್ತುಗಳ ಅಡವಿನ (ಭೋಗ್ಯ) ರೂಪದಿಂದಾಗಲಿ ಕೊಟ್ಟ ಹಣ ತಿರುಗಿ ಯಾವಾಗ ಬರುತ್ತದೆ ಯಾವಾಗ ಕೊಡುವರು ? ಯಾವಾಗ ಅವರನ್ನು ಕೇಳಬೇಕು ಹೇಗೆ ಕೇಳಬೇಕು ? ಪತ್ರವ್ಯವಹಾರ ದಿಂದಲೋ ಸಮಕ್ಷಮ ಭೆಟ್ಟಿಯಿಂದಲೋ ದೂರವಾಣಿ ಮುಖಾಂತರವೋ ಯಾರನ್ನಾದರೂ ತಮ್ಮ ಪ್ರತಿನಿಧಿಗಳ ಮುಖಾಂತರವೋ ಕೋರ್ಟಿನ ಮೂಲಕವೋ ಪೋಲಿಸರ ಮೂಲಕವೋ ಅಧಿಕಾರಿ ರಾಜಕಾರಣಿ ಮಂತ್ರಿ ಮೊದಲಾದ ಗಣ್ಯ ಪ್ರಭಾವೀ ವ್ಯಕ್ತಿಗಳ ಮೂಲಕವೋ ಹೇಗೆ ಸಾಲ ಕೊಟ್ಟ ಹಣ ತಿರುಗಿ ಪಡೆಯುವ ವಿಧಿ-ವಿಧಾನದ ಬಗೆಗೂ ವಿಚಾರಿಸುತ್ತಾರೆ.

ಕೆಲ ಜಾತಕರು ತಾವು ಕೆಲಸ ಮಾಡುತ್ತಿರುವ ಸರಕಾರದಿಂದಾಗಲೀ ಗಿರಣಿ, ಕಾರಖಾನೆ, ಕಂಪನಿಗಳಿಂದಾಗಲೀ ಖಾಸಗಿ ವ್ಯಕ್ತಿಗಳಿಂದಾಗಲೀ ಹೀಗೆ ಕೆಲಸ ಮಾಡುತ್ತಿರುವ ಸಂಸ್ಥೆಯಿಂದ ಬರಬೇಕಾಗಿದ್ದ ಸಂಬಳ,ನಿವೃತ್ತಿವೇತನ, ಗ್ರ್ಯಾಚ್ಯುಟಿ, ಪ್ರವಿಡೆಂಟ ಫಂಡ್ (ಕ್ಷೇಮನಿಧಿ) ಮೊದಲಾದವುಗಳಾಗಲೀ ತಡೆ ಹಿಡಿದ ಸಂಬಳವಾಗಲೀ ಎಂದು ಬರುತ್ತದೆ. ಹೇಗೆ ಬರತ್ತದೆ ? ಅದಕ್ಕೆ ಅನುಸರಿಸಬೇಕಾದ ವಿಧಿ ವಿಧಾನದ ಬಗೆ ವಿಚಾರಿಸುತ್ತಾರೆ. ಇಷ್ಟೆ ಅಲ್ಲಾ

ಅವರು ಕೈಕೊಳ್ಳಬೇಕಾದ ಕ್ರಮ ಎಂದು ಕೈಕೊಳ್ಳಬೇಕು ? ಎಂದು ವಿಚಾರಿಸುತ್ತಾರೆ.

ಸಂಜೆ ಊಟಕ್ಕೆ ಗತಿ ಇಲ್ಲದವರಿಂದ ಹಿಡಿದು ಲಕ್ಷಾಧೀಶನ (ಕೋಟ್ಯಾಧೀಶ) ವರೆಗೂ ಹಣಕಾಸಿನ ಸಮಸ್ಯೆ ಇದ್ದೇ ಇರುತ್ತದೆ. ಒಡವ ಬಂದು ಸಂಜೆ ಬೇಳೆ ಬೆಯಿಸಲು 5–6 ರೂ. ಹಣದ ಸಹಾಯ ಸಿಕ್ಕೀತೆ ? ಎಂದು ಪ್ರಶ್ನೆ ಕೇಳಿದರೆ ಅದಕ್ಕೂ ಮಧ್ಯಮ ವರ್ಗದವರು ನಾಳೆ ನನ್ನ ಕಾಲೇಜಫಾರ್ಮ ತುಂಬಲು ಹಣದ ಅನುಕೂಲವಾದೀತೆ ಎಂದು ಕೇಳುತ್ತಾನೆ? ಅದಕ್ಕೂ ತಾನು ಮಧ್ಯಮ ವರ್ಗದವರು ಟಿ.ವಿ. ವಿಸಿಪಿ. ವಿಸಿಆರ್ ಪ್ರೆಷರೀ ರೆಫರಿಜರೆಟರ ಕುಕ್ಕರ ಮೊದಲಾದವುಗಳನ್ನು ಕೊಳ್ಳಲು ಹಣದ ಅನುಕೂಲ ವಾದೀತೆ ಎಂದು ವಿಚಾರಿಸುತ್ತಾರೆ. ಇನ್ನು ಸಿರಿವಂತರು ಸ್ಕೂಟರ ಕಾರ ಟ್ರಕ್ಕು ಟ್ರ್ಯಾಕ್ಟರ ಮೊದಲಾದ ವಾಹನ ಕೊಳ್ಳಲು ಹಣದ ಅನುಕೂಲವಾದೀತ ಎಂದು ವಿಚಾರಿಸುತ್ತಾರೆ. ಇದರಂತೆ ನಮ್ಮ ರೈತಾಪಿ ಜನರು ಬೀಜ, ಗೊಬ್ಬರ, ಔಷಧಿಗಾಗಿ ಹಣ ಸಿಗಬಹುದೇ ? ಎಂದು ವಿಚಾರಿಸುತ್ತಾರೆ. ಅನೇಕರು ಮಗಳ [ಮಕ್ಕಳ] ಲಗ್ನಕ್ಕಾಗಿ ಇಲ್ಲವೆ ಮನೆ ಕಟ್ಟಲು ಕೊಳ್ಳಲು ಹಣದ ಸಹಾಯ ಸಿಕ್ಕೀತೆ ? ಎಂದು ವಿಚಾರಿಸುತ್ತಾರೆ. ಇನ್ನು ಕೆಲವರು ತಮಗೆ ತಗಲಿದ ರೋಗದ ಉಪಚಾರಕ್ಕೆ ಹಣದ ಅನುಕೂಲ ಸಿಕ್ಕೀತೆ ಎಂದು ವಿಚಾರಿಸುತ್ತಾರೆ,

ಕೆಲಜಾತಕರು ತಂದೆ-ತಾಯಿ, ಸಹೋದರ-ಸಹೋದರಿ, ಮೊದಲಾದ ಆಪ್ತೇಷ್ಟರಿಂದ ತಮಗೆ ಬರಬೇಕಾಗಿದ್ದ ಸ್ಥಾವರ ಇಷ್ಟೇಟ ಜಂಗಮದ ಬಗೆಗೆ ವಿಚಾರಿಸುತ್ತಾರೆ. ಎಂದು ಬರುತ್ತದೆ. ಹಾಗೂ ಅದಕ್ಕೆ ಅನುಸರಿಸಬೇಕಾದ ವಿಧಾನದ ಬಗೆಗೆ ವಿಚಾರಿಸುವರು.

ಇನ್ನು ಕೆಲಜಾತಕರು ದತ್ತಕ, ವಾರಸಾ, ಮೃತ್ಯುಪತ್ರ, ಬಕ್ಷೀಸ, ಲಾಟರಿ ಕಮಿಶನ್ನ ಮೊದಲಾದ ಆಕಸ್ಮಿಕ ಧನಯೋಗದಿಂದ ಬರುವದೋ ಹೇಗೆ ಎಂದು ವಿಚಾರಿಸುತ್ತಾರೆ.

ಇನ್ನು ಕೆಲಜಾತಕರು ತಮ್ಮ ನಿವೃತ್ತಿಯ ನಂತರ ಪ್ರವಿಡೆಂಟಫಂಡ ಗ್ರಾಚ್ಯು ಯಿಟಿ ಕಮ್ಯುಟೇಶನ್ ಮೊದಲಾದ ರೂಪದಿಂದ ಬಂದ ಹಣವನ್ನು ಹೇಗೆ ವಿನಿಯೋಗಿಸಬೇಕು? ಬ್ಯಾಂಕ, ಅಂಚೆಖಾತೆ, ಯುನಿಟ್ರಸ್ಟ, ಮೊದಲಾದ ಸರ ಕಾರದ ಖಾತೆಗಳಲ್ಲಿ ಠೇವಣಿ (ಫಿಕ್ಸಡ್‌ಡೆಪಾಜಿಟ್) ರೂಪದಿಂದ ಇಡಬೇಕೊ ಅಥವಾ ಖಾಸಗಿ ಇಲ್ಲವೆ ಕಂಪನೀ ಫೈನಾನ್ಸಗಳಲ್ಲಿ ಹೆಚ್ಚಿನ ಬಡ್ಡಿ ಆಸೆಗಾಗಿ ಇಡಬೇಕೋ ಅಥವಾ ಸೇರುಗಳಲ್ಲಿ ಹಣ ತೊಡಗಿಸಬೇಕೋ ಅಥವಾ ಬೇರೆ ಹೊಸ ಉದ್ಯೋಗ ಕೈಕೊಳ್ಳಲು ಹಣ ತೊಡಗಿಸಬೇಕೋ ಹೀಗೆ ತಾವು ಕೂಡಿಟ್ಟ ಹಣದ ಭದ್ರತೆಯ ದೃಷ್ಟಿಯಿಂದಲೂ ಹೆಚ್ಚಿನ ಬಡ್ಡಿಯ ದೃಷ್ಟಿ ಯಿಂದಲೂ ವಿಚಾರಿಸುತ್ತಾರೆ.

ಹೀಗೆ ತಮಗೆ ಬರಬೇಕಾಗಿದ್ದ ಹಣದ ವಿಷಯವಾಗಿಯೂ ತಾವು ಕೂಡ ಬೇಕಾಗಿದ್ದ ಹಣಕಾಸಿನ ವಿಷಯವಾಗಿಯೂ ತಾವು ಸಾಲ ಪಡೆಯುವ ವಿಷಯ ವಾಗಿಯೂ ಕೂಡಿಟ್ಟ ಹಣದ ಭದ್ರತೆಯ ದೃಷ್ಟಿಯಿಂದಲೂ ಪಿತ್ರಾರ್ಜಿತ, ಸ್ವಅರ್ಜಿತ, ಆಕಸ್ಮಿಕ ಧನಯೋಗದ ವಿಷಯವಾಗಿಯೂ ವಿಚಾರಿಸುತ್ತಾರೆ. ಅಲ್ಲದೆ ಅದಕ್ಕೆ ಅನುಸರಿಸುವ ವಿಧಿ–ವಿಧಾನದ ವಿಷಯವಾಗಿಯೂ ಅದನ್ನು ಅನುಷ್ಠಾನಕ್ಕಾಗಿ ಇರುವ ಅನುಕೂಲ ಕಾಲದ ವಿಷಯವಾಗಿಯೂ ವಿಚಾರಿಸು ತ್ತಾರೆ ಇಂಥ ಪ್ರಶ್ನೆ ಸಮಸ್ಯೆಗಳನ್ನು ನಾವು ಪ್ರತಿನಿತ್ಯ ಬಿಡಿಸಬೇಕಾಗುತ್ತದೆ. ಅರ್ಥಾತ್ ಉತ್ತರ ಕೊಡಬೇಕಾಗುತ್ತದೆ.

ಜಾತಕನ ಜಾತಕದ ಅವಲೋಕನದಿಂದ ಜಾತಕ ಪರಿಶೀಲನೆಯಿಂದ ಆತನ ಆರ್ಥಿಕ ಸ್ಥಿತಿಗತಿಯ ಬಗೆಗೆ ತಿಳಿದುಕೊಳ್ಳಲು ಸಾಧ್ಯವಾಗಿದೆ. ಕೆಲ ಜಾತಕರು ಜನ್ಮತಃ ಸುದೈವಿಗಳಿದ್ದು, ಅವರಿಗೆ ಪಿತ್ರಾರ್ಜಿತ ಸೌಖ್ಯವು ಆಕಸ್ಮಿಕ ಧನ ಯೋಗದ ಸೌಖ್ಯವನ್ನು ಪಡೆದುಕೊಂಡು ಬಂದಿರುವುದಲ್ಲದೇ ಸ್ವಸಾಮರ್ಥ್ಯ ದಿಂದ ಹಣ ಸಂಪಾದಿಸುವ ಯೋಗ್ಯತೆ ಉಳ್ಳವರೂ ಇರುತ್ತಾರೆ. ಹೀಗೆ ತ್ರಿವಿಧ ಮೂಲದಿಂದ ತ್ರಿವಿಧ ರೀತಿಯಿಂದ ಹಣ ಪಡೆಯುವ ಸುದೈವಿಗಳಿರು ತ್ತಾರೆ. ಕೆಲ ಜಾತಕರು ವಂಶ ಪಾರಂಪರ್ಯದಿಂದ ಆಗರ್ಭ ಶ್ರೀಮಂತ ರಿದ್ದು, ಅವರಿಗೆ ಹಣದ ಕೊರತೆಯೇ ಇರುವುದಿಲ್ಲ. ಕೆಲಜಾತಕರು ನಿರಂತರ

ಆರ್ಥಿಕ ಅಡಚಣೆಯುಳ್ಳವರು ಅರ್ಥಾತ ಜನ್ಮತಃ ದಾರಿದ್ರ್ಯಯೋಗ ಉಳ್ಳವರಿರುತ್ತಾರೆ.

ಇನ್ನು ಕೆಲ ಜಾತಕರು ಜನ್ಮತಃ ಶ್ರೀಮಂತರಿರಬಹುದು. ಇಲ್ಲವೆ ಸ್ವಸಾಮರ್ಥ್ಯದಿಂದ ಶ್ರೀಮಂತರಾಗಿರಬಹುದು. ಆದರೆ ಕಳವು ತುಡುಗುಗಳಿಂದಲೂ ಬೇರೆಯವರಿಗೆ ಜಾಮಿನು (ಶೆಕ್ಯುರಿಟಿ) ಆಗುವುದರಿಂದಲೂ ರಾಜಕೀಯ ಪುಢಾರಿ ವರ್ಗದ ಅವಕೃಪೆಗೆ ತುತ್ತಾಗುವದಿಂದಲೂ ಸರಕಾರಿ ಅಧಿಕಾರಿಗಳ ಆಕ್ರಮಣ (ದಾಳಿ) ದಿಂದಲೂ ಅಪ್ರೀತಿ ಪ್ರಾರಿಗಾಗಿಯೂ ಹಾನಿಗೊಳಗಾಗುತ್ತಾರೆ. ಅರ್ಥಾತ ಹಣ ಕಳೆದು ಕೊಂಡು ತನ್ನಮೂಲಕ ಆರ್ಥಿಕ ಸಂಕಟಕ್ಕೆ ಗುರಿಯಾಗಿರುತ್ತಾರೆ.

ಇನ್ನು ಕೆಲಜಾತಕರು ತಮ್ಮ ಯೋಗ್ಯತೆಗಿಂತ ಒಣಪ್ರತಿಷ್ಠೆತೆಗಾಗಿ ಖರ್ಚು ಮಾಡಿ ಸಾಲಗಾರರಾಗಿರುತ್ತಾರೆ. ಅಲ್ಲದೇ ಆರ್ಥಿಕ ಸಂಕಟವನ್ನು ತಂದು ಕೊಳ್ಳುತ್ತಾರೆ. ಇವರು ಸ್ವಯಂ ಕೃತ ಅಪರಾಧಿಗಳು ಇದರಂತೆ ಕೆಲ ಜಾತಕರು ತಮ್ಮ ಶ್ರೀಮಂತ ನೆರೆಹೊರೆಯವರಂತೆ, ಶ್ರೀಮಂತಬಂಧು ಬಳಗ (ದಾಯಾದಿಗಳಂತೆ) ದವರಂತೆ ವೈಭವಿಕೃತ ಜೀವನ ನಡೆಸಲು ಸಾಲಗಾರರಾಗುತ್ತಾರೆ. ಹಾಗೂ ಆರ್ಥಿಕ ಸಂಕಟಗೊಳಗಾಗುತ್ತಾರೆ. ಈ ವರ್ಗದವರು ಕೂಡ ಮೇಲಿನಂತೆ ಸ್ವಯಂಕೃತ ಅಪರಾಧಿಗಳು ಇನ್ನು ಕೆಲಜಾತಕರಿಗೆ ಇಂದು ಸಾಕಷ್ಟು ಹಣವಿದ್ದರೆ ನಾಳೆ ಒಂದು ಪೈಸೆಗೂ ಕೊರತೆ ಇಂದು ಲಕ್ಷಾಧೀಶ ನಾಳೆ ಭಿಕ್ಷಾಧೀಶ ಇಷ್ಟು ಏರಿಳಿತ, ಅನಿಶ್ಚಿತ, ಅಸ್ಥಿರತೆ ಇರುತ್ತದೆ. ಇನ್ನು ಕೆಲ ಜಾತಕರು ಆಯುಷ್ಯದ ಪೂರ್ವಾರ್ಧದಲ್ಲಿ ಆರ್ಥಿಕ ತುಟಾಗ್ರತೆ ಇದ್ದರೆ ಉತ್ತರಾರ್ಧದಲ್ಲಿ ಸಾಂಪತ್ತಿಕ ಸ್ಥಿತಿ ಸುಧಾರಿಸದವರಿರುತ್ತಾರೆ. ಇದರ ವಿರುದ್ಧ ಕೆಲಜಾತಕರು ಆಯುಷ್ಯದ ಪೂರ್ವಾರ್ಧದಲ್ಲಿಯೇ ಶ್ರೀಮಂತರಿದ್ದು, ಉತ್ತರಾರ್ಧದಲ್ಲಿ ಬಡತನ ಅನುಭವಿಸಬೇಕಾಗುತ್ತದೆ. ಇದರಂತೆ ಕೆಲಜಾತಕರು ಆಯುಷ್ಯದ ಪೂರ್ವಾರ್ಧ-ಉತ್ತರಾರ್ಧ ಬಡತನ ಭವಣೆಯಲ್ಲಿ ನರಳಾಡುತ್ತಾರೆ. ಆದರೆ ಆಯುಷ್ಯದ ಮಧ್ಯದ ಕೆಲವರುಷ ಸಾಂಪತ್ತಿಕ ಸುಸ್ಥಿಯಲ್ಲಿರುತ್ತಾರೆ. ಇನ್ನು ಕೆಲಜಾತಕರಿಗೆ ಪ್ರತಿ 4 ವರುಷಕ್ಕೆ ಕೆಲಜಾತಕರಿಗೆ 12ವರುಷಕ್ಕೊ ಕೆಲ ಜಾತರಿಗೆ 22 ವರುಷಕ್ಕೊಮ್ಮೆ ಆರ್ಥಿಕ ತೊಂದರೆ ಉಂಟಾಗುತ್ತದೆ.

ಆದುದರಿಂದ ಯಾವ ಜಾತಕನು ಜನ್ಮತಃ ಆರ್ಥಿಕ ದೃಷ್ಟಿಯಿಂದ ಸುದೃಢವಿ? ಯಾವಜಾತಕನು ಆರ್ಥಿಕದೃಷ್ಟಿಯಿಂದ ದುರ್ಬಲವಿ ಯಾವ ಜಾತಕನಿಗೆ ಆಕಸ್ಮಿಕ ಧನಯೋಗ ಉಂಟು ಯಾವ ಜಾತಕನಿಗೆ ಪಿತ್ರಾರ್ಜಿತ ಸೌಖ್ಯ ಉಂಟು ಯಾವ ಜಾತಕನು ಸ್ವಸಾಮರ್ಥ್ಯದಿಂದ ಸಾಂಪತ್ತಿಕ ಸ್ಥಿತಿಯುಳ್ಳವನಿರುತ್ತಾನೆ ಯಾವ ಜಾತನಿಗೆ ರಾಜಕೀಯ ವ್ಯಕ್ತಿಗಳಿಂದಲೂ ಸರಕಾರಿ ಅಧಿಕಾರಿಗಳಿಂದ ಆರ್ಥಿಕ ಹಾನಿಗೊಳಗಾಗುತ್ತಾನೆ. ಯಾವ ಜಾತಕನು ಕಳವು ತುಡುಗುಗಳಿಂದಲೂ ಬೇರೆ ಅವರಿಗೆ ಜಾಮೀನ ಆಗಿ ಹಣ ಕಳೆದುಕೊಳ್ಳುತ್ತಾನೆ. ಯಾರು ಸ್ವಯಂ ಕೃತ ಅಪರಾಧಿಗಳಿರುತ್ತಾರೆ. ಯಾವ ಜಾತಕನು ಯಾವ ವೇಳೆಯಲ್ಲಿ ಯಾವ ಮೂಲದಿಂದ ಆರ್ಥಿಕ ಲಾಭ ಆರ್ಥಿಕ ನಷ್ಟ ಅನುಭವಿಸುತ್ತಾನೆ. ಯಾವ ಅವಧಿಯಲ್ಲಿ ಆರ್ಥಿಕ ಸಬಲತೆ ಆರ್ಥಿಕ ದುರ್ಬಲತೆವಿರುತ್ತದೆ. ಈ ಎಲ್ಲ ಸನ್ನಿವೇಶಗಳಾಗಿ ಯಾವ ಯಾವ ಮುಂಜಾಗ್ರತೆ ಕ್ರಮು ಕೈಕೊಳ್ಳಬೇಕು ? ಯಾವ ಯಾವ ಪರಿಹಾರ ಕ್ರಮುಕೈಕೊಳ್ಳ ಬೇಕು ? ಬರಲಿರುವ ಆರ್ಥಿಕ ಅಘಾತವನ್ನು ಹೇಗೆ ಎದುರಿಸಬೇಕು ? ಫಲಜ್ಯೋತಿಷ್ಯ ಶಾಸ್ತ್ರದ ಸಂಶೋಧನೆಯ ಮೂಲಕ ಹಾಗೂ ನನ್ನ 40 ವರುಷಗಳ ವೃತ್ತಿ ಜೀವನದಲ್ಲಿಯ ಸಾವಿರಾರು ಜಾತಕಗಳ ಅಧ್ಯಯನದ ಅನುಭವದ ಮೂಲಕ ಈ ಹೊಸ ಪ್ರಯೋಗದಿಂದ ಆಗ ಬಹುದಾದ ವಿಪರೀತ ಪರಿಣಾಮ ತಪ್ಪಿಸಲು ಸಾಧ್ಯವಾಗಬಹುದೆಂಬ ಕಾರಣದಿಂದ **ಆರ್ಥಿಕ-ಪರಿಹಾರ** ಎಂಬ ಶಿರ್ಷಿಕೆ ಅಡಿಯಲ್ಲಿ ಈ ದ್ವಿತೀಯ ದಳದಲ್ಲಿ ಮೂಡಿಬಂದಿದೆ.

ಯಾರೊಬ್ಬರ ಆರ್ಥಿಕ ವಿಷಯವಾಗಿ ಯಾವ. ಯಾವ ಮುಂಜಾಗ್ರತೆ ಕ್ರಮಗಳನ್ನು ಯಾವ ಯಾವ ಪರಿಹಾರ ಕ್ರಮಗಳನ್ನು ಕೈಕೊಳ್ಳಬೇಕೆಂಬುದನ್ನು ಸೂಚಿಸುವ ಮೊದಲು ಜಾತಕನ ಜಾತಕವನ್ನು ಕುಲಂಕಷವಾಗಿ ಅಭ್ಯಸಿಸಬೇಕು ಏಕೆಂದರೆ ಹಣಕಾಸಿನ ದೃಷ್ಟಿಯಿಂದ ಜಾತಕನ ಜಾತಕ ಹೇಗಿದೆ ? ಎಂಬುದನ್ನು ತಿಳಿದುಕೊಂಡ ನಂತರ ತಾನೇ ಮುಂಜಾಗ್ರತೆ. ಪರಿಹಾರ ಕ್ರಮಗಳನ್ನು ಅನುಸರಿಸುವುದು.

ಯಾರೊಬ್ಬರ ಹಣಕಾಸಿನ ವಿಷಯವಾಗಿ ತಿಳಿದುಕೊಳ್ಳಲು ಜಾತಕದಲ್ಲಿಯ ಅನೇಕ ಸ್ಥಾನಗಳನ್ನು ಅನೇಕ ಗ್ರಹಗಳ ಬಲಾಬಲವನ್ನು ಪರಿಶೀ

ಸಬೇಕಾಗುತ್ತದೆ. ನಿರ್ದಿಷ್ಟ ಸ್ಥಾನವೇ ಹಣಕಾಸಿನ ಕಾರಕ ಸ್ಥಾನವೂ ಪೋಷಕ ಸ್ಥಾನವೂ ಪೂರಕ ಸ್ಥಾನವೂ ಎಂದು ಹೇಳಲುಬಾರದು ಹೇಗೆಂದರೆ ತೋಟ ಪಿತ್ರಾರ್ಜಿತ ಸೌಖ್ಯದ ಬಗೆಗೆ ದ್ವಿತೀಯ ಸ್ಥಾನದಲ್ಲಿಯ ಗ್ರಹ ಹಾಗೂ ದ್ವಿತೀಯೇಶನ ಬಲಾಬಲವನ್ನು ಸ್ಥಾವರ, ಇಸ್ಟೇಟ, ಹೊಲ-ಮನೆ[ಗದ್ದೆ] ವಾಹನ, ಟಾಕೀಜ, ಗಿರಣಿ,ಕಾರಖಾನೆಗಳ ಮಾಲಿಕತ್ವ, ಇವುಗಳಿಗೆಲ್ಲ ಚತುರ್ಥ ಸ್ಥಾನದಲ್ಲಿಯ ಗ್ರಹ ಹಾಗೂ ಚತುರ್ಥೇಶ ಬಲಾಬಲವನ್ನು ಇದರಂತೆ ತಾಯಿಯ ಕಡೆಯಿಂದ ಬರುವ ಹಣಕಾಸಿನ ವಿಷಯವಾಗಿ ಚತುರ್ಥಸ್ಥಾನ ಚತುರ್ಥೇಶನ ಬಲಾಬಲವನ್ನು ಸಹೋದರ ಸಹೋದರಿಯರ ಹಣಕಾಸಿನ ಸಂಬಂಧ ತೃತೀಯ ಸ್ಥಾನ ತೃತೀಯೇಶನ ಬಲಾಬಲವನ್ನು ಅಂಚೆಖಾತೆ ಬ್ಯಾಂಕ, ಯುನಿಟ್‌ಟ್ರಸ್ಟ್‌ಗಳಿಂದ ಬರುವ ಬಡ್ಡಿಯನ್ನು ಮತ್ತು ಠೇವಣಿ, ಶೇರು ಡಿಬೆಂಚರ ಮೊದಲಾದವುಗಳಿಂದ ಬರುವ ಬಡ್ಡಿ ವಿಷಯವಾಗಿಯೂ ಜಂಗಮ ಆಸ್ತಿಯಿಂದ ಬರುವ ಬಡ್ಡಿ ಮಕ್ಕಳಿಂದ ಬರುವ ಹಣ ಈ ಎಲ್ಲ ಮೂಲಗಳಿಂದ ಬರುವ ಹಣಕ್ಕಾಗಿ ಪಂಚಮಸ್ಥಾನ ಹಾಗೂ ಪಂಚಮಾಧೀಶರ ಬಲಾಬಲವನ್ನು ಪತ್ನಿಯಿಂದ ಪತಿಯಿಂದ ಬರುವ ಹಣ ಕಾಸಿನ ವಿಷಯವಾಗಿ ಸಪ್ತಮಸ್ಥಾನ ಹಾಗೂ ಸಪ್ತೇಶನ ಬಲಾಬಲವನ್ನು ದತ್ತಕ ಬಕ್ಷೀಸ, ವಾರಸಾ, ಲಾಟರಿ, ರೇಸು, ಭೂಗತ ಲಂಚ ಕಮೀಶನ್ ಮೊದಲಾದ ಆಕಸ್ಮಿಕಧನಲಾಭದ ವಿಷಯವಾಗಿ ಅಷ್ಟಮಸ್ಥಾನ ಹಾಗೂ ಅಷ್ಟಮೇಶ ಬಲಾಬಲವನ್ನು ಸ್ವತಂತ್ರ ವ್ಯಾಪಾರ, ಉದ್ಯಮ, ವೃತ್ತಿ ಕೃಷಿ, ನೌಕರಿ ಮೊದಲಾದವುಗಳಿಂದಲೂ ತಂದೆಯಿಂದಲೂ ಬರುವ ಹಣದ ವಿಷಯವಾಗಿ ದಶಮ ಸ್ಥಾನವನ್ನು ವಿದೇಶದಲ್ಲಿ ನೌಕರಿ ಮಾಡಿ ಇಲ್ಲವೆ ವಿದೇಶಗಳಿಗೆ ವಸ್ತುಗಳನ್ನು ರಫ್ತುಮಾಡಿ (ನಿರ್ಯಾತಮಾಡಿ) ಇಲ್ಲವೆ ವಿದೇಶಗಳಿಗೆ ಸಂಬಂಧಿಸಿದ ಕೆಲಸಗಳಿಗಾಗಿ ದೊರೆಯುವ ಹಣ ಹಾಗೂ ಪ್ರಚಾರ ನಾಮ (Good will) ಇಂದ ಬರುವ ಹಾಗೂ ಈ ಮೊದಲಾದ ಮೂಲಗಳಿಂದ ಬರುವ ಹಣಕ್ಕಾಗಿ ನವಮಸ್ಥಾನ ನವಮೇಶನ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಹೀಗಾಗಿ ಯಾರೊಬ್ಬರ ಹಣಕಾಸಿನ ವಿಷಯವಾಗಿ ತಿಳಿದುಕೊಳ್ಳಲು ಅನೇಕ ಸ್ಥಾನಗಳನ್ನು ಪರಿಶೀಲಿಸಬೇಕಾಗುತ್ತದೆ.

ಇವರಂತೆ ಯಾರೊಬ್ಬರ ಆರ್ಥಿಕ ಸ್ಥಿತಿಯು ಬಗೆಗೆ ಸಂಪತ್ತಿನ ಸ್ಥಿತಿಯು ಬಗೆಗೆ ಅರಿತು ಕೊಳ್ಳಲು ಜಾತಕವಲ್ಲಿಯು ಅನೇಕ ಗ್ರಹಗಳ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ.ನಿರ್ದಿಷ್ಟ ಗ್ರಹವೇ ಆರ್ಥಿಕ ಸ್ಥಿತಿಯು ಕಾರಕವೂ ಪೋಷಕವೂ ಪೂರಕವೂ ಎಂದು ಹೇಳಲು ಬಾರದು ಹೇಗೆಂದರೆ ತಂದೆಯಿಂದ ಬರುವ ಹಣಕ್ಕಾಗಿಯೂ ಸರಕಾರಿ ನೌಕರಿಯಿಂದ ಬರುವ ಹಣದ ವಿಷಯವಾಗಿ ರಾಜಕೀಯ ವ್ಯಕ್ತಿ ಹಾಗೂ ಸರಕಾರಿ ಅಧಿಕಾರಿಗಳಿಂದ ಬರುವ ಹಣದ ಈ ಎಲ್ಲಿ ಮೂಲಗಳಿಂದ ಬರುವ ಹಣ ಹಾಗೂ ಹಣಕಾಸಿನ ವಿಷಯವಾಗಿ ಸೂರ್ಯನ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ತಾಯಿಯಿಂದ ಹಾಗೂ ತಾಯಿಯ ಬಳಗದಿಂದ ಮತ್ತು ಹೊಲ, ಮನೆ,ಗದ್ದೆ, ತೋಟ,ಬಾಳು, ವಾಹನ ಟಾಗೀಜ, ಗಿರಣಿ,ಖಾರಖಾನೆಗಳ ಮಾಲೀಕತ್ವ ಇವೇ ಮೊದಲಾದವುಗಳಿಂದ ಬರುವ ಹಣಕಾಶಿನ ವಿಷಯವಾಗಿ ಚಂದ್ರನ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ.

ಸಟ್ಟಾ ಲಾಟರಿ, ಗುತ್ತಿಗೆ, ವ್ಯವಹಾರ, ಕಮಿಶನ್ ಏಜೆನ್ಸಿ ಹಂಚಿಕೆ ದಾರರಿಕೆ ಮೊದಲಾದ ಆಕಸ್ಮಿಕ ಧನಯೋಗದಿಂದ ಬರುವ ಹಣಕಾಸಿನ ವಿಷಯವಾಗಿ ಕುಜ [ಮಂಗಳ] ನ ಬಲಾಬಲಾವನ್ನು ಪರಿಶೀಲಿಸಬೇಕಾಗುತ್ತದೆ. ಯಾವುದೇ ಪ್ರಕಾರದ ವ್ಯಾಪಾರ, ರೇವಣಿ, ಬಡ್ಡಿ, ಲೇಖನಗಳಿಂದ ಬರುವ ಹಣಕಾಸಿನ ವಿಷಯವಾಗಿ ಬುಧನ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ವಿದ್ಯೆಯಿಂದಲೂ ಶಿಕ್ಷಣದಿಂದಲೂ ಪಾಠ, ಪ್ರವಚನದಿಂದಲೂ ಕೀರ್ತನೆಯಿಂದಲೂಆಧ್ಯಾತ್ಮದಿಂದಲೂ ಮಠಾಧೀಶರಿಂದಲೂ ಲೇಖನದಿಂದಲೂ ಮಕ್ಕಳದಿಂದಲೂ ಇವೇ ಮೊದಲಾದ ಮೂಲದಿಂದ ಬರುವ ಹಣಕಾಶಿನ ವಿಷಯವಾಗಿ ಗುರುವಿನ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಪತ್ನಿ, ಪರಸ್ತ್ರೀ, ಪತ್ನಿಯ ಸಂಬಂಧಿಕರಿಂದ ಬರುವ ಹಣಕ್ಕಾಗಿ ಶುಕ್ರನ ಬಲಾಬಲವನ್ನು ಪರಿಶೀಲಿಸಬೇಕಾಗುತ್ತತೆ. ಕಾಯಿದೆ ಸಲಹೆಗಾರಿಕೆ ಇಲ್ಲವೆ ಸ್ವತಃ ಬಹಳ ಪರಿಶ್ರಮದಿಂದಲೂ ಹಣ ಸಂಪಾದಿಸುವಿಕೆ ಇವುಗಳಿಗಾಗಿ ಶನಿಯ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಹೀಗೆ ಯಾರೊಬ್ಬರ ಆರ್ಥಿಕ ವಿಷಯವಾಗಿ ತಿಳಿದುಕೊಳ್ಳಲು ಅನೇಕ ಗ್ರಹಗಳ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ.

ವಿಭಿನ್ನ ಸ್ಥಾನಗಳ ಮೇಲಿಂದಲೂ ವಿಭಿನ್ನ ಗ್ರಹಗಳ ಮೇಲಿಂದಲೂ ವಿಭಿನ್ನ ಪ್ರಕಾರದ ದ್ರವ್ಯಾನುಕೂಲತೆಯಾಗುತ್ತಿದ್ದರೂ ಯಾರೊಬ್ಬರ ಆರ್ಥಿಕ ವಿಷಯವಾಗಿ ಮೂರೇ ಮೂರು ಪ್ರಕಾರಗಳಿವೆ 1] ಪಿತ್ರಾರ್ಜಿತ, 2] ಸ್ವ ಅರ್ಜಿತ 3] ಆಕಸ್ಮಿಕ ಧನಯೋಗ ಈ ಮೂರು ಪ್ರಕಾರದ ದ್ರವ್ಯಾನುಕೂಲತೆಯಿಂದ ಯಾರೊಬ್ಬರ ಸಾಂಪತ್ತಿಕ ಸ್ಥಿತಿಯ ಬಗೆಗೆ ತಿಳಿದು ಬಹುದು ಆದರೆ ಈ ಮೂರೇ ಮೂರು ಸಂಗತಿಗಳಿಂದ ಯಾರೊಬ್ಬರ ಹಣಕಾಸಿನ ವಿಷಯವಾಗಿ ಮುಂಜಾಗ್ರತೆ ಹಾಗೂ ಪರಿಹಾರ ಕ್ರಮ ತೆಗೆದು ಕೊಳ್ಳಲುಬರುವುದಿಲ್ಲ ಇದರ ಸಂಗಡ ಇನ್ನು ಎರಡು ಸಂಗತಿಗಳನ್ನು ಗಣನೆಗೆ ತೆಗೆದು ಕೊಳ್ಳಬೇಕಾಗುತ್ತದೆ. ಅವುಯಾವವೆಂದರೆ ಜಾತಕದಲ್ಲಿಯ 1) ಶುಭ ಅಶುಭ ಯೋಗಗಳ ವಿಚಾರ 2) ಗೋಚರೀ ಗ್ರಹಗಳ ಪರಿಭ್ರಮಣ ಪ್ರಭಾವ, ಪರಿಣಾಮ ಹಾಗೂ ಮಹದರ್ಶೆ, ಅಂತರ್ದಶೆಗಳ ಪರಿಣಾಮ ಹೀಗೆ ಐದು ಸಂಗತಿಗಳು ಅಂದರೆ 1] ಪಿತ್ರಾರ್ಜಿತ, 2] ಸ್ವಅರ್ಜಿತ, 3] ಆಕಸ್ಮಿಕ ಧನಯೋಗ, 4] ಜಾತಕದಲ್ಲಿಯ ಶುಭ-ಅಶುಭ ಯೋಗಗಳ ಪರಿಣಾಮ 5] ಗೋಚರೀ ಗ್ರಹಗಳ ಪರಿಭ್ರಮಣದ ಪರಿಣಾಮ ಪ್ರಭಾವ ಹಾಗೂ ಮಹದರ್ಶೆ ಅಂತರದರ್ಶೆಯ ಪರಿಣಾಮ ಪ್ರಭಾವ. ಹೀಗೆ ಮೇಲೆ ಬರೆದ ಈ ಎಲ್ಲ ಐದು ಸಂಗತಿಗಳು ಪೂರಕವೂ ಶುಭವಿದ್ದರೆ ಜಾತಕನು ಹಣಕಾಸಿನ ವೃಷ್ಟಿಯಿಂದ ಸುದೈವಿ ಇರುತ್ತಾನೆ ಇವರಿಗೆ ಯಾವ ಮುಂಜಾಗ್ರತೆ ಹಾಗೂ ಪರಿಹಾರದ ಕ್ರಮಗಳ ಅವಶ್ಯಕತೆ ಇರುವುದಿಲ್ಲ ಆದರೆ ಈ ಐದು ಸಂಗತಿಗಳೆಲ್ಲವೂ ಪ್ರತಿಕೂಲವೂ ಅಶುಭವು ಇದ್ದರೆ ಇಂಥ ಜಾತಕನು ದುರ್ದೈವಿ ಇದ್ದು ಸದಾ ಆರ್ಥಿಕ ಸಂಕಟಕ್ಕೆ ಗುರಿಯಾಗುತ್ತಾನೆ. ಇವರು ದಾರಿದ್ರ್ಯ ಯೋಗದವರಿದ್ದು, ಅನೇಕ ಪ್ರಕಾರದ ಮುಂಜಾಗ್ರತೆ ಹಾಗೂ ಪರಿಹಾರ ಕ್ರಮಗಳನ್ನು ಕೈಕೊಳ್ಳಬೇಕಾಗುತ್ತದೆ. ಇದರಂತೆ ಮೇಲೆ ಒರೆದ ಐದು ಸಂಗತಿಗಳ ಯಾವ ಯಾವ ಜಾತಕನಿಗೆ ಯಾವ ಯಾವ ಸಂಗತಿಗಳು ಪೂರಕ ವಿರುತ್ತವೆ ಯಾವ ಯಾವ ಸಂಗತಿಗಳು ಪ್ರತಿಕೂಲವಿರುತ್ತವೆ ಎಂಬುದನ್ನು ಅವರವರ ಜಾತಕದ ಆಧಾರದ ಮೇಲಿಂದ ಖಚಿತಪಡಿಸಿಕೊಂಡು ಅದಕ್ಕೆ ಯಾವ ಯಾವ ಮುಂಜಾಗ್ರತೆ ಕ್ರಮಕೈಕೊಳ್ಳಬೇಕು ಯಾವ ಪರಿಹಾರ ಕ್ರಮ ಕೈಕೊಳ್ಳಬೇಕು ಎಂಬುದನ್ನು ಪರಿಶೀಲಿಸುವಾ.

1] **ಪಿತ್ರಾರ್ಜಿತ ಸೌಖ್ಯ :** ಪಿತ್ರಾರ್ಜಿತ ಸೌಖ್ಯ ಎಲ್ಲರಿಗೂ ಲಭಿಸುವುದಿಲ್ಲ ಕೆಲ ಸುದೈವಿ ಜಾತಕದವರಿಗೆ ಮಾತ್ರ ಲಭಿಸುತ್ತದೆ. ಪಿತ್ರಾರ್ಜಿತ ಸೌಖ್ಯದ ಪೋಷಕ ಸ್ಥಾನಗಳೆಂದರೆ ದ್ವಿತೀಯ, ಚತುರ್ಥ ದಶಮ, ಈ ಮೂರು ಸ್ಥಾನಗಳು ಏಕೆಂದರೆ ದ್ವಿತೀಯ ಸ್ಥಾನವಂತೂ ಪಿತ್ರಾರ್ಜಿತ ಸ್ಥಾನವೇ ಇರುತ್ತದೆ. ಅದರೆ ಚತುರ್ಥ ಸ್ಥಾನವಿದು ಹೊಲ, ಗದ್ದೆ, ತೋಟ, ಮನೆ, [ಬಂಗ್ಲೆ] ಚಾಳು, ವಾಹನಗಳ ಸ್ಥಾನವಿರುತ್ತದೆ ಗಿರಣಿ, ಕಾರಖಾನೆ, ಟಾಕೀಜಗ ಮಾಲಿಕತ್ವದ ಸ್ಥಾನವೂ ಇರುತ್ತದೆ ಇದೂ ಅಲ್ಲದೇ ತಾಯಿಯಿಂದ ಬರುವ ಹಣಕಾಸಿನ ಸ್ಥಾನವೂ ಇರುತ್ತದೆ ಹಾಗೂ ಸ್ಥಾವರ ಇಷ್ಟೇಟಿನ ಸಾಸ್ಥವೂ ಹೌದು. ಇದರಂತೆ ದಶಮ ಸ್ಥಾನವು ತಂದೆ ಯಿಂದ ತಂದೆಯ ಬಳಗದವರಿಂದ ಬರುವ ಸಂಪತ್ತಿಕ ಸ್ಥಾನವೂ ಇರುತ್ತದೆ ಆದುದರಿಂದ ಈ ಮೂರು ಸ್ಥಾನಗಳಲ್ಲಿರುವ ಬಲಾಢ್ಯ ಗ್ರಹಗಳು ಹಾಗೂ ಈ ಸ್ಥಾನಾಧೀಶರು ಬಲಾಢ್ಯರಿದ್ದರೆ ಮಾತ್ರ ಪಿತ್ರಾರ್ಜಿತ ಸೌಖ್ಯ ಲಭಿಸುತ್ತದೆ. ಈ ಮೂರು ಸ್ಥಾನಗಳಲ್ಲಿ ನಿರ್ಬಲ, ದುರ್ಬಲ ಗ್ರಹಗಳಿದ್ದು, ಈ ಸ್ಥಾನಾಧೀಶರು ದುರ್ಬಲ ನಿರ್ಬಲರಿದ್ದರೆ ಪಿತ್ರಾರ್ಜಿತ ಸೌಖ್ಯ ದೊರೆಯಲಾರದು. ಇಲ್ಲಿ ಗಮನಿಸತಕ್ಕ ಸಂಗತಿಯೆಂದರೆ **ಸ್ಥಾನದಲ್ಲಿರುವ ಗ್ರಹಗಳಿಗಿಂತ ಸ್ಥಾನಾಧೀಶನ ಬಲಾಬಲದ ಪ್ರಾಮುಖ್ಯತೆಗೆ ಹೆಚ್ಚು** ಲಕ್ಷ್ಯಕೊಡಬೇಕು ಜಾತಕದಲ್ಲಿ ಹನ್ನೆರಡು ಸ್ಥಾನಗಳಿದ್ದು ಒಂಭತ್ತು ಗ್ರಹಗಳ ಆಧಿಪತ್ಯವಿರುತ್ತದೆ. ಸ್ಥಾನಾಧಿಪತಿಗಳುತಮ್ಮ ತಮ್ಮ ಸ್ಥಾನದಲ್ಲಿ ಇರಬಹುದು ಇರಲಿಕ್ಕಿಲ್ಲ. ಅಥವಾ ಒಂದೇ ಸ್ಥಾನದಲ್ಲಿ ಅನೇಕ ಗ್ರಹಗಳು ಸಹ ಇರಬಹುದು ಆದುದರಿಂದ ಆಯಾ ಸ್ಥಾನಗಳ ಅಧಿಪತಿಗಳ [ಸ್ಥಾನಾಧೀಶರ] ಬಲಾಬಲವನ್ನು ನೋಡಬೇಕು ಈ ಕಾರಣದಿಂದಲೇ ಸ್ಥಾನದಲ್ಲಿರುವ ಗ್ರಹಗಳಿಗಿಂತ ಸ್ಥಾನಾಧೀಪತಿಯು ಹೆಚ್ಚು ಪರಿಣಾಮವನ್ನು ಕೊಡುತ್ತಾನೆ. ಉದಾಹರಣೆಗಾಗಿ ಮಿಥುನಲಗ್ನದ ದ್ವಿತೀಯದಲ್ಲಿ ಉಚ್ಚರಾಶಿಯ ಗುರು ಇದ್ದಾನೆ ದ್ವಿತೀಯಾಧಿ ಪತಿಯಾದ ಚಂದ್ರನು ನೀಚ ರಾಶಿಯವನಾಗಿ ಷಷ್ಠದಲ್ಲಿದ್ದಾನೆಯೆಂದು ತಿಳಿಯಿರಿ. ಇಲ್ಲಿ ದ್ವಿತಿಯಾಧಿಪತಿಯಾದ ಚಂದ್ರನು ಷಷ್ಠದಲ್ಲಿರುವುದು ಹಾನಿಕಾರಕವು ಅರ್ಥಾತ ಪಿತ್ರಾರ್ಜಿತ ಸೌಖ್ಯಗಳಂಥ ದ್ವಿತೀಯ ಭಾವದ ಶುಭ ಫಲ [illegible] ದೊರೆಯಲಾರದು. ಆದರೆ ಮಿಥುನ ಲಗ್ನ ದ್ವಿತೀಯದಲ್ಲಿ

ಉಚ್ಚ ರಾಶಿಯ ಗುರುವು ಸಪ್ತಮ ಹಾಗೂ ದಶಮ ಭಾವಗಳ ಸಂಪೂರ್ಣ ಫಲ ಕೊಡುತ್ತಾನೆ ವಿನಃ ದ್ವಿತೀಯಾಧಿಪತಿಯಾದ ಚಂದ್ರನು ದುರ್ಬಲನಾಗಿ ಷಷ್ಠದಲ್ಲಿರುವುದು ದ್ವಿತೀಯ ಭಾವಕ್ಕೆ ಪ್ರತಿಕೂಲ ಅಂಶವು ಇದಕ್ಕೊಂದು ವ್ಯಾವಹಾರಿಕ ಉದಾಹರಣೆ ಕೊಟ್ಟು ಸ್ಪಷ್ಟೀಕರಿಸುವೆ ಮನೆಯ ಯಜಮಾನನು ದಾರಿದ್ರ್ಯದಲ್ಲಿರುವಾಗ ಸಿರಿವಂತನಾದ ಬೀಗನು ಮನೆಗೆ ಬಂದರೆ ತನ್ನ ದಾರಿದ್ರ್ಯದಲ್ಲಿಯೇ ಬೀಗನನ್ನು ಮನೆಯಯಜಮಾನವನ್ನು ಸತ್ಕರಿಸುವನು· ಉಪಚರಿಸುವನು. ಆದುದರಿಂದ ಸ್ಥಾನದಲ್ಲಿರುವಗ್ರಹಗಳಿಗಿಂತ ಸ್ಥಾನಾಧೀಶನ ಬಲಾಬಲವನ್ನು ಪರಿಶೀಲಿಸಬೇಕು.

ಸ್ಥಾನದಲ್ಲಿರುವ ಗ್ರಹಗಳು ಏನೂ ಪರಿಣಾಮ ಬೀರುವದಿಲ್ಲವೆಂದಲ್ಲ ಆದರೆ ಸ್ಥಾನಾಧೀಶನ ಪರಿಣಾಮ ಹೆಚ್ಚು ಪ್ರಭಾವತ ಬೀರುತ್ತದೆ. ಮೇಲಿನ ಉದಾಹರಣೆಯನ್ನೇ ತೆಗೆದುಕೊಳ್ಳಿರಿ. ಮಿಥುನ ಲಗ್ನದ ದ್ವಿತೀಯದಲ್ಲಿ ಗುರು ಷಷ್ಠದಲ್ಲಿರುವ ಚಂದ್ರನಿದ್ದರೆ ಪಿತ್ರಾರ್ಜಿತ ಸೌಖ್ಯಕ್ಕೆ ಮಿಶ್ರಫಲ ದೊರೆಯುತ್ತದೆ. ದ್ವಿತೀಯದಲ್ಲಿ ಉಚ್ಚ ಗುರುವಿನಿಂದಾಗಿ ಪಿತ್ರಾರ್ಜಿತ ಸೌಖ್ಯ ತುಸುಸಿಗುತ್ತದೆ. ಆದರೆ ಗುರುವಿನ ಸಂಗಡ ದ್ವಿತೀಯೇಶನಾದ ಚಂದ್ರನೂ ಬಲಾಢ್ಯನಾಗಿದ್ದರೆ ಸಂಪೂರ್ಣ ಪಿತ್ರಾರ್ಜಿತ ಸೌಖ್ಯ ಲಭಿಸುತ್ತದೆ. ಇನ್ನೊಂದು ಉದಾಹರಣೆ ನೋಡಿರಿ ಅದೇ ಮಿಥುನ ಲಗ್ನದ ದಶಮದಲ್ಲಿ ಗುರು ಚಂದ್ರರಿದ್ದು, ದ್ವಿತೀಯದಲ್ಲಿ ಶನಿ ಇಲ್ಲವೇ ಮಂಗಳ ನಿವ್ವಾನೆಯೆಂದು ತಿಳಿಯಿರಿ. ಇಲ್ಲಿ ದ್ವಿತೀಯೇಶನಾದ ಚಂದ್ರನು ಬಲಾಢ್ಯನಾಗಿ ದಶಮೇಶನಾದ ಗುರುವಿನೊಂದಿಗಿರುವುದು ದ್ವಿತಿಯ ಭಾವದ ಸೌಖ್ಯಸಿಗುತ್ತದೆ. ಆದರೆ ದ್ವಿತೀಯದಲ್ಲಿ ಶನಿ, ಇಲ್ಲವೇ ಮಂಗಳನಿದ್ದ ಜಾತಕರಿಗೆ ತೊಂದರೆಯಿಂದ ದ್ವಿತೀಯ ಭಾವದ ಫಲಸಿಗುತ್ತದೆ. ಎಂದು ಅರ್ಥವಿವರಣೆ ಮಾಡಬೇಕು ಹೀಗೆ ಪಿತ್ರಾರ್ಜಿತ ಸೌಖ್ಯದ ವಿಷಯವಾಗಿ ದ್ವಿತೀಯ, ಚತುರ್ಥ. ದಶಮ ಈ ಸ್ಥಾನಗಳ ಸ್ಥಾನಾಧೀಶರ ಬಲಾಬಲವನ್ನು ಸೂಕ್ಷ್ಮವಾಗಿ ಪರಿಶೀಲನೆ ಆ ಬಳಿಕ ದ್ವಿತೀಯ, ಚತುರ್ಥ. ದಶಮ ಸ್ಥಾನದಲ್ಲಿರುವ ಗ್ರಹಗಳ ಬಲಾಬಲ ವನ್ನು ಪರಿಶೀಲಿಸ ಬೇಕು ಈ ಮೂರು ಸ್ಥಾನಗಳಲ್ಲಿರುವ ಗ್ರಹ ಹಾಗೂ ಈ ಮೂರುಸ್ಥಾನಾಧೀಶರಲ್ಲಿ ಯಾವುದೊಂದು ಸ್ಥಾನ ಹಾಗೂ ಯಾವುದೊಂದು

ಸ್ಥಾನಾಧೀಶರು ಇಲ್ಲವೇ ಎರಡು ಸ್ಥಾನಗಳು ಇಬ್ಬರು ಸ್ಥಾನಾಧೀಶರು ದುರ್ಬಲ, ನಿರ್ಬಲರಿದ್ದರೆ ಅಷ್ಟರ ಮಟ್ಟಿಗೆ ಪಿತ್ರಾರ್ಜಿತ ಸೌಖ್ಯ ಕಡಿಮೆ ಯಾಗುತ್ತದೆ. ಹೀಗೆ ಪಿತ್ರಾರ್ಜಿತ ಸೌಖ್ಯದ ವಿಷಯವಾಗಿ ಪರಿಶೀಲಿಸಬೇಕು ಅವಕ್ಕಾಗಿರುವ ಯಾವ ಮುಂಜಾಗ್ರತೆ ಹಾಗೂ ಪರಿಹಾರ ಕ್ರಮಗಳನ್ನು ಕೈ ಕೊಳ್ಳಬೇಕು ಎಂಬುದರ ವಿವರಣೆ ವಿಶ್ಲೇಷಣೆಯನ್ನು ಇದೇ ಅಧ್ಯಾಯದ ಕೊನೆಗೆ ಬರೆಯಲಾಗಿದೆ.

2] **ಸ್ವ ಅರ್ಜಿತ :** ಸ್ವ ಅರ್ಜಿತವೆಂದರೆ ಸ್ವತಃ ಯಾವುದೋಂದು ಉದ್ಯೋಗ, ವ್ಯಾಪಾರ, ವೃತ್ತಿ, ಕೃಷಿ, ನೌಕರಿ ಮಾಡಿ ಗಳಿಸುವ ಕ್ರಿಯೆಗೆ ಸ್ವ ಅರ್ಜಿತವೆನ್ನುತ್ತಾರೆ. ಆದರೆ ಕೆಲವರಿಗೆ ವಿದ್ಯಾರ್ಹತೆ, ದೈಹಿಕ ಸ್ವಾಸ್ಥ್ಯ ಮೊದಲಾದ ಎಲ್ಲ ಅನುಕೂಲತೆಗಳಿದ್ದರೂ ಸ್ವತಃ ಗಳಿಸಲು ಆಗುವುದಿಲ್ಲ. ಇನ್ನು ಕೆಲವರು ಸ್ವತಃ ಸಾಕಷ್ಟು ಗಳಿಸಲು ಸಮರ್ಥರಿರುತ್ತಾರೆ. ಹೀಗೇಕೆ ಎಂದರೆ ಅವರವರ ಜಾತಕದ ಗ್ರಹಸ್ಥಿತಿಯೇ ಕಾರಣ ಯಾರೊಬ್ಬರ ಜಾತಕದ ಸ್ವಸಾಮರ್ಥ್ಯದಿಂದ ಹಣ ಗಳಿಸುವುದನ್ನು ತಿಳಿಯಲು ಆಯಾ ಜಾತಕನ ಜಾತ ಕವಲ್ಲಿಯ ಯೋಗ ಕಾರಕ ಗ್ರಹಗಳ ಬಲಾಬಲದ ಮೇಲಿನಿಂದ ಅವನ ಅಥವಾ ಅವಳ ಹಣಗಳಿಸುವ ಸಾಮರ್ಥ್ಯದ ವಿಷಯವಾಗಿ ತಿಳಿಯುತ್ತದೆ. ಈ ಯೋಗಕಾರಕ ಗ್ರಹಗಳು ವಿಭಿನ್ನ ಲಗ್ನಗಳಿಗೆ ವಿಭಿನ್ನವಿದ್ದು, ಅವುಗಳ ವಿವರಣೆಯನ್ನು ಈ ಕೆಳಗಿನಂತೆ ಬರೆಯಲಾಗಿದೆ.

1] **ಮೇಷ ಲಗ್ನ :** ಈ ಲಗ್ನಕ್ಕೆ ರವಿ, ಚಂದ್ರ, ಮಂಗಳ, ಗುರು, ಈ ನಾಲ್ಕು ಗ್ರಹಗಳು ಯೋಗಕಾರಕ ಗ್ರಹಗಳು ಈ ನಾಲ್ಕು ಗ್ರಹಗಳು ಬಲಾಢ್ಯರಿದ್ದರೆ ಅಂದರೆ ರಾಶಿಬಲ, ಸ್ಥಾನಬಲದವರಿದ್ದ ಜಾತಕನು ಸ್ವ ಸಾಮರ್ಥ್ಯದಿಂದ ಹಣ ಗಳಿಸಬಲ್ಲನು. ಈ ನಾಲ್ಕು ಗ್ರಹಗಳು ದುರ್ಬಲ ನಿರ್ಬಲರಿದ್ದ ಜಾತಕನು ಸ್ವಸಾಮರ್ಥ್ಯದಿಂದ ಹಣ ಗಳಿಸಲಾರ ಈನಾಲ್ಕರಲ್ಲಿ ಎಷ್ಟು ಗ್ರಹಗಳು ಬಲಾಢ್ಯರಿರುತ್ತವೆಯೋ ಅಷ್ಟು ಅವನು ಗಳಿಸುವ ಸಾಮರ್ಥ್ಯ ಚನ್ನಾಗಿರುತ್ತದೆ.

2) **ವೃಷಭ ಲಗ್ನ** : ಈ ಲಗ್ನಕ್ಕೆ ಶನಿ, ಬುಧ, ರವಿ, ಈ ಮೂರು ಗ್ರಹಗಳು ಕ್ರಮಶಃ ಸ್ವಅರ್ಜಿತ ವಿಷಯವಾಗಿ ಯೋಗಕಾರಕ ಗ್ರಹಗಳು ಈ ಮೂರು ಗ್ರಹಗಳು ಬಲಾಢ್ಯರಿದ್ದ ಜಾತಕನು ಸ್ವಸಾಮರ್ಥ್ಯದಿಂದ ಹಣ ಗಳಿಸಬಲ್ಲನು. ಸಂಪಾದಿಸಬಲ್ಲನು ಈ ಮೂರು ಗ್ರಹಗಳು ದುರ್ಬಲರಿದ್ದ ಜಾತಕನಿಗೆ ಸ್ವಸಾಮರ್ಥ್ಯದಿಂದಹಣಗಳಿಸಲಾರ ಈ ಮೂರು ಗ್ರಹಗಳಲ್ಲಿ ಕನಿಷ್ಟ ಒಂದೆರಡು ಗ್ರಹಗಳಾದರೂ ಬಲಾಢ್ಯರಿದ್ದರೆ ಕನಿಷ್ಟಒಂದಾದರೂ ಗ್ರಹ ಬಲಾಢ್ಯರಿದ್ದ ಜಾತಕನು ತುಸುಮಟ್ಟಿಗೆ ಹಣಗಳಿಸಬಲ್ಲನು.

3) **ಮಿಥುನ ಲಗ್ನ** : ಈ ಲಗ್ನಕ್ಕೆ ಬುಧ, ಗುರು, ಶನಿ, ಶುಕ್ರರು ಈ ನಾಲ್ಕು ಗ್ರಹಗಳು ಕ್ರಮಶಃ ಸ್ವಅರ್ಜಿತ ವಿಷಯದ ಯೋಗಕಾರಕ ಗ್ರಹ ಗಳು ಈ ನಾಲ್ಕೂ ಗ್ರಹಗಳು ಬಲಾಢ್ಯರಿದ್ದ ಜಾತಕನಿಗೆ ಹಣಗಳಿಸುವ ಸಾಮರ್ಥ್ಯ ಉತ್ತಮವಿರುತ್ತದೆ. ಈನಾಲ್ಕೂ ಗ್ರಹಗಳು ನಿರ್ಬಲ, ದುರ್ಬಲ ರಿದ್ದ ಜಾತಕನಿಗೆ ಹಣ ಗಳಿಸುವ ಸಾಮರ್ಥ್ಯವಿರುವುದಿಲ್ಲ. ಈ ನಾಲ್ಕರಲ್ಲಿ ಕನಿಷ್ಟ 1–2 ಗ್ರಹಗಳು ಬಲಾಢ್ಯರಿದ್ದರೂ ಅಷ್ಟರಮಟ್ಟಿಗೆ ಹಣ ಗಳಿಸಲು ಶಕ್ಯವಿರುತ್ತದೆ.

4) **ಕರ್ಕ ಲಗ್ನ** : ಈ ಲಗ್ನಕ್ಕೆ ಮಂಗಳ, ಚಂದ್ರ, ಶುಕ್ರ ಈ ಮೂರೇ ಮೂರು ಗ್ರಹಗಳು ಕ್ರಮಶಃ ಸ್ವಅರ್ಜಿತ ವಿಷಯದ ಯೋಗಕಾರಕ ಗ್ರಹಗಳು ಈ ಮೂರು ಗ್ರಹಗಳು ಬಲಾಢ್ಯರಿದ್ದ ಜಾತಕನ ಹಣ ಗಳಿಸುವ ಸಾಮರ್ಥ್ಯ ಚನ್ನಾಗಿರುತ್ತದೆ. ಈ ಮೂರು ಗ್ರಹಗಳು ದುರ್ಬಲ. ನಿರ್ಬಲ ನಿದ್ದ ಜಾತಕನಿಗೆ ಹಣ ಗಳಿಸುವ ಸಾಮರ್ಥ್ಯವಿರುವುದಿಲ್ಲ. ಈ ಮೂರು ಗ್ರಹಗಳಲ್ಲಿ ಕನಿಷ್ಠ ಒಂದಾದರೂ ಗ್ರಹ ಬಲಾಢ್ಯರಿದ್ದ ಜಾತಕನಿಗೆ ತುಸು ಮಟ್ಟಿಗೆ ಹಣಗಳಿಸಬಲ್ಲನು.

5) **ಸಿಂಹ ಲಗ್ನ** : ಈ ಲಗ್ನಕ್ಕೆ ಮಂಗಳ, ರವಿ, ಗುರು, ಈ ಮೂರು ಗ್ರಹಗಳು ಕ್ರಮಶಃ ಸ್ವಅರ್ಜಿತ ವಿಷಯವಾಗಿ ಯೋಗಕಾರಕ ಗ್ರಹಗಳು ಈ ಮೂರು ಗ್ರಹಗಳು ಬಲಾಢ್ಯರಿದ್ದ ಜಾತಕನ ಹಣಗಳಿಸುವ ಯೋಗ್ಯತೆ ಚೆನ್ನಾಗಿರುತ್ತದೆ. ಈ ಮೂರು ಗ್ರಹಗಳು ನಿರ್ಬಲ ದುರ್ಬಲ

ರಿದ್ದ ಜಾತಕನ ಹಣ ಗಳಿಸುವ ಯೋಗ್ಯತೆವಿರುವುದಿಲ್ಲ. ಈ ಮೂರು ಗ್ರಹ ಗಳಲ್ಲಿ ಕನಿಷ್ಟ ಒಂದಾದರೂ ಗ್ರಹ ಬಲಾಢ್ಯರಿದ್ದ ಜಾತಕನು ತುಸು ಮಟ್ಟಿಗೆ ಹಣ ಗಳಿಸಬಲ್ಲ.

6) **ಕನ್ಯಾ ಲಗ್ನ** : ಈ ಲಗ್ನಕ್ಕೆ ಬುಧ, ಗುರು ಈ ಎರಡೇ ಎರಡು ಗ್ರಹಗಳು ಸ್ವಅರ್ಜಿತ ವಿಷಯವಾಗಿ ಯೋಗಕಾರಕ ಗ್ರಹಗಳು, ಈ ಎರಡು ಗ್ರಹಗಳು ಬಲಾಢ್ಯರಿದ್ದ ಜಾತಕನು ಹಣ ಸಂಪಾದಿಸುವ ಶಕ್ತಿ ಚೆನ್ನಾಗಿ ರುತ್ತದೆ. ಈ ಎರಡೂ ಗ್ರಹಗಳು ದುರ್ಬಲ, ನಿರ್ಬಲವಿದ್ದ ಜಾತಕನ ಹಣ ಸಂಪಾದಿಸುವ ಶಕ್ತಿ ಇರುವುದಿಲ್ಲ. ಈ ಎರಡರಲ್ಲಿ ಒಂದಾದರೂ ಗ್ರಹ ಬಲಾಢ್ಯರಿದ್ದ ಜಾತಕನು ತುಸುಮಟ್ಟಿಗೆ ಹಣ ಸಂಪಾದಿಸಬಲ್ಲನು.

7) **ತುಲಾಲಗ್ನ** : ಈ ಲಗ್ನಕ್ಕೆ ಶನಿ, ಶುಕ್ರ, ಚಂದ್ರ ಈ ಮೂರು ಗ್ರಹಗಳು ಕ್ರಮಶಃ ಸ್ವಅರ್ಜಿತ ವಿಷಯವಾಗಿ ಯೋಗಕಾರಕ ಗ್ರಹಗಳು. ಈ ಗ್ರಹಗಳು ಬಲಾಢ್ಯರಿದ್ದ ಜಾತಕನಿಗೆ ಹಣ ಗಳಿಸುವ ಸಾಮರ್ಥ್ಯ ಚೆನ್ನಾಗಿರು ತ್ತದೆ. ಈ ಮೂರು ಗ್ರಹಗಳು ದುರ್ಬಲ, ನಿರ್ಬಲನಿದ್ದ ಜಾತಕನ ಹಣ ಗಳಿಸುವ ಶಕ್ತಿಇರುವುದಿಲ್ಲ ಈ ಮೂರು ಗ್ರಹಗಳಲ್ಲಿ ಕನಿಷ್ಟಒಂದಾದರೂ ಗ್ರಹ ಬಲಾಢ್ಯರಿದ್ದ ಜಾತಕನು ತುಸುಮಟ್ಟಿಗೆ ಹಣ ಗಳಿಸಬಲ್ಲನು.

8) **ವೃಶ್ಚಿಕ ಲಗ್ನ** : ಈ ಲಗ್ನಕ್ಕೆ ರವಿ, ಚಂದ್ರ, ಶನಿ, ಗುರು ಈ ನಾಲ್ಕು ಗ್ರಹಗಳು ಕ್ರಮಶಃ ಸ್ವಅರ್ಜಿತ ವಿಷಯವಾಗಿ ಯೋಗಕಾರಕ ಗ್ರಹಗಳು ಈ ನಾಲ್ಕು ಗ್ರಹಗಳು ಬಲಾಢ್ಯರಿದ್ದ ಜಾತಕ ಹಣ ಗಳಿಸುವ ಕೌಶಲ್ಯ ಚೆನ್ನಾಗಿ ತಿಳಿದಿರುತ್ತದೆ. ಈ ನಾಲ್ಕು ಗ್ರಹಗಳು ದುರ್ಬಲ, ನಿರ್ಬಲನಿದ್ದ ಜಾತಕನಿಗೆ ಹಣ ಗಳಿಸುವ ಕೌಶಲ್ಯ ಹೊಂದಿರುವುದಿಲ್ಲ. ಈ ನಾಲ್ಕರಲ್ಲಿ ಕನಿಷ್ಟ ಒಂದಾದರೂ ಗ್ರಹ ಬಲಾಢ್ಯರಿದ್ದರೆ ಅಷ್ಟರಮಟ್ಟಿಗೆ ಹಣ ಗಳಿಸಬಲ್ಲನು.

9) **ಧನು ಲಗ್ನ** : ಈ ಲಗ್ನಕ್ಕೆ ಗುರು, ಬುಧ, ರವಿ, ಮಂಗಳ ಈ ನಾಲ್ಕು ಗ್ರಹಗಳು ಕ್ರಮಶಃ ಸ್ವಅರ್ಜಿತ ವಿಷಯವಾಗಿ ಯೋಗಕಾರಕ

ಗ್ರಹಗಳು ಈ ನಾಲ್ಕು ಗ್ರಹಗಳು ಬಲಾಢ್ಯರಿದ್ದ ಜಾತಕ ಹಣ ಸಂಪಾದಿಸುವ ಸಾಮರ್ಥ್ಯ ಚೆನ್ನಾಗಿರುತ್ತದೆ. ಈ ನಾಲ್ಕು ಗ್ರಹಗಳು ದುರ್ಬಲ, ನಿರ್ಬಲರಿದ್ದ ಜಾತಕನ ಹಣ ಸಂಪಾದಿಸುವ ಶಕ್ತಿ ಇರುವುದಿಲ್ಲ. ಈ ನಾಲ್ಕರಲ್ಲಿ ಕನಿಷ್ಟ ಒಂದೆರಡು ಗ್ರಹಗಳಾದರೂ ಬಲಾಢ್ಯರಿದ್ದ ಜಾತಕನು ತುಸುಮಟ್ಟಿಗೆ ಹಣ ಗಳಿಸಬಲ್ಲ.

10) **ಮಕರಲಗ್ನ:** ಈ ಲಗ್ನಕ್ಕೆ ಶುಕ್ರ, ಬುಧ, ಮಂಗಳ ಈ ಮೂರು ಗ್ರಹಗಳು ಕ್ರಮಶಃ ಸ್ವಅರ್ಜಿತ, ಪಿತ್ರಾರ್ಜಿತ ಯೋಗಕಾರಕ ಗ್ರಹಗಳು ಈ ಮೂರು ಗ್ರಹಗಳು ಬಲಾಢ್ಯರಿದ್ದ ಜಾತಕನ ಹಣ ಪಡೆಯುವ ಯುಕ್ತಿ ಉತ್ತಮವಿರುತ್ತದೆ. ಈಮೂರು ಗ್ರಹಗಳು ದುರ್ಬಲ, ನಿರ್ಬಲರಿದ್ದ ಜಾತಕನ ಹಣ ಗಳಿಸುವಯುಕ್ತಿ ಗೊತ್ತಿರುವುದಿಲ್ಲ. ಈ ಮೂರರಲ್ಲಿ ಕನಿಷ್ಟ ಒಂದಾದರೂ ಗ್ರಹ ಬಲಾಢ್ಯರಿದ್ದರೆ ತುಸು ಮಟ್ಟಿಗೆ ಹಣ ಗಳಿಸಬಲ್ಲ.

11) **ಕುಂಭಲಗ್ನ** : ಈ ಲಗ್ನಕ್ಕೆ ಶುಕ್ರ, ಶನಿ, ಇಬ್ಬರೇ ಸ್ವಅರ್ಜಿತ ಯೋಗಕಾರರ ಗ್ರಹಗಳು ಈ ಎರಡು ಗ್ರಹಗಳು ಬಲಾಢ್ಯರಿದ್ದ ಜಾತಕನ ಹಣ ಸಂಪಾದಿಸುವ ಕಲೆ ಕರಗತವಾಗಿರುತ್ತದೆ. ಈ ಎರಡು ಗ್ರಹಗಳು ದುರ್ಬಲ ನಿರ್ಬಲ ವಿದ್ದ ಜಾತಕನಿಗೆ ಹಣಗಳಿಸುವ ಕಲೆ ಗೊತ್ತಿರುವುದಿಲ್ಲ. ಈ ಎರಡರಲ್ಲಿ ಕನಿಷ್ಟ ಒಂದಾದರೂ ಗ್ರಹಬಲಾಢ್ಯರಿದ್ದರೆ ಅಷ್ಟರಮಟ್ಟಿಗೆ ಹಣಗಳಿಸಬಲ್ಲನು.

12) **ಮೀನ ಲಗ್ನ:** ಈ ಲಗ್ನಕ್ಕೆ ಗುರು, ಬುಧ, ಚಂದ್ರರು ಕ್ರಮಶಃ ಸ್ವಅರ್ಜಿತ ಯೋಗಕಾರಕ ಗ್ರಹಗಳು ಈ ಮೂರು ಗ್ರಹಗಳು ಬಲಾಢ್ಯರಿದ್ದ ಜಾತಕನು ಹಣ ಗಳಿಸುವ ಸಾಮರ್ಥ್ಯ ಉಳ್ಳವನಿರುತ್ತಾನೆ. ಈ ಮೂರು ಗ್ರಹಗಳು ದುರ್ಬಲ ನಿರ್ಬಲರಿದ್ದ ಜಾತಕನು ಹಣ ಗಳಿಸಲು ಅಸಮರ್ಥನು. ಈ ಮೂರರಲ್ಲಿ ಕನಿಷ್ಟ ಒಂದಾದರೂ ಗ್ರಹ ಬಲಾಢ್ಯನಿದ್ದರೆ ತುಸು ಹಣ ಗಳಿಸಲುಬಲ್ಲನು.

ಬಲಾಢ್ಯ ಗ್ರಹವೆಂದರೆ ರಾಶಿಬಲದವನು ಸ್ಥಾನ ಬಲದವನು ಯೋಗ ಕಾರಕನು ಇರಬೇಕು. ದುರ್ಬಲ, ನಿರ್ಬಲ ಗ್ರಹವೆಂದರೆ ನೀಚ ರಾಶಿಯುವ

ಶತ್ರು ಕ್ಷೇತ್ರೀ ಅಸ್ತಾಂಗತ, ವೃದ್ಧಾಪ್ಯ, ಬಾಲ್ಯಾವಸ್ಥೆ, ಪಾಪಗ್ರಹ ಮಧ್ಯ ಪಾಪಗ್ರಹ ದೃಷ್ಟ, ಶತ್ರು ಗ್ರಹದೃಷ್ಟ, ವಕ್ರೀ ಈ ಅವಸ್ಥೆಯುಳ್ಳವನು.

ಹೀಗೆ ಸ್ವಅರ್ಜಿತ ವಿಷಯವಾಗಿ ಅರ್ಥಾತ ಹಣ ಗಳಿಸುವ ಸಾಮರ್ಥ್ಯದ ವಿಷಯವಾಗಿ ವಿಭಿನ್ನ ಲಗ್ನಗಳಿಗೆ ವಿಭಿನ್ನ ಗ್ರಹಗಳು ಯೋಗಕಾರಕವಿರುತ್ತವೆ.

3) **ಆಕಸ್ಮಿಕ ಧನ ಯೋಗ :** ಆಕಸ್ಮಿಕ ಧನಯೋಗವೆಂದರೆ ಲಾಟರೀಯಿಂದಾಗಲಿ, ರೇಸುಗಳಿಂದಾಗಲೀ ಘೂಗತದಿಂದಾಗಲಿ, ಮಾತ್ರ ಹಣ ಪಡೆಯುವ ಯೋಗವೆಂದು ಅನೇಕರು ಭಾವಿಸಿದ್ದಾರೆ. ಇದು ತಪ್ಪು ಕಲ್ಪನೆ ಲಾಟರಿ, ರೇಸು, ಘೂಗತದಿಂದ ಹಣ ಪಡೆಯುವಿಕೆ ಆಕಸ್ಮಿಕ ಧನಯೋಗವೇನೊ ನಿಜ ಆದರೆ ಈ ಮೂರು ರೀತಿಯಿಂದ ಹೊರತಾಗಿಯೂ ಇನ್ನು ಅನೇಕ ಪ್ರಕಾರಗಳಿಂದ ಆಕಸ್ಮಿಕ ಧನಯೋಗದ ಸಂಗತಿಗಳಿವೆ ಆಕಸ್ಮಿಕ ಧನಯೋಗವೆಂದರೆ ಅನಿರೀಕ್ಷಿತವಾಗಿ ಅಕಲ್ಪಿತವಾಗಿ ಹಣಪಡೆಯುವಿಕೆ· ಸ್ವಸಾಮರ್ಥ್ಯದಿಂದಾಗಲೀ, ಪಿತ್ರಾರ್ಜಿತದಿಂದಾಗಲೀ, ಹಣ ಪಡೆಯದೇ ಅನಿರೀಕ್ಷಿತವಾಗಿ ಕಲ್ಪನಾತೀತವಾಗಿ ಪಡೆಯುವ ಹಣವು. ಇದು ದತ್ತಕ ಬಕ್ಷೀಸ ಬಹುಮಾನ, ವಾರಸಾ, ಸ್ತ್ರೀಧನ, ಕಾಣಿಕೆ ಮೃತ್ಯುಪತ್ರ ಸಟ್ಟಾ, ಜುಜು, ಪಂದ್ಯ, ಲಂಚ, ಕಾಳಾಬಜಾರ (ತೇಜೀ–ಮಂದಿ) ಇವೆ. ಮೊದಲಾದವುಗಳಿಂದಾಗಲೀ ಸರಕಾರ ಹಾಗೂ ಸಂಘ ಸಂಸ್ಥೆಗಳಿಂದಾಗಲೀ ಬರುವ ಗೌರವಧನ ಹೀಗೆ ಈ ಆಕಸ್ಮಿಕ ಧನಯೋಗದ ವ್ಯಾಪ್ತಿ ಬಹಳ ಇದೆ. ಆದರೆ ಒಂದು ಸಂಗತಿ ನಿಜ ಈ ಶುಭಯೋಗ ಎಲ್ಲಾ ಜಾತಕರಲ್ಲಿ ಇರುವುದಿಲ್ಲ ಎಲ್ಲರಿಗೂ ಲಭಿಸುವುದಿಲ್ಲ.

ಪ್ರತಿ ತಿಂಗಳು ಒಂದೊಂದು ಸಾವಿರ ರೂಪಾಯಿ ಬೆಲೆಗಳ ಲಾಟರೀ ಟಿಕೇಟಕೊಳ್ಳುವ ಜನರನ್ನು ನೋಡಿದ ಅನುಭವವಿದೆ. ನಾನು ಅವರಿಗೆ ಹೇಳಿದೆ ಲಾಟರಿ ಹತ್ತುವದಿದ್ದರೆ, ಒಂದೇ ಟಿಕೇಟಕ್ಕೆ ಹತ್ತುತ್ತದೆ ವಿನಃ ಎಲ್ಲ ಸಾವಿರ ಟಿಕೇಟಗಳಿಗೆ ಅಲ್ಲ ಅಂದರೂ ಅವರೂ ಕೇಳುವುದಿಲ್ಲ ಪ್ರತಿ ತಿಂಗಳು ಸಾವಿರಾರು ರೂಪಾಯಿಗಳ ಲಾಟರೀ ಟಿಕೇಟು ಕೊಳ್ಳುತ್ತಿದ್ದಾರೆ ಆದುದರಿಂದ ಆಕಸ್ಮಿಕ ಧನಯೋಗ ಪಡೆಯುವ ಜಾತಕ ಹೇಗಿರುತ್ತದೆ ಕಾರಕ ಗ್ರಹಸ್ಥಾನಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

ಆಕಸ್ಮಿಕ ಧನಯೋಗದ ವಿಷಯವಾಗಿ ಈಗಾಗಲೇ ನಾವು ಬರೆದು ಪ್ರಕಟಿಸಿದ **"ಆಕಸ್ಮಿಕ ಧನಯೋಗ"** ಎಂಬ ನಮ್ಮ ಗ್ರಂಥದಲ್ಲಿ ವಿವರ ವಿವರವಾಗಿ ವಿಶ್ಲೇಷಿಸಲಾಗಿದೆ. ಆ ಗ್ರಂಥವನ್ನು ಅಧ್ಯಯನ ಮಾಡಿದಾಗ ಆಕಸ್ಮಿಕ ಧನಯೋಗದ ಜಾತಕ ಹೇಗಿರುತ್ತದೆಂಬುದರ ಸಂಪೂರ್ಣ ಕಲ್ಪನೆ ಬರುತ್ತದೆ. ಪ್ರಸ್ತುತ ಈ ಅಧ್ಯಾಯಕ್ಕೆ ಸಂಬಂಧಿಸಿದ ವಿಷಯದ ಸ್ಥೂಲ ರೂಪರೇಷೆಗಳನ್ನು ಮಾತ್ರ ಇಲ್ಲಿ ವಿವರಿಸಲಾಗಿದೆ.

ಯಾರೊಬ್ಬ ಜಾತಕನಿಗೆ ಆಕಸ್ಮಿಕ ಧನಯೋಗವಿದೆಯೋ ಇಲ್ಲವೋ ಎಂಬುದನ್ನು ತಿಳಿಯಲು ನಾವು ಸ್ಥೂಲವಾಗಿ ಎರಡು ಸಂಗತಿಗಳನ್ನು ಪರಿಶೀಲಿಸಬೇಕಾಗುತ್ತದೆ. 1] ಆಕಸ್ಮಿಕ ಧನಯೋಗದ ಕಾರಕಸ್ಥಾನ 2] ಆಕಸ್ಮಿಕ ಧನಯೋಗದ ಕಾರಕ ಗ್ರಹ ಈ ಎರಡು ಸಂಗತಿಗಳಿಂದ ಯಾರೊಬ್ಬರ ಆಕಸ್ಮಿಕ ಧನಯೋಗದ ಬಗೆಗೆ ತಿಳಿಯುತ್ತದೆ. ಅಲ್ಲದೇ ಸ್ಥಾನ ದಲ್ಲಿರುವ ಗ್ರಹಗಳ ಬಲಾಬಲದ ಸಂಗಡ ಸ್ಥಾನಾಧೀಶನ ಬಲಾಬಲವನು ಪರಿ ಶೀಲಿಸುವುದು ಮಹತ್ವದ ಸಂಗತಿ.

3) ಆಕಸ್ಮಿಕ ಧನಯೋಗದ ಕಾರಕ ಸ್ಥಾನಗಳು :— ಆಕಸ್ಮಿಕ ಧನಯೋಗದ ಕಾರಕ ಸ್ಥಾನವೆಂದರೆ ಅಷ್ಟಮ ಸ್ಥಾನವು. ತದನಂತರ ಪಂಚಮ ಸ್ಥಾನವನ್ನು ಪರಿಶೀಲಿಸಬೇಕಾಗುತ್ತದೆ. ಅನೇಕ ಜೋತಿಷಿಗಳು ಅಷ್ಟಮ ಸ್ಥಾನವನ್ನು ಪೂರ್ಣವಾಗಿ ಪರಿಶೀಲಿಸುವುದಿಲ್ಲ ಎನ್ನುವುದಕ್ಕಿಂತ ನಿರ್ಲಕ್ಷಿಸು ವರು ಎಂದರೆ ತಪ್ಪಾಗಲಿಕ್ಕಿಲ್ಲ. ಮಗು ಜನಿಸಿದಾಗ ಜನನದ ನಕ್ಷತ್ರದ ದೋಷ ಗಳನ್ನು ನೋಡುವಾಗ ಜನಿಸಿದ ಮಗುವಿಗೆಬಾಲಾರಿಷ್ಟ ಯೋಗಗಳಂಥ ಅಶುಭ ಯೋಗಗಳಿವೆಯೋ ಹೇಗೆ ಎಂಬುದನ್ನು ತಿಳಿಯಲು ಆಗ ಮಾತ್ರ ಅಷ್ಟಮ ಸ್ಥಾನವನ್ನು ಪರಿಶೀಲಿಸುತ್ತಾರೆ ಮತ್ತು ಕೆಲಜೋತಿಷಿಗಳು ರೋಗದ ವಿಷಯ ವಾಗಿ ಅದರಲ್ಲಿಯೂ ಅಪರಿಹಾರ ರೋಗದ ವಿಷಯವಾಗಿ (ಇನ್‌ಕ್ಯುರೇಬಲ್ಲ) ಆ ಜಾತಕನ ಆಯುಷ್ಯವನ್ನು (ಆಯುರ್ಮಾ) ಅರಿಯಲು ಇಲ್ಲವೇ ಯಾರೊಬ್ಬ ಜಾತಕನ ಮೃತ್ಯುಪತ್ರ (ಉಯಿಲು) ಬರೆಯುವ ಸಂಧರ್ಬದಲ್ಲಿ ಅಷ್ಟಮ

ಸ್ಥಾನವನ್ನು ಪರಿಶೀಲಿಸುತ್ತಾರೆ. ಇನ್ನು ಕೆಲವರು ವಾಹನಕೊಳ್ಳಲು ಇಲ್ಲವೇ ಚಲಾಯಿಸಲು ಹೇಗೆ ಎಂಬ ಪ್ರಶ್ನೆ ಬಂದಾಗ ಆ ಜಾತಕನಿಗೆ ಅಪಘಾತದ ಭಯವಿದೆಯೋ ಹೇಗೆ ಎಂಬುದನ್ನು ತಿಳಿದುಕೊಳ್ಳಲು ಮಾತ್ರ ಆ ಜಾತಕನ ಅಷ್ಟಮ ಸ್ಥಾನ ಪರಿಶೀಲಿಸುತ್ತಾರೆ. ಇದು ಅತ್ಯುನ್ನತವೋ ಅನಿವಾರ್ಯವೋ ಹೌದು ಏಕೆಂದರೆ ಇತ್ತೀಚೆಗೆ ವಾಹನ ಬಳಸುವವರ ಸಂಖ್ಯೆ ಹೆಚ್ಚಾಗಿರುವಂತೆ ಅಪಘಾತದ ಸಂಖ್ಯೆಯೂ ಹೆಚ್ಚಾಗಿದೆ. ಈ ಎರಡು ಸಂಧರ್ಭದಲ್ಲಿ ಮಾತ್ರ ಅಷ್ಟಮ ಸ್ಥಾನವನ್ನು ಪರಿಶೀಲಿಸುತ್ತಾರೆ ವಿನಃ ಸಾಮಾನ್ಯಸ್ಥಿತಿಯಲ್ಲಿ ಅಷ್ಟಮ ಸ್ಥಾನವನ್ನು ಪರಿಶೀಲಿಸುವುದಿಲ್ಲ. ಆದರೆ ಇತ್ತೀಚೆಗೆ ಲಾಟರೀ ಟಿಕೇಟು ಮಾರುವವರ ಹಾಗೂ ಕೊಳ್ಳುವವರಸಂಖ್ಯೆ ಹೆಚ್ಚಾಗಿರುವುದರಿಂದ ಲಾಟರೀ ಯಿಂದ ಆಕಸ್ಮಿಕ ಧನಯೋಗವಿದೆಯೋ ಹೇಗೆ ಎಂಬುದನ್ನು ಪರಿಶೀಲಿಸುವಾಗ ಅಷ್ಟಮಸ್ಥಾನವನ್ನು ಪರಿಶೀಲಿಸುತ್ತಾರೆ. ಆಕಸ್ಮಿಕ ಧನಯೋಗವೆಂದರೆ ಲಾಟರೀಯಿಂದ ಮಾತ್ರ ಎಂದು ಅನೇಕರ ಭಾವನೆ. ಲಾಟರೀ ಹೊರತಾಗಿ ಆಕಸ್ಮಿಕ ಧನಯೋಗ ಅನೇಕ ಸಂಗತಿಗಳಿವೆ ಎಂಬುದನ್ನು ಹಿಂದಿನ ಪುಟದಲ್ಲಿ ವಿವರಿಸಲಾಗಿದೆ.

ಯಾರೊಬ್ಬ ಜಾತಕನಿಗೆ ಆಕಸ್ಮಿಕ ಧನಯೋಗವಿದೆಯೋ ಹೇಗೆ ಎಂಬುದನ್ನು ಪರಿಶೀಲಿಸಲು ಜಾತಕದಲ್ಲಿಯ ಅಷ್ಟಮಸ್ಥಾನದಲ್ಲಿರುವ ಗ್ರಹಗಳ ಬಲಾಬಲ ಹಾಗೂ ಅಷ್ಟಮ ಮೇಲಿನ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಅಷ್ಟಮ ಸ್ಥಾನದಲ್ಲಿ ಬಲಾಢ್ಯ ಗ್ರಹ ಹಾಗೂ ಬಲಾಢ್ಯ ಅಷ್ಟಮೇಶ ನಿರದೇ ಯಾವ ಜಾತಕನಿಗೂ ಆಕಸ್ಮಿಕ ಧನಯೋಗ ಪ್ರಾಪ್ತಿಯಾಗುವುದಿಲ್ಲ. ಆದರೆ ಒಂದು ಸಂಗತಿ ಅಷ್ಟಮಸ್ಥಾನದಲ್ಲಿರುವ ಗ್ರಹ (ಗ್ರಹಗಳು) ಮತ್ತು ಅಷ್ಟಮೇಶನಾಗಿ ಗುಣಧರ್ಮದಂತೆ ಆಕಸ್ಮಿಕ ಧನಯೋಗ ಪ್ರಾಪ್ತಿಯಾಗುತ್ತದೆ. ಉದಾಹರಣೆ ಗುರುವು ಬಲಾಢ್ಯನಾಗಿ ಅಷ್ಟಮದಲ್ಲಿದ್ದರೆ ಅಥವಾ ಅಷ್ಟಮ ಮೇಲೆ ಬಲಾಢ್ಯನಿದ್ದರೆ ವಾರಸಾ., ಉಯಿಲು ಮಠಾಧೀಶರಿಂದ ಶಿಷ್ಯರಾದ ಶಿಷ್ಯಪಾಠ ಪ್ರವಚನ ಮೇಲಿನ ಗ್ರಂಥಗಳಿಂದ ಆಕಸ್ಮಿಕ ಧನಯೋಗ ಪ್ರಾಪ್ತಿ ಆಗುತ್ತದೆ. ಇದರಂತೆ ಮಂಗಳ ರಾಹುಗಳು ಬಲಾಢ್ಯರಾಗಿ ಅಷ್ಟಮದಲ್ಲಿದ್ದರೆ ಅಥವಾ ಬಲಾಢ್ಯ ಅಷ್ಟಮೇಶರಾಗಿದ್ದರೆ ಲಾಟರಿ ಸಟ್ಟಾ ಕಮೀಶನ್

ಮೊದಲಾದವುಗಳಿಂದ ಆಕಸ್ಮಿಕ ಧನ ಪ್ರಾಪ್ತಿಆಗುತ್ತದೆ. ಚಂದ್ರ-ಶುಕ್ರರರ ಬಲಾಢ್ಯರಾಗಿ ಅಷ್ಟಮದಲ್ಲಿದ್ದರೆ ಅಥವಾ ಅಷ್ಟಮೇಶರಾಗಿ ಬಲಾಢ್ಯರಿದ್ದರೆ ಸ್ತ್ರೀಯರಿಂದ ಆಕಸ್ಮಿಕ ಧನಪ್ರಾಪ್ತಿ ಆಗುತ್ತದೆ ಹೀಗೆ ವಿಭಿನ್ನ ಗ್ರಹಗಳ ಗುಣ ಧರ್ಮದಂತೆ ವಿಭಿನ್ನ ಸ್ಥಾನಗಳ ಗುಣಧರ್ಮದಂತೆ ವಿಭಿನ್ನ ಪ್ರಕಾರದ ಆಕಸ್ಮಿಕ ಧನಪ್ರಾಪ್ತಿಯಾಗುತ್ತದೆ.

ಆಕಸ್ಮಿಕ ಧನಯೋಗದ ವಿಷಯವಾಗಿ ಅಷ್ಟಮ ಸ್ಥಾನದ ನಂತರ ಪಂಚಮ ಸ್ಥಾನವನ್ನು ಅಂದರೆ ಪಂಚಮಸ್ಥಾನದಲ್ಲಿರುವ ಗ್ರಹ ಹಾಗೂ ಪಂಚಮೇಶನ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ಕುಟುಂಬ ಸ್ಥಾನದ ಧನ ಸ್ಥಾನವು ಅಷ್ಟಮವಿರುವುದೋ ಹಾಗೆ ಸುಖ ಸ್ಥಾನದ ಧನ ಸ್ಥಾನವು ಪಂಚಮವು ಇರುತ್ತದೆ ಇದು ಅಲ್ಲದೇ ಪಂಚಮ ಸ್ಥಾನವಿದು ಮನುಷ್ಯನ ಭಾವನಾಕಾರಕ ಸ್ಥಾನವು ಇಂದು ಮನಸ್ಸಿಗೆ ಬಂಡು ತಿಕೀಟು ಕೊಂಡವು. ರೇಸು ಆಡಿದವು. ಆದುದರಿಂದ ಪಂಚಮ ಸ್ಥಾನದಲ್ಲಿರುವ ಗ್ರಹ ಗಳ ಬಲಾಬಲ ಹಾಗೂ ಪಂಚಮೇಶನ ಬಲಾಬಲವನ್ನು ಪರಿಶೀಲಿಸಬೇಕು. ಹಿಂದೆ ಹೇಳಿದಂತೆ ಪಂಚಮ ಸ್ಥಾನದಲ್ಲಿರುವ ಗ್ರಹ ಹಾಗೂ ಪಂಚಮೇಶನ ಗುಣಧರ್ಮದಂತೆ ಆಕಸ್ಮಿಕ ಧನಯೋಗ ಪ್ರಾಪ್ತಿಯಾಗುತ್ತದೆ.

2) **ಆಕಸ್ಮಿಕ ಧನಯೋಗದ ಕಾರಕಗ್ರಹಗಳು** .— ಆಕಸ್ಮಿಕ ಧನಯೋಗದ ಕಾರಕ ಗ್ರಹ ಯಾವುದು ಎಂಬುದನ್ನು ನಿರ್ಧರಿಸುವುದು ಕಠಿಣವು. ಏಕೆಂದರೆ ಇಲ್ಲಿ ಕಾರಕ ಗ್ರಹಕ್ಕಿಂತ ಭಾವೇಶನ ಪ್ರಭಾವೇ ಮಹತ್ವ ವಿರುತ್ತದೆ. ಆದುದರಿಂದ ಅಷ್ಟಮೇಶ ಪಂಚಮೇಶರ ಆಕಸ್ಮಿಕ ಧನಯೋಗದ ಕಾರಕ ಗ್ರಹಗಳು ಅದರಲ್ಲಿಯೂ ಅಷ್ಟಮೇಶನೇ ಹೆಚ್ಚು ಕಾರಕ ಗ್ರಹವು ಈ ಅಷ್ಟಮೇಶ, ಪಂಚಮೇಶರು ವಿಭಿನ್ನ ಲಗ್ನಗಳಿಗೆ ವಿಭಿನ್ನರಿದ್ದು ಅವುಗಳನ್ನು ಈ ಕೆಳಗಿನಂತೆ ಬರೆಯಲಾಗಿದ.

1) **ಮೇಷ ಲಗ್ನ** :— ಈಲಗ್ನಕ್ಕೆ ಕುಜ, ರವಿಯರೇ ಕ್ರಮಶಃ ಆಕಸ್ಮಿಕ ಧನಯೋಗಕಾರಕ ಗ್ರಹಗಳು

2) **ವೃಷಭ ಲಗ್ನ** :— ಈ ಲಗ್ನಕ್ಕೆ ಗುರು, ಬುಧರೇ ಕ್ರಮಶಃ ಆಕಸ್ಮಿಕ ಧನಯೋಗದ ಕಾರಕಗ್ರಹಗಳು.

3) **ಮಿಥುನ ಲಗ್ನ** :— ಈ ಲಗ್ನಕ್ಕೆ ಶನಿ ಶುಕ್ರರೇ ಕ್ರಮಶಃ ಆಕಸ್ಮಿಕ ಧನಯೋಗದ ಕಾರಕ ಗ್ರಹಗಳು.

4) **ಕರ್ಕ ಲಗ್ನ** :— ಈ ಲಗ್ನಕ್ಕೆ ಶನಿ, ಮಂಗಳರೇ ಕ್ರಮಶಃ ಆಕಸ್ಮಿಕ ಧನಯೋಗದ ಕಾರಕ ಗ್ರಹಗಳು.

5) **ಸಿಂಹ ಲಗ್ನ** :— ಈ ಲಗ್ನಕ್ಕೆ ಗುರು ಒಬ್ಬನೇ ಆಕಸ್ಮಿಕ ಧನ ಯೋಗಕಾರಕ ಗ್ರಹವು.

6) **ಕನ್ಯ ಲಗ್ನ** :— ಈ ಲಗ್ನಕ್ಕೆ ಕುಜ, ಶನಿಯರು ಕ್ರಮಶಃ ಆಕಸ್ಮಿಕ ಧನಯೋಗಕಾರಕ ಗ್ರಹಗಳು

7) **ತುಲಾ ಲಗ್ನ** :— ಈ ಲಗ್ನಕ್ಕೆ ಶುಕ್ರ, ಶನಿಯರು ಕ್ರಮಶ: ಆಕಸ್ಮಿಕ ಧನಯೋಗಕಾರಕ ಗ್ರಹಗಳು

8) **ವೃಶ್ಚಿಕ ಲಗ್ನ** :— ಈ ಲಗ್ನಕ್ಕೆ ಬುಧ ಗುರುಗಳು ಕ್ರಮಶ: ಯೋಗಕಾರಕ ಗ್ರಹಗಳು

9) **ಧನು ಲಗ್ನ** :— ಈ ಲಗ್ನಕ್ಕೆ ಚಂದ್ರ ಕುಜರು ಕ್ರಮಶ: ಆಕಸ್ಮಿಕ ಧನಯೋಗಕಾರಕ ಗ್ರಹಗಳು

10) **ಮಕರ ಲಗ್ನ** :— ಈ ಲಗ್ನಕ್ಕೆ ರವಿ ಶುಕ್ರರು ಕ್ರಮಶಃ ಆಕಸ್ಮಿಕ ಧನಯೋಗಕಾರಕ ಗ್ರಹಗಳು

11) **ಕುಂಭ ಲಗ್ನ** :— ಈ ಲಗ್ನಕ್ಕೆ ಬುಧನೊಬ್ಬನೆ ಆಕಸ್ಮಿಕ ಧನಯೋಗಕಾರಕ ಗ್ರಹವು

12 **ಮೀನ ಲಗ್ನ** :— ಈ ಲಗ್ನಕ್ಕೆ ಶುಕ್ರ ಚಂದ್ರರು ಕ್ರಮಶಃ ಆಕಸ್ಮಿಕ ಧನಯೋಗಕಾರಕ ಗ್ರಹಗಳು ಹೀಗೆ ವಿಭಿನ್ನ ಲಗ್ನಗಳಿಗೆ ವಿಭಿನ್ನ ಗ್ರಹಗಳು ಆಕಸ್ಮಿಕ ಧನಯೋಗಕಾರಕ ಗ್ರಹಗಳಿದ್ದು ಈ ಆಕಸ್ಮಿಕ ಧನ ಯೋಗಕಾರಕ ಗ್ರಹಗಳು ಬಲಾಢ್ಯರಿದ್ದ ಜಾತಕನ ಹಿಂದೆ ವಿವರಿಸಿದಂತೆ ಯಾವುದೇ ಪ್ರಕಾರದ ಆಕಸ್ಮಿಕ ಧನಯೋಗ ಪ್ರಾಪ್ತಿಯಾಗುತ್ತದೆ.

**3) ಶುಭಾ ಅಶುಭ ಯೋಗಗಳು :—** ಯಾರೊಬ್ಬರ ಹಣಕಾಸಿನ ವಿಷಯವಾಗಿ ತಿಳಿದುಕೊಳ್ಳಲು ಅವರ ಜಾತಕದಲ್ಲಿಯ ಶುಭ-ಅಶುಭ ಯೋಗಗಳು ವಿಶಿಷ್ಟ ಪಾತ್ರವನ್ನು ವಹಿಸುತ್ತವೆ. ಈ ಶುಭ–ಅಶುಭ ಯೋಗಗಳ ಪರಿಣಾಮವು ಬಹಳ ಮುಖ್ಯವಿರುತ್ತವೆ. ಯೋಗಗಳಲ್ಲಿ ಅನೇಕ ಪ್ರಕಾರಗಳಿವೆ. ಆ ಎಲ್ಲ ಯೋಗಗಳ ವಿವರಣೆ ಕೊಡಲು ನೂರಾರು ಪುಟಗಳಷ್ಟು ವಿವರಿಸುವಷ್ಟು ವಿಷಯದ ವ್ಯಾಪ್ತಿ ಇದೆ. ಅದಕ್ಕಾಗಿಯೇ ನಾವು ಬರೆದು ಪ್ರಕಟಿಸಬೇಕೆಂದಿರುವ "ಗ್ರಹಯೋಗ" ಎಂಬ ಗ್ರಂಥದಲ್ಲಿ ವಿವರ ವಿವರವಾಗಿ ವಿವರಿಸಲಾಗುವುದು ಪ್ರಸ್ತುತಃ ಈ ಗ್ರಂಥದ ಈ ಅಧ್ಯಾಯದ ಚೌಕಟ್ಟಿನಲ್ಲಿ ವಿವರಿಸಲಾಗಿದೆ

ಜಾತಕಗಳಲ್ಲಿ ನೋಡಲಾಗಿರುವ ಅನೇಕ ಯೋಗಗಳಲ್ಲಿ ದ್ರವ್ಯ ಯೋಗವು ಮಹತ್ವದ ಪಾತ್ರವಹಿಸುತ್ತದೆ. ಈ ದ್ರವ್ಯಯೋಗಕ್ಕೆ ವಯಸ್ಸು, ಶಿಕ್ಷಣ, ಜಾತಿ, ಧರ್ಮ, ಪ್ರಭಾವ, ವಶೀಲಿ ಇವು ಯಾವುದೂ ಮಹತ್ವದಲ್ಲಿ ಅದು ಹೇಗೆ ಬರುತ್ತದೆಂಬುದನ್ನು ಹೇಳಲು ಬಾರದು ಅಂತೆಯೇ ತಿಪ್ಪೆ ಹೋಗಿ ಉಪ್ಪರಿಗಿದೆ ಎಂದು ಹೇಳಲಾಗಿದೆ. ಇಂದು ಭಿಕಾರಿಯಾಗಿ ಬೀದಿಯಲ್ಲಿ ಅಲೆದಾಡುತ್ತಿರುವ ನಾಳೆ ಕಾರಿನಲ್ಲಿ ಮೆರೆದಾಡುವನು ಇದಕ್ಕೆಲ್ಲ ಅವರವರ ಜಾತಕದಲ್ಲಿರುವ ಶುಭಾ–ಅಶುಭ ಯೋಗಗಳೇ ಕಾರಣವು. ಆದುದರಿಂದ ಯಾವ ಪ್ರಕಾರದ ಫಲಗಳನ್ನು ಕೊಡುತ್ತವೆ ಎಂಬುದರ ಕೆಲ ಯೋಗಗಳ ವಿವರಣೆಯನ್ನು ಮಾತ್ರ ಕೊಡಲಾಗಿದೆ. ಮೇಲೆ ಹೇಳಿದಂತೆ ಯೋಗಗಳಲ್ಲಿ ಅನೇಕ ಪ್ರಕಾರಗಳಿವೆ. ನಾಲ್ಕು ದಶಕಗಳ ವೃತ್ತಿಯಲ್ಲಿ ಬಂದ ಕೆಲ ಶುಭಾ–ಅಶುಭ ಯೋಗಗಳ ಫಲಗಳನ್ನು ಈ ಕೆಳಗಿನಂತೆ ಬರೆಯಲಾಗಿದೆ

1) ಅನುದಿತ ಗೋಲಾರ್ಧದಲ್ಲಿ ಹೆಚ್ಚು ಗ್ರಹವಿದ್ದ ಜಾತಕನಿಗೆ ಆಯುಷ್ಯದ ಪೂರ್ವದಲ್ಲಿ ಬಡತನವನ್ನು ಉತ್ತರಾರ್ಧದಲ್ಲಿ ಶ್ರೀಮಂತಿಕೆಯನ್ನು ಅನುಭವಿಸುತ್ತಾನೆ. ಇದರ ವಿರುದ್ಧ ಉದಿತ ಗೋಲಾರ್ಧದಲ್ಲಿ ಹೆಚ್ಚು ಗ್ರಹಗಳಿದ್ದರೆ ಪೂರ್ವಾರ್ಧವು ಶ್ರೀಮಂತಿಕೆ ಇದ್ದು, ಉತ್ತರಾರ್ಧವು ಬಡತನದಲ್ಲಿ ಕಳೆಯಬೇಕಾಗುತ್ತದೆ. ಅಥವಾ ಉದಿತ ಗೋಲಾರ್ಧದಲ್ಲಿ

ಅನೇಕ ಗ್ರಹಗಳು ಬಲಿಷ್ಟವಾಗಿದ್ದರೆ ಚಿಕ್ಕ ವಯಸ್ಸಿನಲ್ಲಿಯೇ ಉದ್ಯೋಗದಲ್ಲಿ ಸ್ಥಿರತೆ ಬರುತ್ತದೆ. ಇದರಂತೆ ಅನುದಿತ ಗೋಲಾರ್ಧದಲ್ಲಿ ಅನೇಕ ಗ್ರಹಗಳು ಬಲಿಷ್ಟವಾಗಿದ್ದರೆ ಆಯುಷ್ಯದ ಉತ್ತರಾರ್ಧದಲ್ಲಿ ಶ್ರೀಮಂತಿಕೆ ಬರುತ್ತದೆ.

ಜಾತಕದ ಎರಡನೇ ಸ್ಥಾನದಿಂದ ಆರನೇ ಸ್ಥಾನದವರೆಗಿನ ಸ್ಥಾನಗಳು ಅನುದಿತ ಗೋಲಾರ್ಧದಲ್ಲಿಯೂ ಜಾತಕದ ಎಂಟನೇ ಸ್ಥಾನದಿಂದ 12ನೇ ಸ್ಥಾನದವರೆಗಿನ ಸ್ಥಾನಗಳಿಗೆ ಉದಿತ ಗೋಲಾರ್ಧವೆನ್ನುತ್ತಾರೆ.

2) ಶನಿ ದೃಷ್ಟಿತ ಚಂದ್ರನು ಜಾತಕದ 6, 8, 12 ಈ ಯಾವುದಾದರೊಂದು ಸ್ಥಾನಗಳಲ್ಲಿದ್ದ ಜಾತಕನಿಗೆ ಕಳವು, ತುಡುಗುಗಳಿಂದಲೂ, ಬೇರೆಯವರಿಗೆ ಜಾಮೀನು ಆಗಿ ಹಣ ಕಳೆದುಕೊಳ್ಳಬಹುದಾಗಿದೆ.

3) ಶನಿ ದೃಷ್ಟಿತ ರವಿ, 4–6–8–12 ಈ ಯಾವುದೊಂದು ಸ್ಥಾನದಲ್ಲಿದ್ದ ಜಾತಕನಿಗೆ ಸರಕಾರಿ ಅಧಿಕಾರಿಗಳಿಂದ ರಾಜಕೀಯ ವ್ಯಕ್ತಿಗಳಿಂದಲೂ ಆರ್ಥಿಕ ಹಾಸ್ಯಗೊಳಗಾಗಬಹುದಾಗಿದೆ ಅಂದರೆ ವರಮಾನ ತೆರಿಗೆ ಮಾರಾಟ ತೆರಿಗೆ, ಸಿ.ಐ.ಆಯ್., ಸಿ.ಓ.ಡಿ., ಲೋಕಾಯುಕ್ತ, ಪೋಲಿಸ ಸುಂಕ ಅಬಕಾರಿ ಖಾತೆಯ ಇವೇ ಮೊದಲಾದ ವರಿಷ್ಟ ಅಧಿಕಾರಿಗಳ ದಾಳಿಗೆ ತುತ್ತಾಗಿ ಹಣ ಕಳೆದುಕೊಳ್ಳುತ್ತಾರೆ ಅಷ್ಟೇ ಅಲ್ಲ ಅವಮಾನಗೊಳ್ಳುತ್ತಾರೆ. ಕೆಲ ಸಂದರ್ಭದಲ್ಲಿ ನೌಕರಿಸಹ ಕಳೆದುಕೊಳ್ಳುತ್ತಾರೆ ಅಥವಾ ಅಮಾನತ್ತಿನಲ್ಲಿಡುತ್ತಾರೆ. ಇದರಂತೆ ಶನಿ ದೃಷ್ಟಿತ ನಿರ್ಬಲ ರವಿ, ಚಂದ್ರ, ಮಂಗಳನಿದ್ದ ಜಾತಕನಿಗೆ ರಾಜಕಾರಣಿಗಳ ಕಿರುಕಳವನ್ನು ಎದುರಿಸಬೇಕಾಗುತ್ತದೆ.

3) ಷಷ್ಠೇಶ ನಿರ್ಬಲನಿದ್ದು ಶನಿ ದೃಷ್ಟಿತ ಚಂದ್ರನು 4–6–8–12 ಸ್ಥಾನಗಳಿದ್ದ ಜಾತಕನಿಗೆ ಶತ್ರುಪೀಡೆ, ಮಾಟ, ಮದ್ದುಗಳ ಕಾಟದ ಸಂಗಡ ಕಳವು ತುಡುಗುಗಳಿಂದ ಆರ್ಥಿಕ ಹಾನಿ ಆಗುತ್ತದೆ.

4) ಷಷ್ಠೇಶ ದುರ್ಬಲನಿದ್ದು ಶನಿ ದೃಷ್ಟಿತ ಕುಜನು 1–4–8–12 ಸ್ಥಾನಗಳಲ್ಲಿದ್ದಾರೆ ಶತ್ರುಪೀಡೆ ಮಾಟ, ಮದ್ದುಗಳ ಕಾಟದ ಸಂಗಡ ಹೊಡೆದಾಟ ಹಾಗೂ ದರೋಡೆಯಿಂದ ಆರ್ಥಿಕ ಹಾನಿ ಆಗಬಹುದಾಗಿದೆ

5) ಕರ್ಕರಾಶಿಯ ಗುರು-ಚಂದ್ರರಯುತಿಯೋಗ ನವಮಸ್ಥಾನದಲ್ಲಿ ಇಲ್ಲವೆ ಮೀನರಾಶಿಯ ಗುರು-ಚಂದ್ರರ ಯುತಿಯೋಗ ಪಂಚಮದಲ್ಲಿದ್ದ ಜಾತಕನಿಗೆ ಹಣದ ಕೊರತೆ ಯಾವಾಗಲೂ ಬರುವುದಿಲ್ಲ.

6) ಸೂರ್ಯ ಹಾಗೂ ದಶಮೇಶ ಬಲಾಢ್ಯನಿದ್ದ ವ್ಯಕ್ತಿಗೆ ತಂದೆಯಿಂದ ಆರ್ಥಿಕ ಅನುಕೂಲವಾಗುತ್ತದೆ. ತಂದೆಯ ಸಹಾಯ ಎಲ್ಲ ದೃಷ್ಟಿಯಿಂದಲೂ ಸಿಗುತ್ತದೆ.

7) ಸೂರ್ಯ ಹಾಗೂ ನಿರ್ಬಲ, ದುರ್ಬಲ ದಶಮರಿದ್ದ ಜಾತಕನಿಗೆ ತಂದೆಯಿಂದ ಆರ್ಥಿಕ ಅನುಕೂಲವಾಗುವುದಿಲ್ಲ.

8) ಚಂದ್ರ ಹಾಗೂ ಚತುರ್ಥೇಶ ನಿರ್ಬಲ, ದುರ್ಬಲನಿದ್ದ ಜಾತಕನಿಗೆ ತಾಯಿಯಿಂದ ಆರ್ಥಿಕ ಸಹಾಯ ಸಿಗುವುದಿಲ್ಲ.

9) ರವಿ. ಗುರು. ಹಾಗೂ ಪಂಚಮೇಶ ಬಲಾಢ್ಯರಿದ್ದ ಜಾತಕನಿಗೆ ಸರಕಾರದಿಂದ ಸಂಘಸಂಸ್ಥೆಗಳಿಂದಲೂ ದ್ರವ್ಯಾನುಕೂಲತೆಯಾಗುತ್ತದೆ.

10) ದ್ವಿತೀಯೇಶ, ದಶಮೇಶ, ಚತುರ್ಥೇಶ ಹಾಗೂ ರವಿ, ಚಂದ್ರ, ಗುರು, ಈ ಆರು ಸಂಗತಿಗಳಲ್ಲಿ ಯಾವುದೇ ನಾಲ್ಕು ಸಂಗತಿಗಳು ಪೂರಕವಿದ್ದ ಜಾತಕನಿಗೆ ವಾರಸಾ, ಮೃತ್ಯುಪತ್ರ, ಪಿತ್ರಾರ್ಜಿತ ಸೌಖ್ಯ ಸಿಗುತ್ತದೆ.

11) ಪಂಚಮೇಶ, ಅಷ್ಟಮೇಶ ಹಾಗೂ ಕುಜ, ರಾಹು, ಶುಕ್ರ ಈ ಐದು ಸಂಗತಿಗಳಲ್ಲಿ ಯಾವುದೇ ಮೂರು ಸಂಗತಿಗಳು ಪೂರಕವಿದ್ದ ಜಾತಕನಿಗೆ ಲಾಟರಿ, ಬಕ್ಷೀಸ, ಬಹುಮಾನ ಮೊದಲಾದ ಆಕಸ್ಮಿಕ ಧನಯೋಗ ಪ್ರಾಪ್ತಿಯಾಗುತ್ತದೆ.

12) ಲಾಭ ಸ್ಥಾನದಲ್ಲಿ ಬಲಾಢ್ಯ ಗ್ರಹ ಹಾಗೂ ಬಲಾಢ್ಯ ಲಾಭೇಶನಿದ್ದು. ಪಂಚಮೇಶ, ಅಷ್ಟಮೇಶರು ಬಲಾಢ್ಯರಿರುವ ಜಾತಕನಿಗೆ ಮಿತ್ರವರ್ಗದವರಿಂದ ದ್ರವ್ಯಾನುಕೂಲತೆಯಾಗುತ್ತದೆ.

13) ದ್ವಿತೀಯ. ಚತುರ್ಥ, ದಶಮ ಈ ಸ್ಥಾನಗಳಲ್ಲಿ ಬಲಾಢ್ಯ ಗ್ರಹವಿದ್ದು ದ್ವಿತೀಯೇಶ, ಚತುರ್ಥೇಶ, ದಶಮೇಶ ಹಾಗೂ ರವಿ, ಚಂದ್ರರು ಬಲಾಢ್ಯರಿರುವ ಜಾತಕನಿಗೆ ಪಿತ್ರಾರ್ಜಿತ ಸೌಖ್ಯ ಸಿಗುತ್ತದೆ.

14) ಚತುರ್ಥದಲ್ಲಿ ಬಲಾಢ್ಯ ಗ್ರಹವಿದ್ದು, ಚತುರ್ಥೇಶ, ಶುಕ್ರ, ಚಂದ್ರ ಈ ಸಂಗತಿಗಳು ಪೂರಕವಿದ್ದ ಜಾತಕನಿಗೆ ತಾಯಿಯಿಂದ ಹಾಗೂ ತಾಯಿಯ ಬಳಗದವರಿಂದ ದ್ರವ್ಯಾನುಕೂಲತೆಯಾಗುತ್ತದೆ.

15) ಶನಿ–ಮಂಗಳ, ಶನಿ–ರವಿ, ಶನಿ–ಚಂದ್ರರ ಪ್ರತಿಯೋಗವು, ತೃತೀಯ-ಭಾಗ್ಯ, ಚತುರ್ಥ-ದಶಮ ಈ ಸ್ಥಾನಗಳಲ್ಲಿದ್ದರೆ ದಾಯಾದಿಗಳಿಂದ ಆರ್ಥಿಕ ಹಾನಿ ಆಗುತ್ತದೆ.

16) ತೃತೀಯದಲ್ಲಿ ರವಿ, ಚಂದ್ರ, ಕುಜ ಯಾರೊಬ್ಬರಿದ್ದು ಲಗ್ನದಲ್ಲಿ ಶನಿ ಹಾಗೂ ತೃತೀಯೇಶ ನಿರ್ಬಲ ದುರ್ಬಲರಿದ್ದು ಜಾತಕನಿಗೆ ದಾಯಾದಿಗಳಿಂದ ಆರ್ಥಿಕ ಹಾನಿಯಾಗುತ್ತದೆ.

17) ಪಂಚಮಸ್ಥಾನದಲ್ಲಿ ಬಲಾಢ್ಯ ಗ್ರಹ ಹಾಗೂ ರವಿ, ಬುಧ, ಪಂಚಮೇಶ, ಅಷ್ಟಮೇಶ, ಲಾಭೇಶರು ಬಲಾಢ್ಯರಿದ್ದ ಜಾತಕನಿಗೆ ಬ್ಯಾಂಕು, ಅಂಚೆಖಾತೆ, ಯುನಿಟ್ಟು ಮೊದಲಾದ ಸರಕಾರಿ ಸಂಸ್ಥೆಗಳಿಂದ ಠೇವಣಿಯಲ್ಲಿ ಹೇರಳ ಬಡ್ಡಿ, ಡಿವೆಂಡ, ಡಿಬೆಂಚರ ಬಹುಮಾನಾದಿಗಳು ಲಭಿಸುತ್ತವೆ.

18) ಯಾರ ಜಾತಕದಲ್ಲಿ ಚತುರ್ಥದಲ್ಲಿ ಪಾಪಗ್ರಹಗಳಿದ್ದು, ಚತುರ್ಥೇಶ, ಶುಕ್ರ, ಚಂದ್ರರು, ನಿರ್ಬಲರಿದ್ದ ಜಾತಕರು ಹೊಲ, ಮನೆ ಗದ್ದೆ ಮೊದಲಾದ ಸ್ಥಾವರ ಎಸ್ಟೇಟಗಳನ್ನು ಕಳೆದುಕೊಳ್ಳುವರು. ಇಂಥವರು, ಈ ಸ್ಥಾವರ ಇಸ್ಟೇಟಗಳನ್ನು ಮತ್ತು ಭೋಗ್ಯ ಅಡವು, ಇಟ್ಟರೆ ಆ ಆಸ್ತಿಯನ್ನು ಕಳೆದುಕೊಳ್ಳುವರು ಅರ್ಥಾತ ಇವರಿಗೆ ಸ್ಥಾವರ ಇಸ್ಟೇಟ ಸೌಖ್ಯವಿರುವುದಿಲ್ಲ.

19) ರವಿ, ದಶಮೇಶ, ನಿರ್ಬಲ, ದುರ್ಬಲರಿದ್ದು ದಶಮ, ಚತುರ್ಥದಲ್ಲಿ ಶನಿ–ಮಂಗಳ, ಶನಿ–ಚಂದ್ರ, ಶನಿ–ರವಿಗಳ ಪ್ರತಿಯೋಗ ಯುತಿಯೋಗವಿದ್ದ ಜಾತಕರು ತಾವು ಕೆಲಸ ಮಾಡುತ್ತಿರುವ ಸಂಸ್ಥೆಗಳಿಂದ, ಖಾತೆಗಳಿಂದ ಬರಬೇಕಾಗಿದ್ದ ನಿವೃತ್ತಿ ವೇತನ,ಪ್ರಾವಿಡೆಂಟ ಫಂಡ, ಗ್ರ್ಯಾಚುಟಿ ಮೊದಲಾದವುಗಳನ್ನು ಪಡೆಯಲು ಹೋರಾಡಬೇಕಾಗುತ್ತದೆ.

20) ದಶಮದಲ್ಲಿ ಬಲಾಢ್ಯ ಗ್ರಹ ಹಾಗೂ ದಶಮೇಶ, ಚತುರ್ಥೇಶ, ರವಿ, ಚಂದ್ರರು ಬಲಾಢ್ಯರಿದ್ದ ಜಾತಕನಿಗೆ ನಿವೃತ್ತಿವೇತನ ಪ್ರಾವಿಡೆಂಟ ಫಂಡ ಗ್ರ್ಯಾಚುಟಿ ಪಡೆಯಲು ಯಾವ ತೊಂದರೆ ಬರುವುದಿಲ್ಲ.

21) ಪಂಚಮದಲ್ಲಿ ದುರ್ಬಲ ಗ್ರಹ ಹಾಗೂ ಪಂಚಮೇಶನು ದುರ್ಬಲನಾಗಿ ವ್ಯಾಯದಲ್ಲಿದ ಜಾತಕನು ಬಡ್ಡಿ ಆಸೆಗಾಗಿ ಖಾಸಗಿ ಫೈನಾನ್ಸ ಕಂಪನಿಗಳಲ್ಲಿ ಸಂಸ್ಥೆಗಳಲ್ಲಿ ವ್ಯಕ್ತಿಗಳಲ್ಲಿ ಹಣ ತೊಡಗಿಸಿದಲ್ಲಿ ಹಣ ಕಳೆದು ಕೊಳ್ಳುವನು.

22) ಲಾಭೇಶನು, ಪಂಚಮೇಶರು ವ್ಯಾಯದಲ್ಲಿ ದುರ್ಬಲನಾಗಿದ್ದರೆ ಮಿತ್ರರಿಂದ ಹಾನಿಗೊಳಗಾಗುತ್ತಾರೆ. ಇದರಂತೆ ಷಷ್ಠೇಶ ಹಾಗೂ ಚಂದ್ರರು ನಿರ್ಬಲ, ದುರ್ಬಲರಿದ್ದ ಜಾತಕನು ಶತ್ರುಗಳಿಂದ ಆರ್ಥಿಕ ಹಾನಿ ಗೊಳಗಾಗುತ್ತಾರೆ ಇದರಂತೆ ಷಷ್ಠೇಶ ಹಾಗೂ ಚಂದ್ರರು ಬಲಾಢ್ಯರಿದ್ದ ಜಾತಕನು ಶತ್ರುಗಳಿಂದ ಆರ್ಥಿಕ ಆಗುವುದಿಲ್ಲ.

23) ಗುರು–ಮಂಗಳ, ಗುರು–ಶುಕ್ರ, ಗುರು–ಚಂದ್ರ, ಗುರು–ರವಿ ಈ ಗ್ರಹಗಳ ನವಪಂಚಮಯೋಗ ಲಗ್ನ, ಪಂಚಮ, ನವಮ, ದಶಮ ಈ ಸ್ಥಾನಗಳಲ್ಲಿದ್ದ ಜಾತಕನಿಗೆ ಹಣದ ಕೊರತೆ ಎಂದೂ ಆಗುವುದಿಲ್ಲ.

24) ಗುರು, ಚಂದ್ರರ, ಪ್ರತಿಯೋಗ, ಯುತಿಯೋಗವು ಲಗ್ನ, ದ್ವಿತೀಯ, ಪಂಚಮ, ನವಮ, ದಶಮ, ಚತುರ್ಥ ಈ ಸ್ಥಾನಗಳಲ್ಲಿದ್ದ ಜಾತಕನಿಗೆ ಹಣಕಾಸಿನ ತೊಂದರೆ ಇರುವದಿಲ್ಲಾ.

25) ಮೇಷ, ಮಿಥುನ, ಕರ್ಕ, ವೃಶ್ಚಿಕ, ಮೀನ ಈ ಯಾವುದೇ ಐದು ಲಗ್ನಗಳಲ್ಲಿ ಗಜ ಕೇಶರಿ ಯೋಗವಿದ್ದ ಜಾತಕನಿಗೆ ಹಣದ ಕೊರತೆ ಎಂದೂ ಆಗುವುದಿಲ್ಲ.

26) ಕಾಳಸರ್ಪಯೋಗವಿದ್ದ ಜಾತಕನಿಗೆ ಆರ್ಥಿಕ ಅಸ್ಥಿರತೆ ಬಹಳ.

27) ರವಿ–ಶನಿ, ಶನಿ–ಮಂಗಳ, ಶನಿ–ಚಂದ್ರ, ಈ ಗ್ರಹಗಳ ಷಡಷ್ಟಕಯೋಗವಿದ್ದ ಜಾತಕನಿಗೆ ಆರ್ಥಿಕ ಅಸ್ಥಿರತೆ ಬಹಳ.

28) ಗುರು, ಚಂದ್ರ, ಶುಕ್ರ, ಬುಧ ಈ ನಾಲ್ಕು ಗ್ರಹಗಳಲ್ಲಿ ಯಾವುದೇ ಮೂರು ಗ್ರಹಗಳು ಬಲಾಢ್ಯರಿದ್ದ ಜಾತಕನಿಗೆ ಆರ್ಥಿಕ ಕೊರತೆ ಉಂಟಾಗುವುದಿಲ್ಲ.

29) ಯಾರ ಜಾತಕದಲ್ಲಿ ಯಾವುದೇ ಐದು ಗ್ರಹಗಳು ಸ್ವಕ್ಷೇತ್ರ ವಿದ್ದರೆ ಅಥವಾ ಮೂರು ಗ್ರಹಗಳು ಸ್ವಕ್ಷೇತ್ರ ಹಾಗೂ ಎರಡು ಗ್ರಹಗಳು ಉಚ್ಚರಾಶಿಯಲ್ಲಿದ್ದ ಜಾತಕನಿಗೆ ಹಣಕಾಸಿನ ಸ್ಥಿತಿ ತೃಪ್ತಿಕರವಿರುತ್ತದೆ.

30) ಯಾರ ಜಾತಕದಲ್ಲಿ ಯಾವುದೇ ಐದು ಗ್ರಹಗಳು ನೀಚರಾಗಿ, ಶತೃ ಕ್ಷೇತ್ರೀ, ವಕ್ರೀ, ಅಸ್ತಂಗತ, ವೃದ್ಧಾಪ್ಯ ಬಾಲಾವಸ್ಥೆಯಲ್ಲಿರುವವೋ ಅವರಿಗೆ ಹಣಕಾಸಿನ ತೊಂದರೆ ಯಾವಾಗಲೂ ಇರುತ್ತದೆ.

31) ಧನೇಶ, ಲಾಭೇಶ, ಪಂಚಮೇಶ, ಅಷ್ಟಮೇಶ ಈ ನಾಲ್ಕು ಅಧಿಪತಿಗಳಲ್ಲಿ ಯಾರೆ ಇಬ್ಬರು ವ್ಯಯದಲ್ಲಿದ್ದ ಜಾತಕನಿಗೆ ಹಣಕಾಸಿನ ತೊಂದರೆ ಇದ್ದೇ ಇರುತ್ತದೆ.

32) ಬಲಾಢ್ಯ ಧನೇಶನು ಲಾಭದಲ್ಲಿ ಬಲಾಢ್ಯ ಲಾಭೇಶನು ಧನ ಸ್ಥಾನದಲ್ಲಿ ಬಲಾಢ್ಯ ಲಾಭೇಶನು ಪಂಚಮದಲ್ಲಿ, ಬಲಾಢ್ಯ ಪಂಚಮೇಶನು ಲಾಭದಲ್ಲಿ ಈ ನಾಲ್ಕು ಸಂಗತಿಗಳಲ್ಲಿ ಯಾವುದೇ ಎರಡು ಸಂಗತಿಗಳು ಪೂರಕವಿದ್ದ ಜಾತಕನಿಗೆ ಹಣಕಾಸಿನ ತೊಂದರೆಯಾಗುವುದಿಲ್ಲ.

ಯಾವ ಯಾವ ಗ್ರಹಗಳ ಗ್ರಹಯೋಗದಿಂದ ಯಾವ ಯಾವ ಪ್ರಕಾರದ ಧನಪ್ರಾಪ್ತಿಯಾಗುತ್ತದೆ ಎಂಬುವರ ಸಮಗ್ರ ವಿವರಣೆಯನ್ನು ನಾವು ಈಗಾಗಲೇ ಬರೆದು ಪ್ರಕಟಿಸಿದ **"ಆಕಸ್ಮಿಕ ಧನಯೋಗ"** ಎಂಬ ಗ್ರಂಥದಲ್ಲಿ ವಿವರಿಸಲಾಗಿದ್ದು ಪ್ರಸ್ತುತ ಈ ಗ್ರಂಥದ ಈ ಅಧ್ಯಾಯದ ಚೌಕಟ್ಟಿನಲ್ಲಿ ಮಾತ್ರ ವಿವರಿಸಲಾಗಿದೆ.

### 5) ಗೋಚರೀ ಗ್ರಹಗಳ ಪರಿಭ್ರಮಣದ ಪರಿಣಾಮ, ಪ್ರಭಾವ ಹಾಗೂ ಮಹರ್ದಶೆ, ಅಂತರರ್ದಶಗಳ ಪರಿಣಾಮ ಪ್ರಭಾವ

ಯಾರೊಬ್ಬರ ಆರ್ಥಿಕ ವಿಷಯವಾಗಿ ವಿಚಾರಿಸುವಾಗ ಅವರ ಮೂಲ ಜಾತಕದೊಂದಿಗೆ ಗೋಚರೀಗ್ರಹಗಳ ಪರಿಭ್ರಮಣದ ಪರಿಣಾಮ ಹಾಗೂ ಮಹರ್ದಶೆ, ಅಂತರ್‌ದಶೆಗಳ ಪ್ರಭಾವ ಪರಿಣಾಮಗಳನ್ನು ತುಲನಾತ್ಮಕವಾಗಿ ಪರಿಶೀಲಿಸಬೇಕು. ಏಕೆಂದರೆ ಅವರ ಮೂಲ ಜಾತಕದ ಪ್ರಕಾರ ಅವರ ಹಣಕಾಸಿನ ಸ್ಥಿತಿ-ಗತಿ, ಆರ್ಥಿಕಮಟ್ಟ, ಹೇಗಿದೆ ಪುಟ 60 ರಿಂದ 76 ಈ ಪುಟದವರೆಗೆ ವಿವರಿಸಿದಂತೆ ಯಾವ ಯಾವ ಮೂಲಗಳಿಂದ ಅವರಿಗೆ ಆರ್ಥಿಕ ಅನುಕೂಲತೆ ಇದೆ ಯಾವ ಮೂಲದಿಂದ ಆರ್ಥಿಕ ಅನುಕೂಲತೆ ಇರುವುದಿಲ್ಲ ಎಂಬುದನ್ನು ಮೊದಲು ಖಚಿತಪಡೆಮಕೊಂಡು ಆ ಬಳಿಕ ಗೋಚರೀಗ್ರಹಗಳ ಶುಭಾ ಅಶುಭದ ಫಲವನ್ನು ಮಹರ್ದಶೆ ಅಂತರವರ್ಶೆಗಳ ಶುಭಾ-ಅಶುಭ ಫಲದ ಬಗೆಗೆ ಪರಿಶೀಲಿಸಬೇಕು. ಉದಾಹರಣೆ ಯಾರೊಬ್ಬರ ಜಾತಕದಲ್ಲಿ ಪಿತ್ರಾರ್ಜಿತ ಸೌಖ್ಯವಾಗಲೀ ಆಕಸ್ಮಿಕ ಧನಯೋಗದ ಸೌಖ್ಯವಾಗಲೀ ಇರುವುದಿಲ್ಲವೆಂದು ತಿಳಿದಾಗ ಗೋಚರಿ ಗ್ರಹಗಳು ಶುಭವಾಗಿ ಬಂದಾಗ್ಯೂ ಮಹರ್ದಶೆ ಅಂತರರ್ದೆಸೆಗಳು ಶುಭರಿದ್ದಾಗ್ಯೂ ಕೂಡ ಪಿತ್ರಾರ್ಜಿತ ಸೌಖ್ಯವಾಗಲೀ ಆಕಸ್ಮಿಕ ಧನಯೋಗದ ಸೌಖ್ಯವಾಗಲೀ ಸಿಗಲಾರದು. ಆದರೆ ಇಷ್ಟುಮಾತ್ರ ನಿಜ ಗೋಚರೀಗ್ರಹಗಳು ಹಾಗೂ ಮಹರ್ದೆಶೆ, ಅಂತರದೆಶೆಗಳು ಶುಭರಿದ್ದಾಗ ಹಣಕಾಸಿನ ತೊಂದರೆ ಇರುವುದಿಲ್ಲ ಅನ್ನುವದಕ್ಕಿಂತ ಕಡಿಮೆ ಇರುತ್ತದೆ ಇಲ್ಲವೇ ಹೇಗೊ ತೊಂದರೆ ನಿವಾರಣೆಯಾಗುತ್ತದೆ.

ಇದರ ವಿರುದ್ಧವಾಗಿ ಯಾರ ಜಾತಕದಲ್ಲಿ ಪಿತ್ರಾರ್ಜಿತ ಸೌಖ್ಯವನ್ನು ಆಕಸ್ಮಿಕ ಧನಯೋಗದ ಸೌಖ್ಯವನ್ನು ಪಡೆದುಕೊಂಡು ಬಂದಿರುವರೋ ಅವರಿಗೆ ಗೋಚರೀಗ್ರಹಗಳು ಎಷ್ಟೇ ಅಶುಭರಿದ್ದಾಗ್ಯೂ ಕೂಡ ಮಹರ್ದೆಸೆಗೆ ಅಂತರದೆಸೆಗಳು ಅಶುಭವಿದ್ದಾಗ್ಯೂ ಕೂಡ ಪಿತ್ರಾರ್ಜಿತ ಸೌಖ್ಯಕ್ಕಾಗಲೀ ಆಕಸ್ಮಿಕ ಧನಯೋಗದ ಸೌಖ್ಯಕ್ಕಾಗಲೀ ಹಾನಿ ಆಗದು ಆದರೆ ಇಷ್ಟುಮಾತ್ರ

ನಿಜ ಮೂಲಜಾತಕದಲ್ಲಿ ಈ ಎರಡು ಮೂಲಗಳಿಂದ ಆರ್ಥಿಕ ಅನುಕೂಲತೆ ಯಿದ್ದಾಗ ಗೋಚರೀಗ್ರಹಗಳು ಶುಭರಿದ್ದಾಗ ತೀವ್ರ ಕೆಲಸವಾಗುತ್ತದೆ ಪ್ರತಿಕೂಲವಿದ್ದಾಗ ವಿಲಂಬದಿಂದ ಕೆಲಸವಾಗುತ್ತದೆ. ಇದರಂತೆ ಮಹರ್ದೆಸೆ ಅಂತರ್ದೆಸೆಗಳ ಪರಿಣಾಮವಿರುತ್ತದೆ. ಈ ದೃಷ್ಟಿಕೋನದಿಂದ ಗೋಚರೀ ಗ್ರಹಗಳು ಹಾಗೂ ಮಹರ್ದಶೆ ಅಂತರರ್ದಶೆಗಳ ಶುಭಾ–ಅಶುಭ ಫಲಗಳು ಹೇಗೆ ಎಂಬುದನ್ನು ನೋಡುವ

1) ಸೂರ್ಯನು ಗೋಚರಿಯಿಂದ 1 – 4 – 8 – 12 – 2 – 5 ನೇಯವನಾಗಿ ಬಂದಾಗ ಹಣಕಾಸಿನ ತೊಂದರೆ ಉಂಟಾಗುತ್ತದೆ. ಅದರಲ್ಲಿಯೂ 2 – 5 – 7 – 9 ರವಿ ಬಂದಾಗ ಹೆಚ್ಚಿನ ಖರ್ಚಿನ ಪ್ರಸಂಗ ಗಳನ್ನು ತರುತ್ತಿದ್ದರೆ 1–4–8–12 ನೇ ರವಿ ಬಂದಾಗ ಆರ್ಥಿಕ ಅಡಚಣೆ ತರುತ್ತಾನೆ. ಇಷ್ಟೇ ಅಲ್ಲಾ ಸಾಲಗಾರರ ಕಾಟದಿಂದಲೂ ಕಳವು ತುಡುಗುಗಳು ಭೀತಿ, ಸರಕಾರಿ ಅಧಿಕಾರಿಗಳಿಂದಲೂ, ರಾಜಕೀಯ ವ್ಯಕ್ತಿಗಳಿಂದಲೂ ಗುಂಡಾ ಜನರಿಂದಲೂ ಅವಮಾನಗೊಳಗಾಗಬಹುದಾಗಿದೆ ಆದರೆ ಸೂರ್ಯನು ಗೋಚರೀಯಿಂದ 3–6–10–11ನೇಯವನಾಗಿ ಬಂದಾಗ ಆಕಸ್ಮಿಕ ಧನಯೋಗದಿಂದಲೂ. ಬರತಕ್ಕ ಹಣ ಬರುವದರಿಂದಲೂ, ಕೈಗಡ ಸಾಲಗಳ ಮುಖಾಂತರದಿಂದಲೂ ಹಣಬರುವದರಿಂದ ಆರ್ಥಿಕ ತಾಪತ್ರಯ ದೂರಾಗುತ್ತದೆ ಹಾಗೂ ಹಣಕಾಸಿನ ಸ್ಥಿತಿ ಸುವ್ಯವಸ್ಥೆಯಲ್ಲಿರುತ್ತದೆ.

2) ಚಂದ್ರನು ಗೋಚರೀಯಿಂದ 4–6–8–12ನೇಯವನಾಗಿ ಬಂದಾಗ ಆರ್ಥಿಕ ಅಡಚಣೆ ಉಂಟಾಗುತ್ತದೆ. ಇಷ್ಟೇಅಲ್ಲಾ ಸಾಲಗಾರರ ಕಾಟ ಗುಂಡಾಜನರಿಂದ ತೊಂದರೆ ಕಳವು ತುಡುಗಳ ಸರಕಾರಿ ಅಧಿಕಾರಿ ಗಳಿಂದಲೂ ಆರ್ಥಿಕ ಹಾನಿ ಅಂದರೆ ಲೋಕಾಯುಕ್ತ ಸಿ. ಬಿ. ಆಯ್. ಸಿ. ಐ. ಡಿ, ವರಮಾನ ಮಾರಾಟ ಅಬಕಾರಿ ಅಧಿಕಾರಿಗಳಿಂದ ದಾಳಿ ಆಗುತ್ತದೆ. ರಾಜಕಾರಣಿಗಳಿಂದಲೂ ಕಿರುಕುಳ ಉಂಟಾಗುತ್ತದೆ, ಆದರೆ ಅದೇ ಗೋಚರೀ ಚಂದ್ರನು 1–2–3–5–7–9–10–11ನೇಯವನಾಗಿ ಬಂದಾಗ ಆಕಸ್ಮಿಕ ಧನಯೋಗದಿಂದಲೂ ಬರತಕ್ಕ ಹಣ ಬರುವುದರಿಂದಲೂ

ಸಾಲ, ಕೈಗಡ ಮಾರಾಟ ಮೊದಲಾದ ರೀತಿಯಿಂದಲೂ ಅನುಕೂಲತೆ ಉಂಟಾಗುತ್ತದೆ.

3) ಮಂಗಳನು ಗೋಚರಿಯಿಂದ 1-2-4-5-7-8-9-12 ನೇ ಯವನಾಗಿ ಬಂದಾಗ ದ್ರವ್ಯಚಿಂತೆ, ಕಳವು ತುಡುಗುಗಳ ಭೀತಿ, ಸಾಲಗಾರರ ಕಾಟ ಅವಮಾನ ಪ್ರಸಂಗ ಆರ್ಥಿಕ ಹಾನಿ ತರುತ್ತಾನೆ. ಆದರೆ 3-6-10-11ನೇಯವನಾಗಿ ಬಂದಾಗ ಯಾವುದೇ ರೂಪದಿಂದಲೂ ಯಾವುದೇ ಮೂಲದಿಂದ ದ್ರವ್ಯಾನುಕೂಲತೆ ಉಂಟಾಗುತ್ತದೆ. ವಿಶೇಷವಾಗಿ ಅನಿರೀಕ್ಷಿತ ಧನಲಾಭವಾಗುವ ಸಂಭವ ಹೆಚ್ಚಾಗಿರುತ್ತದೆ.

4) ಬುಧನು ಗೋಚರೀಯಿಂದ 4-6-8-12ನೇ ಯವನಾಗಿ ಬಂದಾಗ ದ್ರವ್ಯಚಿಂತೆ, ಆರ್ಥಿಕಹಾನಿ ಸಾಲಗಾರರ ಕಾಟ ಅವಮಾನ ಪ್ರಸಂಗ ತರುತ್ತಾನೆ. ಆದರೆ ಅದೇ ಗೋಚರೀಬುಧನು 1-2-3-5-7-9-10-11 ನೇಯವನಾಗಿ ಬಂದಾಗ ದ್ರವ್ಯಾನುಕೂಲತೆಯಾಗಿ ಆರ್ಥಿಕಸ್ಥಿತಿ ಸುಧಾರಿಸುತ್ತದೆ.

5) ಗುರುವು ಗೋಚರಿಯಿಂದ 4-6-8-12 ನೇ ಯವನಾಗಿ ಬಂದಾಗ ಹಣಕಾಸಿನ ತೊಂದರೆಗಳು ಉದ್ಭವಿಸುತ್ತವೆ. ಇಷ್ಟೇ ಅಲ್ಲಾ ಸಾಲಗಾರರಕಾಟದಿಂದಲೂ ಕಳವು ತುಡುಗುಗಳಿಂದಲೂ ಗೂಂಡಾಜನರ ಭೀತಿಯಿಂದಲೂ ಸರಕಾರಿ ಅಧಿಕಾರಿಗಳಿಂದ ಆರ್ಥಿಕ ಹಾನಿಆಗುತ್ತದೆ. ಅಂದರೆ ಲೋಕಾಯುಕ್ತನ ಸಿ. ಬಿ. ಐ. ಮಾರಾಟ ಅಬಕಾರಿ ವರಮಾನ ಮೊದಲಾದ ಅಧಿಕಾರಿಗಳಿಂದ ಆರ್ಥಿಕ ಹಾನಿ ಅಲ್ಲದೇ ಅವಮಾನದ ಪ್ರಸಂಗವೂ ಬರುತ್ತದೆ ಇದರಂತೆ ರಾಜಕಾರಣಿಗಳಿಂದಲೂ ತೊಂದರೆ ಉಂಟಾಗುತ್ತದೆ. ಆದರೆ ಅದೇ ಗೋಚರಿ ಗುರುವು 2-5-7-9-11 ನೇ ಯವನಾಗಿ ಬಂದಾಗ ಸ್ವಅರ್ಜಿತದಿಂದಲೂ ಪಿತ್ರಾರ್ಜಿತದಿಂದಲೂ ಆಕಸ್ಮಿಕ ಧನಯೋಗದಿಂದಲೂ ಹೀಗೆ ತ್ರಿವಿಧಮೂಲದಿಂದ ದ್ರವ್ಯಾನುಕೂಲತೆಯಾಗುತ್ತದೆ. ಆದರೆ 1-3-10ನೇ ಗೋಚರೀ ಗುರುವು ಆರ್ಥಿಕ ಅಡಚಣೆಯನ್ನು ಕೊಡಲಾರ ಆಕಸ್ಮಿಕ ಧನ

ಯೋಗದ ಸೌಖ್ಯವನ್ನು ಪಿತ್ರಾರ್ಜಿತ ಸೌಖ್ಯವನ್ನು ಕೊಡದೇ ಒಂದು ರೀತಿ ಯಿಂದ ಯಥಾಸ್ಥಿತಿ ಮುಂದುವರಿಸುವನು.

6) ಶುಕ್ರನು ಗೋಚರಿಯಿಂದ 3–4–6–8ನೇಯವನಾಗಿ ಬಂದಾಗ ದ್ರವ್ಯಚಿಂತೆ ಅಧಿಕ ಖರ್ಚಿನ ಪ್ರಸಂಗ, ಆರ್ಥಿಕ ಹಾನಿ ಸಾಲಗಾರರ ಕಾಟ ಮೊದಲಾದ ಅಶುಭಫಲ ಕೊಡುವನು. ಆದರೆ ಅದೇ ಶುಕ್ರನು 1–2–5-9 10-11–12ನೇ ಯವನಾಗಿ ಬಂದಾಗ ಸ್ವಅರ್ಥಾತ ಪಿತ್ರಾರ್ಜಿತರ, ಆಕಸ್ಮಿಕ ಧನಯೋಗ ಹೀಗೆ ತ್ರಿವಿಧ ರೀತಿಯಿಂದ ದ್ರವ್ಯಾನುಕೂಲತೆಯಾಗಿ ಆರ್ಥಿಕ ಸ್ಥಿತಿ ಹಿಡಿತದಲ್ಲಿರುತ್ತದೆ.

7) ಶನಿಯು ಗೋಚರೀಯಿಂದ 1–2–4–5–8–12 ನೇಯವ ನಾಗಿ ಬಂದಾಗ ಹಣಕಾಸಿನ ತೊಂದರೆಗಳು ಬಹಳ ಇಷ್ಟೇಅಲ್ಲಾ ಸಾಲಗಾರ ಕಾಟದಿಂದಲೂ ಗುಂಡಾಜನರ ಭೀತಿಯಿಂದಲೂ ರಾಜಕಾರಣಿಗಳಿಂದ ಆರ್ಥಿಕ ಹಾನಿ ಆಗುವುದಲ್ಲದೇ ಸರಕಾರಿ ಅಧಿಕಾರಿಗಳಿಂದ ಆರ್ಥಿಕ ಹಾನಿ ಅವಮಾನ ಕಳವು ತುಡುಗುಗಳಿವಂಲೂ ಪ್ರಸಂಗಗಳನ್ನು ಎದುರಿಸಬೇಕಾಗುತ್ತದೆ. ಅಂದರೆ ಲೋಕಾಯುಕ್ತ ಸಿ. ಬಿ. ಆಯ. ಸಿ. ಓ. ಡಿ. ಮಾರಾಟ ಅಬಕಾರಿ ಪರಮಾನ ಈ ಖಾತೆಗಳ ಅಧಿಕಾರಿಗಳಿಂದ ಆರ್ಥಿಕ ಹಾನಿ ಆಗುವುದಲ್ಲದೇ ಅವಮಾನ ಪ್ರಸಂಗವನ್ನು ಎದುರಿಸಬೇಕಾಗುತ್ತದೆ. ಆದರೆ ಅದೇ ಗೋಚರಿ ಶನಿಯು 3-6–10–11ನೇಯವನಾಗಿ ಬಂದಾಗ ಪಿತ್ರಾರ್ಜಿತ ಸೌಖ್ಯವನ್ನು ಆಕಸ್ಮಿಕ ಧನ ಯೋಗವನ್ನು ಕೊಡುವನಲ್ಲದೆ ಸ್ವ ಅರ್ಜಿತ ಸಾಮರ್ಥ್ಯವನ್ನು ಹೆಚ್ಚಿಸುವನು ಹೀಗೆ ತ್ರಿವಿಧ ಮೂಲದಿಂದ ದ್ರವ್ಯಾನುಕೂಲತೆ ಆಗುತ್ತದೆ. ಆದರೆ ಶನಿಯು ಗೋಚರಿಯಿಂದ 7–9ನೇಯವನಾಗಿ ಬಂದಾಗ ಆರ್ಥಿಕವಾಗಿ ಯಾವ ಏರಿಳಿತವಿರದೇ ಯಥಾಸ್ಥಿತಿಮುಂದುವರೆಯುತ್ತವೆ. 8–9 ರಾಹುವಿನ ಗೋಚರಿ ಫಲಗಳು ಮಂಗಳನಂತೆಯೂ ಕೇತುವಿನ ಗೋಚರಿ ಫಲಗಳು ಶನಿ ಯಂತೆಯೂ ಲಭಿಸುತ್ತವೆ.

ಗ್ರಹಗಳ ಗೋಚರಿ ಫಲದ ವಿಷಯವಾಗಿ ರವಿ, ಚಂದ್ರ, ಗುರು, ಶನಿ ಯರ ಶುಭಾ-ಅಶುಭ ಫಲಗಳುಹೆಚ್ಚು ಪರಿಣಾಮವನ್ನುಂಟುಮಾಡುತ್ತವೆ.

ಗ್ರಹಗಳ ಗೋಚರ ಫಲದ ವಿಷಯವಾಗಿ ನಾವು ಬರೆದು ಪ್ರಕಟಿಸಿದ **"ಗ್ರಹಗತಿ"** ಹಾಗೂ **"ಸಾಡೇಸಾತಿ"** ಈ ಎರಡು ಗ್ರಂಥಗಳಲ್ಲಿ ವಿವರವಾಗಿ ವಿವರಿಸಿದೆ.

## ದಶಾಪದ್ಧತಿಯಿಂದ ಆರ್ಥಿಕ ವಿಚಾರ

ಯಾರೊಬ್ಬ ಜಾತಕನ ಆರ್ಥಿಕ ದೃಷ್ಟಿಯಿಂದ ಯಾವ ಯಾವ ಗ್ರಹಗಳ ಮಹರ್ದಶೆ, ಅಂತರರ್ದಶೆಗಳು ಶುಭಫಲವನ್ನು ಕೊಡುತ್ತವೆ. ಯಾವ ಗ್ರಹ ಗಳು ಅಶುಭ ಫಲ ಕೊಡುತ್ತವೆ ಎಂಬ ಪ್ರಶ್ನೆಗೆ ಉತ್ತರಿಸಲು ಅನೇಕ ಸಂಗತಿ ಗಳನ್ನು ಪರಿಶೀಲಿಸಬೇಕಾಗುತ್ತದೆ.

ಮೊದಲನೇದಾಗಿ ಜಾತಕನ ಆರ್ಥಿಕ ಮಟ್ಟ ಹೇಗಿದೆ ಎಂಬುದನ್ನು ಕೂಲಂಕುಷವಾಗಿ ಪರಿಶೀಲಿಸಬೇಕು. ಇದೇ ಗ್ರಂಥದ ಇದೇ ಅಧ್ಯಾಯದ 60ನೇ ಪುಟದಿಂದ 70ನೇ ಪುಟದವರೆಗೆ ವಿವರಿಸಿದಂತೆ ಜಾತಕನಿಗೆ ಸ್ವಆರ್ಜಿತ ಸೌಖ್ಯ ಹೇಗಿದೆ ? ಪಿತ್ರಾರ್ಜಿತ ಸೌಖ್ಯ ಹೇಗಿದೆ ? ಆಕಸ್ಮಿಕ ಧನಯೋಗದ ಸೌಖ್ಯ ಇದೆಯೋ ಹೇಗೆ ಎಂಬುದನ್ನು ಮೊದಲು ಖಚಿತಪಡಿಸಿಕೊಳ್ಳಬೇಕು. ಆ ಬಳಿಕ ಯಾವಯಾವ ಗ್ರಹಗಳ ಮಹರ್ದಶೆ, ಅಂತರರ್ದಶೆಗಳು ಶುಭಾಶುಭ ಫಲಗಳನ್ನು ಕೊಡುವವು ಎಂಬುದನ್ನು ಪರಿಶೀಲಿಸಬೇಕು ಅವುಗಳ ವಿವರಣೆ ಈ ಕೆಳಗಿನಂತಿದೆ.

2) ಮೊದಲನೆಯದಾಗಿ ಜಾತಕದಲ್ಲಿ ಯಾವ ಗ್ರಹಗಳು ಬಲಾಢ್ಯರಿರು ವವೋ ಆ ಗ್ರಹಗಳ ಮಹರ್ದಶೆ ಅಂತರ್ದಶೆಗಳು ಶುಭಫಲವನ್ನು ಕೊಡುತ್ತವೆ ಇವು ಕೇವಲ ಆರ್ಥಿಕ ದೃಷ್ಟಿಯಿಂದ ಮಾತ್ರವಲ್ಲಾ ಜೀವನದ ಎಲ್ಲ ದೃಷ್ಟಿಯ ಲ್ಲಿಯೂ ಶುಭಫಲಕೊಡುತ್ತವೆ. ಇದರಂತೆ ಜಾತಕದಲ್ಲಿ ಯಾವ ಗ್ರಹಗಳು ದುರ್ಬಲ, ನಿರ್ಬಲರಿರುವವೋ ಆ ಗ್ರಹಗಳ ಮಹರ್ದಶೆ, ಅಂತರರ್ದಶೆಗಳು ಅಶುಭಫಲ ಕೊಡುತ್ತವೆ. ಬಲಾಢ್ಯ ಗ್ರಹವೆಂದರೇನು ನಿರ್ಬಲ, ದುರ್ಬಲ ಗ್ರಹವೆಂದರೇನು ಇವುಗಳ ಅರ್ಥವಿವರಣೆ ನಮ್ಮ ವೃತ್ತಿ ಬಾಂಧವರಿಗೆ ವಿವರಿಸುವುದು ಅಗತ್ಯವಿಲ್ಲ.

2) ಎರಡನೇದಾಗಿ ಮಹರ್ದಶೆ ಅಂತರರ್ದಶೆಗಳು ಒಂದೇ ಗ್ರಹದ ಕಾಲವಲ್ಲಿ ನಡೆಯುತ್ತಿದ್ದರೆ ಆ ಗ್ರಹಗಳ ಶುಭಾ ಅಶುಭ ಫಲಗಳು ಒಂದೇ ಸಮವಾಗಿರುತ್ತವೆ. ಮಿತ್ರ ಗ್ರಹಗಳಿದ್ದರೂ ಶುಭಾ ಅಶುಭ ಫಲಗಳು ಒಂದೇ ಸಮವಾಗಿರುತ್ತವೆ. ಆದರೆ ಮಹರ್ದಶೆ ಅಂತರ್ದಶೆಗಳ ಗ್ರಹಗಳಲ್ಲಿ ಶತೃತ್ವವಿದ್ದರೆ ಮಿಶ್ರಿತಫಲ ಸಿಗುತ್ತವೆ ಇದನ್ನು ಉದಾಹರಣೆಯೊಂದಿಗೆ ಸ್ಪಷ್ಟೀಕರಿಸುವ ಯಾರೊಬ್ಬ ಜಾತಕನ ಜಾತಕದಲ್ಲಿ ಬಲಾಢ್ಯ ಸೂರ್ಯನಿದ್ದಾನೆ ಯೆಂದು ತಿಳಿಯಿರಿ. ಆಗ ಆತನಿಗೆ ಸೂರ್ಯನ ಮಹರ್ದಶೆ ಸಾಮಾನ್ಯವಾಗಿ ಶುಭಫಲ ಕೊಡುತ್ತವೆ. ಅದರಂತೆ ಜಾತಕನ ಜಾತಕದಲ್ಲಿ ನಿರ್ಬಲ ದುರ್ಬಲ ಸೂರ್ಯನಿದ್ದರೆ ಆತನ ಮಹರ್ದಶೆಯಲ್ಲಿ ಅಶುಭಫಲ ಸಿಗುತ್ತದೆ. ಆದರೆ ಬಲಾಢ್ಯ ಸೂರ್ಯನಿದ್ದು ಸೂರ್ಯನದೇ ಅಂತರರ್ದಶೆ ಇದ್ದರೆ ಹೆಚ್ಚು ಶುಭ ಫಲ ಸಿಗುತ್ತದೆ ನಿರ್ಬಲ ಸೂರ್ಯನಿದ್ದು ಸೂರ್ಯನ ಮಹರ್ದಶೆಯಲ್ಲಿ ಆತನದೇ ಅಂತರ್ದಶೆ ಹೆಚ್ಚು ಅಶುಭ ಫಲ ಸಿಗುತ್ತದೆ ಆದರೆ ಬಲಾಢ್ಯ ಸೂರ್ಯನ ಮಹರ್ದಶೆಯಲ್ಲಿ ಬಲಾಢ್ಯ ಚಂದ್ರ, ಮಂಗಳ, ಗುರುಗಳ ಅಂತರ ದಶೆಗಳು ಶುಭ ಫಲವನ್ನೇ ಕೊಡುತ್ತವೆ ಏಕೆಂದರೆ ಗುರು, ಚಂದ್ರ, ಮಂಗಳ ಸೂರ್ಯನ ಮಿತ್ರಗ್ರಹಗಳು ಆದರೆ ಸೂರ್ಯನ ಮಹರ್ದಶೆಯಲ್ಲಿ ಶುಕ್ರ, ಶನಿ, ರಾಹು, ಕೇತುಗಳಂಥ ಶತೃಗ್ರಹಗಳ ಅಂತರ್ದಶೆಗಳು ಅಶುಭ ಫಲ ಕೊಡುತ್ತವೆ. ಬುಧನು ಶತ್ರುನೂ ಅಲ್ಲಾ ಮಿತ್ರನೂ ಅಲ್ಲಾ ಸುಮನಿರುವ ಕಾರಣ ಸೂರ್ಯನ ಮಹರ್ದಶೆಯಲ್ಲಿ ಬುಧನ ಅಂತರರ್ದಶೆ ಮಿಶ್ರಫಲ ಸಿಗುತ್ತವೆ. ಹೀಗೆ ಗ್ರಹಗಳ ಮಿತ್ರತ್ವ, ಶತೃತ್ವ ಸಮತ್ವಗಳ ಮೇಲಿಂದ ಮಹರ್ದಶೆ ಅಂತರ ರ್ದಶೆಗಳ ಫಲಗಳು ಸಿಗುತ್ತವೆ.

3) ಮೂರನೇದಾಗಿ ಬಲಾಢ್ಯ ಗ್ರಹಗಳ ಮಹರ್ದಶೆಯಲ್ಲಿ ನಿರ್ಬಲ ಗ್ರಹಗಳ ಅಂತರರ್ದಶೆಗಳು ಮಿಶ್ರಿತ ಫಲಸಿಗುತ್ತವೆ. ಇದರಂತೆ ನಿರ್ಬಲ, ದುರ್ಬಲ ಗ್ರಹಗಳ ಮಹರ್ದಶೆಯಲ್ಲಿ ಬಲಾಢ್ಯ ಗ್ರಹಗಳ ಅಂತರರ್ದಶೆಗಳು ಕೂಡ ಮಿಶ್ರಿತ ಫಲ ಸಿಗುತ್ತವೆ. ಈ ಸಂಗತಿಯನ್ನು ಕೂಡ ಲಕ್ಷದಲ್ಲಿಟ್ಟು ಫಲ ನಿರ್ಣಯಿಸಬೇಕು.

4) ನಾಲ್ಕನೇದಾಗಿ ಇದೇ ಅಧ್ಯಾಯದ 62ನೇ ಪುಟದಿಂದ 70ನೇ ಪುಟದವರೆಗೆ ವಿವರಿಸಿದಂತೆ ವಿಭಿನ್ನ ಲಗ್ನಗಳಿಗಿರುವ ಯೋಗಕಾರಕ ಯಾವ ಗ್ರಹಗಳು ಬಲಾಢ್ಯರಿರುವವೋ ಆ ಗ್ರಹಗಳ ಮಹರ್ದಶೆ ಅಂತರರ್ದಶೆಯಲ್ಲಿ ಜಾತಕನು ಹಣಗಳಿಸುವ ಸಾಮರ್ಥ್ಯ ಚೆನ್ನಾಗಿರುವುದರಿಂದ ಆತನ ಆರ್ಥಿಕಸ್ಥಿತಿ ಚೆನ್ನಾಗಿರುತ್ತದೆ. ಆದರೆ ವಿಭಿನ್ನ ಲಗ್ನಗಳಿಗಿರುವ ಯೋಗಕಾರಕ ಗ್ರಹಗಳು ದುರ್ಬಲ ನಿರ್ಬಲರಿದ್ದರೆ ಅವರ ಮಹರ್ದಶೆ ಅಂತರರ್ದಶೆಗಳಲ್ಲಿ ಜಾತಕನ ಹಣಗಳಿಸುವಶಕ್ತಿ ಕುಂಠಿತವಾಗುತ್ತವೆ. ತನ್ನ ಮೂಲಕ ಆರ್ಥಿಕ ಸ್ಥಿತಿ ಬಿಗಡಾಯಿಸಿರುತ್ತದೆ. ಇದರಂತೆ ಪಿತ್ರಾರ್ಜಿತ ಸೌಖ್ಯಕೊಡುವ ಸ್ಥಾನದಲ್ಲಿರುವ ಗ್ರಹಗಳು ಸ್ಥಾನಾಧಿಶರು ಬಲಾಢ್ಯರಿದ್ದರೆ ಆ ಗ್ರಹಗಳ ಮಹರ್ದಶೆ ಅಂತರರ್ದಶೆಗಳು ಶುಭಫಲಗಳು ಸಿಗುವುದರಿಂದ ಈ ಅವಧಿಯಲ್ಲಿ ಪಿತ್ರಾರ್ಜಿತ ಸೌಖ್ಯ ಸಿಗುತ್ತದೆ. ಅರ್ಥಾತ ಪಿತ್ರಾರ್ಜಿತದಿಂದ ಧನಾಗಮನ ಇಲ್ಲವೆ ಮಾತಾ-ಪಿತರು ಸಹೋದರ-ಸಹೋದರಿಯಿಂದಲೂ ದ್ರವ್ಯಾನುಕೂಲತೆ ಯಾಗುತ್ತದೆ. ಆದರೆ ಪಿತ್ರಾರ್ಜಿತ ಸೌಖ್ಯವನ್ನುಕೊಡುವ ಸ್ಥಾನದಲ್ಲಿರುವ ಗ್ರಹಗಳು ಹಾಗೂ ಆ ಸ್ಥಾನಾಧೀಶರು ನಿರ್ಬಲ, ದುರ್ಬಲರಿದ್ದರೆ, ಆ ಗ್ರಹಗಳ ಮಹರ್ದಶೆ ಅಂತರರ್ದಶೆಗಳಲ್ಲಿ ಪಿತ್ರಾರ್ಜಿತ ಸೌಖ್ಯಸಿಗಲಾರದು ಇದರಂತೆ ಆಕಸ್ಮಿಕ ಧನ ಯೋಗ ಕೊಡುವ ಸ್ಥಾನದಲ್ಲಿರುವ ಗ್ರಹ ಹಾಗೂ ಸ್ಥಾನಾಧೀಶರು ಬಲಾಢ್ಯರಿದ್ದು, ಅವರ ಮಹರ್ದಶೆ ಅಂತರರ್ದಶೆಯಲ್ಲಿ ಆಕಸ್ಮಿಕ ಧನಪ್ರಾಪ್ತಿಯಾಗುತ್ತದೆ. ಆದರೆ ಆಕಸ್ಮಿಕ ಧನಯೋಗಕೊಡುವ ಸ್ಥಾನದಲ್ಲಿರುವ ಗ್ರಹಗಳ ಹಾಗೂ ಸ್ಥಾನಾಧೀಶರು ದುರ್ಬಲ ನಿರ್ಬಲರಿದ್ದರೆ ಆ ಗ್ರಹಗಳ ಮಹರ್ದಶೆ ಅಂತರರ್ದಶೆಗಳಲ್ಲಿ ಆಕಸ್ಮಿಕ ಧನಯೋಗ ಪ್ರಾಪ್ತಿಆಗುವುದಿಲ್ಲ. ಹೀಗೆ ಮಹ ದರ್ಶೆ ಅಂತರ್ದಶೆಗಳ ಫಲಗಳ ಅರ್ಥವಿರಣೆ ಮಾಡಬೇಕು. ಮಹರ್ದಶೆ ಅಂತರರ್ದಶೆಗಳ ಫಲ ವಿವರಣೆ ಫಲ ನಿರ್ಣಯಿಸುವದು. ತೊಡಕಿನದು ಆಮದರಿಂದ ಅದಕ್ಕಾಗಿಯೇ ಪ್ರತ್ಯೇಕವಾಗಿ **"ದಶಾದರ್ಪಣ"** ಎಂಬ ಗ್ರಂಥ ಬರೆದು ಪ್ರಕಟಿಸಬೇಕೆಂದಿರುವೆವು. ಆ ಗ್ರಂಥದಲ್ಲಿ ಮಹರ್ದಶೆ ಅಂತರರ್ದಶೆಗಳ ಎಲ್ಲ ಮುಖಗಳ ಹಾಗೂ ಎಲ್ಲ ವಿಷಯಗಳ ಸಮಗ್ರ ವಿವರಣೆಯನ್ನು ಕೊಡಲಾಗುವುದು.

ಹೀಗೆ ಯಾರೊಬ್ಬರ ಆರ್ಥಿಕ ವಿಷಯವಾಗಿ ಪ್ರಮುಖವಾಗಿ ಐದು ಸಂಗತಿಗಳನ್ನು ಏಕೆ ಹಾಗೂ ಹೇಗೆ ಪರಿಶೀಲಿಸಬೇಕೆಂಬುದನ್ನು ಪರಿಶೀಲಿಸಿದ್ದಾಯಿತು. ಇನ್ನು ಆರ್ಥಿಕ-ಪರಿಹಾರದ ವಿಷಯವಾಗಿ ಯಾವ ಯಾವ ಮುಂಜಾಗ್ರತೆ ಕ್ರಮಗಳನ್ನು ಕೈಕೊಳ್ಳಬೇಕು ಯಾವ ಯಾವ ಪರಿಹಾರ ಕ್ರಮಗಳನ್ನು ಕೈಕೊಳ್ಳಬೇಕು ಎಂಬುದನ್ನು ಪರಿಶೀಲಿಸುವಾ ಉದಾಹರಣೆಯೊಂದಿಗೆ ಈ ಮಾತನ್ನು ಸಮರ್ಥಿಸುವೆ ಅನ್ನುವುದಕ್ಕಿಂತ ಪುಷ್ಟಿಕರಿಸುವೆ. ವೃಶ್ಚಿಕಲಗ್ನದ ದಶಮದಲ್ಲಿ ನೀಚರಾಶಿಯ ಶನಿಯು ವ್ಯಯದಲ್ಲಿ ನೀಚರಾಶಿಯ ಸೂರ್ಯನು ಇದ್ದ ಒಬ್ಬರು ತಮ್ಮ ತಂದೆಯು ತಾವೇ ಸ್ವಾರ್ಥಗಳಿಸಿದ ಆಸ್ತಿಯ ಬಗೆಗೆ ವಿಚಾರಿಸಲು ಬಂದಿದ್ದರು. ಆಗ ಅವರಿಗೆ ನಾನು ಭವಿಷ್ಯ ನುಡಿದಿದ್ದೆ ನಿಮ್ಮ ಜಾತಕದಲ್ಲಿ ದಶಮೇಶನಾದ ಸೂರ್ಯನು ದುರ್ಬಲನಿದ್ದು ಶನಿಯಿಂದ ನೊಂದಲ್ಪಡುತ್ತಾನೆ. ಅಲ್ಲದೇ ಈಗ ನಿಮಗೆ ಸಾಡೇಸಾತಿ ಪ್ರಾರಂಭವಾಗಿದೆ. ಆದುದರಿಂದ ರಾಜೀ ಸಂಧಾನ ಮೊದಲಾದ ವಿಧಾನದಿಂದ ವರ್ತಿಸಿ ಅಂದರೆ ಮಾತ್ರ ನಿಮಗೆ ಅವರಿಂದ ತುಸು ಸಹಾಯವಾಗುತ್ತದೆ. ಇಲ್ಲವೆ ತಂದೆಯು ಆಸ್ತಿಗಾಗಿ ಪ್ರಯತ್ನಮಾಡಬೇಡಿರಿ ಎಂದು ಹೇಳಿದ್ದೆ ಆದರೂ ಅವರು ಕೇಳಲಿಲ್ಲ. ತಂದೆ-ಮಗನ ನಡುವೆ ವ್ಯಾಜ್ಯವಾಗಿ ಕೋರ್ಟಿನಲ್ಲಿ ಇತ್ಯಾರ್ಥವಾಯಿತು. ಇದರಂತೆ ಇನ್ನೊಂದು ಉದಾಹರಣೆಗೆ ಮೇಷಲಗ್ನದ ಚತುರ್ಥಾಧಿಪತಿಯಾದ ಚಂದ್ರನು ಅಷ್ಟಮದಲ್ಲಿ ನೀಚರಾಶಿಯುವನಾಗಿ ಷಷ್ಟದಲ್ಲಿದ್ದ ಶನಿಯಿಂದ ನೋಡಲ್ಪಡುತ್ತಿದ್ದ ಜಾತಕನು ತಾಯಿಯ ಆಸ್ತಿಗಾಗಿ ತಾಯಿಯ ಸಂಗಡ ಕೋರ್ಟಕಟ್ಟೆ ಹತ್ತಿದ್ದಾನೆ.

## ಆರ್ಥಿಕ ವಿಷಯವಾಗಿ ಮುಂಜಾಗ್ರತೆ ಕ್ರಮಗಳು

ಆರ್ಥಿಕ ವಿಷಯವಾಗಿ ಯಾವ ಯಾವ ಮುಂಜಾಗ್ರತೆ ಕ್ರಮ ಕೈ ಕೊಳ್ಳಬೇಕೆಂಬುವದನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

1) ಯಾರ ಜಾತಕದಲ್ಲಿ ದಶಮಸ್ಥಾನದಲ್ಲಿ ನಿರ್ಬಲ. ದುರ್ಬಲ ಗ್ರಹವಿದ್ದು. ಗ್ರಹಗಳಿದ್ದು ದಶಮೇಶ ಹಾಗೂ ಸೂರ್ಯ ಈ ಮೂರು ದುರ್ಬಲ ನಿರ್ಬಲ ಇದ್ದರೆ ತಂದೆಯಿಂದ ದ್ರವ್ಯಾನುಕೂಲತೆ ಆಗುವುದಿಲ್ಲ ಆದುದರಿಂದ

ಇಂಥ ಜಾತಕನು ಅವಶ್ಯ ತಂದೆಯೊಂದಿಗೆ ಮಧುರ ಸ್ನೇಹ ಸಂಬಂಧ ಬೆಳೆಸಿಕೊಳ್ಳಬೇಕು ವಿನಾಕಾರಣ ಮನಸ್ತಾಪಕ್ಕೆ ಅವಕಾಶ ಕೊಡಬಾರದು. ತಂದೆಯು ಸ್ವತಃ ಗಳಿಸಿದ ಆಸ್ತಿ ಹಾಗೂ ಹಣಕ್ಕಾಗಿ ತಗಾದೆ ಮಾಡಬಾರದು ಕೋರ್ಟಿನ ಕಟ್ಟೆ ಹತ್ತಿರದೆ ರಾಜಿಯಿಂದ ಮನಪರಿಸುವ ಕ್ರಿಯೆಯಿಂದ ಕಾರ್ಯಸಾಧಿಸಿಕೊಳ್ಳಬೇಕು. ಇದಕ್ಕೊಂದು ಉದಾಹರಣೆ ಕೊಟ್ಟು ಸ್ಪಷ್ಟೀಕರಿಸುವೆ. ನಮ್ಮ ಬಳಿಗೆ ಬಂದ ಒರ್ವರು ವೃಶ್ಚಿಕ ಲಗ್ನದ ತುಲಾರಾಶಿಯು ವ್ಯಯದಲ್ಲಿ ರವಿ ಇದ್ದು ದಶಮದಲ್ಲಿ ನೀಚ ರಾಶಿಯ ಶನಿ ಇದ್ದು ಚತುರ್ಥದಲ್ಲಿ ಮಂಗಳನಿದ್ದ ಜಾತಕನು ತಂದೆಯೊಂದಿಗೆ ಮನಸ್ತಾಪವಾಗಿ ಕೊಲೆಯೊಂದಿಗೆ ಸಮಾಪ್ತಿ ಆಯಿತು. ಆದುದರಿಂದ ರವಿ ಹಾಗೂ ದಶಮೇಶ ನಿರ್ಬಲರಿದ್ದ ಜಾತಕನು ತಂದೆಯೊಂದಿಗೆ ಮನಸ್ತಾಪಕ್ಕೆ ಅವಕಾಶ ಕೊಡಬಾರದು.

2) ಯಾರ ಜಾತಕದಲ್ಲಿ ಚತುರ್ಥದಲ್ಲಿ ದುರ್ಬಲ, ನಿರ್ಬಲ ಗ್ರಹವಿದ್ದು, (ಗ್ರಹಗಳಿದ್ದು) ಚತುರ್ಥೇಶ ಹಾಗೂ ಚಂದ್ರ ದುರ್ಬಲ ನಿರ್ಬಲರಿದ್ದ ಜಾತಕನಿಗೆ ತಾಯಿಯಿಂದ ಆರ್ಥಿಕ ಅನುಕೂಲತೆಯಾಗುವುದಿಲ್ಲ ಆದುದರಿಂದ ಇಂಥ ಜಾತಕರು ತಾಯಿಯ ಸಂಗಡ ಗೌರವಭಾವನೆಯಿಂದ ವರ್ತಿಸಬೇಕು. ವಿನಾಕಾರಣ ಮನಸ್ತಾಪಕ್ಕೆ ಎಡೆಕೊಡಕೂಡದು ಹಾಗೂ ತಾಯಿಗೆ ಸಂಬಧಿಸಿದ ಆಸ್ತಿ ದೊರಕಿಸಲು ಕೋರ್ಟಿಗೆ ಹೋಗಕೂಡದು ಹಾಗೆಯೇ ತೃತೀಯದಲ್ಲಿ ದುರ್ಬಲ ನಿರ್ಬಲ ಗ್ರಹವಿದ್ದು, ತೃತಿಯೇಶನೂ ದುರ್ಬಲ ನಿರ್ಬಲನಿದ್ದ ಜಾತಕನು ಸಹೋದರ–ಸಹೋದರಿಯರಿಂದ ಆರ್ಥಿಕ ಹಾನಿ ಆಗುತ್ತದೆ. ಅದಕ್ಕಾಗಿ ವಿನಾಕಾರಣ ಮನಸ್ತಾಪಕ್ಕೆ ಎಡೆಕೊಡಕೂಡದು.

3) ಯಾರ ಜಾತಕದಲ್ಲಿ ಪಂಚಮಸ್ಥಾನ ಹಾಗೂ ಅಷ್ಟಮಸ್ಥಾನಗಳಲ್ಲಿ ದುರ್ಬಲ, ನಿರ್ಬಲ ಗ್ರಹಗಳಿದ್ದು ಪಂಚಮೇಶ, ಅಷ್ಟಮೇಶ, ಭಾಗ್ಯೇಶ ಚತುರ್ಥೇಶರು ದುರ್ಬಲ, ನಿರ್ಬಲರೂ ಇದ್ದ ಜಾತಕನಿಗೆ ಆಕಸ್ಮಿಕ ಧನಪ್ರಾಪ್ತಿ ಆಗುವುದಿಲ್ಲ. ಅದಕ್ಕಾಗಿ ಇವರು ದತ್ತಕ, ವಾರ್ಸಾ, ಬಕ್ಷೀಸ, ಮೃತ್ಯುಪತ್ರ ಸಂಬಂಧಿಸಿದ ವ್ಯಾಜ್ಯಗಳಿಗೆ ಕೈ ಹಾಕಬಾರದು ಹಾಗೂ ಲಾಟರಿ, ರೇಸು, ಭೂಗತ ಮೊದಲಾದವುಗಳಿಂದ ಹಣಪಡೆಯಲುಪ್ರಯತ್ನಿಸಬಾರದು.

4) ಯಾರ ಜಾತಕದಲ್ಲಿ ದ್ವಿತೀಯ, ಚತುರ್ಥ, ದಶಮ ಈ ಸ್ಥಾನಗಳಲ್ಲಿ ದುರ್ಬಲ ಗ್ರಹಗಳಿದ್ದು ದ್ವಿತೀಯೇಶ, ಚತುರ್ಥೇಶ, ದಶಮೇಶರು ದುರ್ಬಲ

ನಿರ್ಬಲರಿದ್ದ ಜಾತಕರಿಗೆ ಪಿತ್ರಾರ್ಜಿತ ಸೌಖ್ಯ ಸಿಗುವುದಿಲ್ಲ, ಅವರಕ್ಕಾಗಿ ಪಿತ್ರಾರ್ಜಿತ ಪಡೆಯಲು ಪ್ರಯತ್ನಿಸುವುದು ವ್ಯರ್ಥವು.

5) ಯಾರ ಜಾತಕದಲ್ಲಿ ಶನಿದೃಷ್ಟಿತ ಚಂದ್ರನಿದ್ದು, ಷಷ್ಠೇಶ ಚತುರ್ಥೇಶರು ನಿರ್ಬಲ ದುರ್ಬಲರಿದ್ದ ಜಾತಕನಿಗೆ ಕಳವು-ತುಡುಗುಗಳ ಭೀತಿ ಬಹಳ ಆದುದರಿಂದ ಇಂಥ ಜಾತಕರು ಆದಷ್ಟು ನಗದು ಹಣವನ್ನು ತೆಗೆದು ಕೊಂಡು ಪ್ರವಾಸಮಾಡಬಾರದು.

6) ಯಾರ ಜಾತಕದಲ್ಲಿ ಶನಿದೃಷ್ಟಿತ ಮಂಗಳನಿದ್ದು ಷಷ್ಠೇಶ ಚತುರ್ಥೇಶರು ನಿರ್ಬಲ ದುರ್ಬಲರಿದ್ದು ಜಾತಕನಿಗೆ ಕಳವು ತುಡುಗುಗಳಿಗಿಂತ ದರೋಡೆ ಭೀತಿ ಬಹಳ ಇಂಥವರು ಏಕಾಂಗಿಯಾಗಿ ಪ್ರವಾಸ ಕೈ ಕೊಳ್ಳ ಬಾರದು.

7) 60ನೇ ಪುಟದಿಂದ 70ನೇ ಪುಟದವರೆಗೆ ವಿವರಿಸಿದಂತೆ ವಿಭಿನ್ನ ಲಗ್ನಗಳ ಯೋಗಕಾರಕ ಗ್ರಹಗಳು ಬಲಾಢ್ಯರಿದ್ದು ರವಿ ಚಂದ್ರರೂ ಬಲಾಢ್ಯರಿರುವ ಜಾತಕನಿಗೆ ಬ್ಯಾಂಕುಗಳಿಂದಾಗಲೀ ಫೈನಾನ್ಸ್ ಕಂಪನಿ ಮುಖಾಂತರವಾಗಲೀ ಸ್ನೇಹಿತರಿಂದಾಗಲಿ ಆಪ್ತೇಷ್ಟರಿಂದಾಗಲಿ ಸಾಲರೂಪ ದಿಂದಾಗಲೀ ಕೈಗಡ ರೂಪದಿಂದಾಗಲೀ ವಸ್ತುಗಳ ಅಡವಿನ ರೂಪದಿಂದಾಗಲಿ ಸಹಾಯ ರೂಪದಿಂದಾಗಲೀ ದ್ರವ್ಯಾನುಕೂಲತೆಯಾಗುತ್ತದೆ.

8) ವಿಭಿನ್ನ ಲಗ್ನಗಳಿಗಿರುವ ಯೋಗಕಾರಕ ಗ್ರಹಗಳು(60ನೇ ಪುಟದಿಂದ 70ನೇ ಪುಟದವರೆಗೆ ವಿವರಿಸಿದಂತೆ) ದುರ್ಬಲ ನಿರ್ಬಲರಿದ್ದರಲು ಚಂದ್ರರೂ ದುರ್ಬಲ ನಿರ್ಬಲರಿಂದ ಜಾತಕನಿಗೆ ಬ್ಯಾಂಕಿನಿಂದಾಗಲೀ ಆಪ್ತೇಷ್ಟ ರಿಂದಾಗಲೀ ಸ್ನೇಹಿತರಿಂದಾಗಲೀ ದ್ರವ್ಯಾನುಕೂಲತೆಯಾಗುವದು ಕಠಿಣವು ಇವರು ಸ್ವ ಸಾಮರ್ಥ್ಯದಿಂದ ಪರಿಶ್ರಮದಿಂದ ಹಣ ಕೂಡಿಟ್ಟು ಉದ್ದೇಶಿತ ಕಾರ್ಯಕೈಕೊಳ್ಳಬೇಕೇ ವಿನಃ ಮೇಲೆ ಬರೆದ ಹಣಕಾಸಿನ ಸಂಸ್ಥೆಯ ಮೇಲೆ ಅವಲಂಬಿಸಬಾರದು.

5) ಯಾರ ಜಾತಕದಲ್ಲಿ ರವಿ, ಚಂದ್ರ, ಚತುರ್ಥೇಶ, ಪಂಚಮೇಶ ದುರ್ಬಲ ನಿರ್ಬಲರಿರುವರೋ ಇಂಥ ಜಾತಕರು ನಿವೃತ್ತಿಯ ನಂತರ ಬಂದ

ಮೊಬಲಗನ್ನು ಸರಕಾರಿ ಹಣಕಾಸಿನ ಸಂಸ್ಥೆಯಲ್ಲಿ ಮಾತ್ರ ತೊಡಗಿಸಬೇಕು. ಹೆಚ್ಚಿನ ಬಡ್ಡಿ ಆಸೆಗಾಗಿ ಖಾಸಗಿಸಂಸ್ಥೆ, ಖಾಸಗಿವ್ಯಕ್ತಿ ಇಲ್ಲವೇ ಆಪ್ತೇಷ್ಟರಿಗೆ. ಸ್ನೇಹಿತರಿಗೆ ಸಾಲರೂಪದಿಂದ ಹಣಕೊಟ್ಟರೆ ಆ ಹಣಕ್ಕೆ ಕೃಷ್ಣಾರ್ಪಣವೆನ್ನಬೇಕಾಗುತ್ತದೆ.

10) ರವಿ, ಮಂಗಳರು ಬಲಾಢ್ಯರಿದ್ದು ಚಂದ್ರನು ಪುರುಷರಾಶಿಯಲ್ಲಿರುವ ಅಗ್ನಿರಾಶಿಯಲ್ಲಿರುವ ಜಾತಕನು ಸಾಲ ಪಡೆಯುವಾಗ ಇಲ್ಲವೆ ಕೊಟ್ಟ ಸಾಲ ವಸೂಲುಮಾಡುವಾಗ ಸಮಕ್ಷಮ ಭೆಟ್ಟಿಯಿಂದ ಕೆಲಸ ಕೈಗೂಡುತ್ತದೆ. ಆದರೆ ಯಾರ ಜಾತಕದಲ್ಲಿ ಬುಧ, ಗುರುಗಳು ಬಲಾಢ್ಯರಿದ್ದು ಚಂದ್ರನು ವಾಯು ಇಲ್ಲವೇ ಜಲರಾಶಿಯಲ್ಲಿರುವ ಜಾತಕನು ಸಾಲ ಪಡೆಯಲು ಅಥವಾ ಸಾಲಕೊಟ್ಟಹಣ ತಿರುಗಿ ಪಡೆಯಲು ಪತ್ರವ್ಯವಹಾರದಿಂದ ಕೆಲಸ ಕೈ ಕೊಳ್ಳಬೇಕು.

## ಆರ್ಥಿಕ ವಿಷಯವಾಗಿ ಪರಿಹಾರದ ಕ್ರಮಗಳು

ಯಾರೊಬ್ಬರು ಆರ್ಥಿಕ ವಿಷಯವಾಗಿ ಯಾವ ಯಾವ ಮುಂಜಾಗ್ರತೆ ಕ್ರಮಗಳನ್ನು ಕೈ ಕೊಳ್ಳಬೇಕೆಂಬುದನ್ನು ಈವರೆಗೆ ವಿವರಿಸಿದ್ದಾಯಿತು. ಇನ್ನು ಆರ್ಥಿಕ ಸುಧಾರಣೆಗಾಗಿ, ದ್ರವ್ಯಾನುಕೂಲತೆಗಾಗಿ ಸಾಲ ಪಡೆಯುವುದಕ್ಕಾಗಿ ಸಾಲ ಪರಿಹಾರಕ್ಕಾಗಿ ಯಾವ ಯಾವ ಉಪಾಸನೆ, ವ್ರತ, ಜಪ, ಧ್ಯಾನ, ಸ್ತೋತ್ರ, ಪಠಣ, ಪಾರಾಯಣಗಳನ್ನುಕೈ ಕೊಳ್ಳಬೇಕೆಂಬುದನ್ನು ಪರಿಶೀಲಿಸುವಾ.

ಪ್ರಪ್ರಥಮವಾಗಿ ಯಾವುದೇ ವ್ರತ, ಉಪಾಸನೆ ಸ್ತೋತ್ರ ಜಪಾದಿಗಳನ್ನು ಕೈ ಕೊಳ್ಳುವ ಪೂರ್ವದಲ್ಲಿ ಇದೇ ಅಧ್ಯಾಯದ ಪುಟ 49-50ರಲ್ಲಿ ವಿವರಿಸಿದಂತೆ ಅನುಸರಿಸಬೇಕು.

ಈ ಆರ್ಥಿಕ ಪರಿಹಾರ ಕ್ರಮಗಳನ್ನು ಯಾರೇ ಕೈಗೊಂಡರೂ ದ್ರವ್ಯಾನುಕೂಲತೆ ಯಾಗುವುದರಲ್ಲಿ ಸಂದೇಹವಿಲ್ಲ. ಆದಾಗ್ಯೂ ಇದೇ ಅಧ್ಯಾಯದ

60ನೇ ಪುಟದಿಂದ 70ನೇ ಪುಟದವರೆಗೆ ವಿವರಿಸಿದಂತೆ ವಿಭಿನ್ನ ಲಗ್ನಗಳಿರುವ ಯೋಗಕಾರಕ ಗ್ರಹಗಳು ದುರ್ಬಲ ನಿರ್ಬಲರಿರುವ ಜಾತಕದವರಂತೂ ಈ ಕೆಳಗೆ ಬರೆದ ವ್ರತ, ಉಪಾಸನೆ, ಧ್ಯಾನ, ಜಪ, ಪಠಣ, ಪಾರಾಯಣಗಳನ್ನು ಕೈಕೊಳ್ಳುವದರಿಂದ ಆರ್ಥಿಕ, ಸಂಕಟಗಳು ದೂರಾಗುತ್ತವೆ, ಸಾಲ ಪರಿಹಾರ ವಾಗುತ್ತವೆ, ಸಾಲಸಿಗುತ್ತದೆ, ಸ್ವ ಸಾಮರ್ಥ್ಯದಿಂದ ಹಣ ಸಂಪಾದಿಸುವ ಶಕ್ತಿ ವರ್ಧಿಸುತ್ತವಲ್ಲದೇ ಪಿತ್ರಾರ್ಜಿತ.ಆಕಸ್ಮಿಕ ಧನಪ್ರಾಪ್ತಿಯೂ ಆಗುತ್ತದೆ.

1) ಪ್ರತಿ ಶುಕ್ರವಾರ ಸಾಯಂಕಾಲ ಇಲ್ಲವೇ ರಾತ್ರೀ ಸಮಯದಲ್ಲಿ ಮನೆಯಲ್ಲಿರುವ ಲಕ್ಷ್ಮೀಮೂರ್ತಿ ಅಥವಾ ಗೋಡೆಗೆ ಅಂಟಿಸಿದ ಲಕ್ಷ್ಮೀ ಫೋಟೋಕ್ಕಾಗಲೀ ಪೂಜೆಮಾಡಿ ಶ್ರೀಸೂಕ್ತ ಪಠನೆ ಮಾಡಿ ಪುಠಾಣಿ ಕೊಬ್ಬರಿ ಸಕ್ಕರೆ ನೈವೇದ್ಯಮಾಡಿ ಪ್ರಸಾದ ಸ್ವಿಕರಿಸಿ ಆಸಕ್ತರಿಗೂ ವಿತರಿಸಬೇಕು.

2) ಪ್ರತಿನಿತ್ಯ ಶ್ರೀ ಲಲಿತಾ ಸಹಸ್ರ ನಾಮ ಪಠಿಸಬೇಕು. ಪ್ರತಿನಿತ್ಯ ಶ್ರೀ ಚಕ್ರಪೂಜೆ ಮಾಡಬೇಕು. ಶ್ರೀ ಲಕ್ಷ್ಮೀ ಸ್ತೋತ್ರ, ಶ್ರೀ ಸೂಕ್ತ, ಪುರುಷ ಸೂಕ್ತ, ಶ್ರೀ ಮಹಾಲಕ್ಷ್ಮೀ ಕವಚ ಶ್ರೀ ಲಕ್ಷ್ಮೀ ಹೃದಯಂ, ಶ್ರೀ ನಾರಾಯಣ ಹೃದಯಂ ಇವುಗಳನ್ನು ಅಥವಾ ಇವುಗಳಲ್ಲಿ ಯಾವುದಾದ ರೊಂದನ್ನು ನಿತ್ಯ ಪಠಣ, ಶ್ರವಣ.ಪರಾಯಣದಿಂದ ದ್ರವ್ಯಾನುಕೂಲತೆಯಾಗಿ ಆರ್ಥಿಕ ಮುಗ್ಗಟ್ಟು ದೂರಾಗುತ್ತದೆ.

3) ಕಳೆದುಹೋದ ದ್ರವ್ಯ ಪಡೆಯಲು ಸಾಲಕೊಟ್ಟ ಹಣ ಪುನಃ ಪಡೆಯಲು ಸಾಲಪಡೆಯಲು ಸ್ನೇಹಿತರ ಪ್ರೀತಿ ಸಂಪಾದಿಸಲು ರಾಮಾಯಣದ ಕಿಷ್ಕಿಂದಾಕಾಂಡದ ಪಠಣ. ಶ್ರವಣ, ಪಾರಾಯಣದಿಂದ ಉದ್ದೇಶಿತ ಫಲ ಲಭಿಸುತ್ತದೆ.

4) ಲಕ್ಷ್ಮೀ ಸೂಕ್ತವನ್ನು ಪ್ರತಿನಿತ್ಯ 11 ಬಾರಿ ಪಠಿಸಿದಲ್ಲಿ ಖಂಡಿತ ವಾಗಿ ಆರ್ಥಿಕ ಸುಧಾರಣೆಯಾಗುತ್ತದೆ.

5) ಪ್ರತಿನಿತ್ಯ ವೆಂಕಟೇಶ ಸ್ತೋತ್ರವನ್ನು ಪಠಿಸಿದಲ್ಲಿ ಆರ್ಥಿಕ ಸುಧಾರಣೆಯಾಗುತ್ತದೆ. ಇದರಂತೆ ಶತಚಂಡಿ, ನವಚಂಡಿ ವಿಧಾನಗಳಿಂದ ಆರ್ಥಿಕ ತಾಪತ್ರಯಗಳು ದೂರಾಗುತ್ತವೆ.

6] ವಿಷ್ಣು ಸಹಸ್ರ ನಾಮವನ್ನು ನಿತ್ಯ ಪಠಿಸಿದಲ್ಲಿ ಆರ್ಥಿಕ ಅಡಚಣೆ ಉಂಟಾಗುವುದಿಲ್ಲ.

## ಸಾಲ ಪರಿಹಾರಕ್ಕಾಗಿ ಮಾಡುವ ವ್ರತಗಳು

1] ನಿತ್ಯಪವಮಾನ ಹೋಮ ಮಾಡಬೇಕು. ಅಥವಾ ಪವಮಾನಾಭಿಷೇಕ ಮಾಡಬೇಕು.

2] ಮಂಗಳನ ಜಪ ನಿತ್ಯ ಮಾಡಬೇಕು. ಮಂಗಳ ಹರಳು ಧರಿಸ ಬೇಕು. ಮಂಗಳನಿಗೆ ಸಂಬಂಧಿಸಿದ ವಸ್ತ್ರ, ಧಾನ್ಯವಸ್ತುಗಳನ್ನು ಸತ್ಪಾತ್ರರಿಗೆ ದಾನ ಮಾಡಬೇಕು.

3] ಸಂಕಷ್ಟ ಚತುರ್ಥಿವ್ರತ ಆಚರಿಸಬೇಕು.

4] ಪ್ರತಿನಿತ್ಯ ರುದ್ರಾಭಿಷೇಕ ಮಾಡಬೇಕು ಹಾಗೂ ರುದ್ರ ಪಠಿಸಬೇಕು.

5] ಪ್ರತಿ ಮಂಗಳವಾರ ಅಥವಾ ಶುಕ್ರವಾರ ದಿನದಂದು ಶ್ರೀ ದುರ್ಗಾ ಸಪ್ತಶತಿಯನ್ನು ಸಂಪೂರ್ಣ ಪಠಿಸಿ, ಸಾಯಂಕಾಲ ಅಥವಾ ರಾತ್ರಿ, ಸಮಯದಲ್ಲಿ ದುರ್ಗಾಗುಡಿಗೆ ತೆಂಗಿನಕಾಯಿ ಒಡಿಸಿ ದೇವಿಯ ದರ್ಶನ ಮಾಡ ಬೇಕು. ಅಥವಾ ಮನೆಯಲ್ಲಿಯೇ ದುರ್ಗಾದೇವಿಯ ಮೂರ್ತಿಯನ್ನು ಶಾಸ್ತ್ರೋಕ್ತವಾಗಿ ಪ್ರಾಣಪ್ರತಿಷ್ಠಾನ ವಿಧಾನದಿಂದಸ್ಥಾಪಿಸಿ ಪ್ರತಿ ಮಂಗಳವಾರ ಅಥವಾ ಶುಕ್ರವಾರ ಯಾವುದೇ ದಿನದಂದು ದುರ್ಗಾಸಪ್ತಶತಿಯು ಸಂಪೂರ್ಣಪಠಿಸಿ ಫಲ, ಪುಷ್ಪ ಕಾಯಿ ವಸ್ತ್ರಗಳೊಂದಿಗೆ ದೇವಿಯನ್ನು ಪೂಜಿಸಿ ಪ್ರಾರ್ಥಿಸಬೇಕು. ಹೀಗೆ ಮೂರುವರುಷ ಮಾಡಿದಲ್ಲಿ ಖಂಡಿತವಾಗಿ ಸಾಲ ಪರಿಹಾರವಾಗುತ್ತದೆ. ಸಪ್ತಶತಿ ಪಾರಾಯಣ ಅಂದರೆ 700 ಶ್ಲೋಕದ ಈ ಮಂತ್ರವನ್ನು ಒಳುದಿನ ಪಾರಾಯಣ ಮಾಡಿದರೂ ಕೂಡ ಸಂಪೂರ್ಣ ಸಾಲ ಪರಿಹಾರವಾಗುತ್ತದೆ.

6) ಸಂಪುಟಿತ ವಿಧಾನದಿಂದ ಸಪ್ತಶತಿಯನ್ನು ಪಠಿಸಬೇಕು

7) ದೇವಿ ಕವಚ ಪಠಿಸಬೇಕು.

8) ಹನುಮಾನ ಚಾಲಿಸ ನಿತ್ಯ ಪಠಿಸಬೇಕು. ಹೀಗೆ ಮೇಲೆ ಬರೆದ ಯಾವುದೊಂದು ವ್ರತ ಕೈಕೊಂಡರೂ ಮೂರು ವರುಷದಲ್ಲಿ ಸಾಲದಿಂದ ಮುಕ್ತರಾಗುವರು.

# ತೃತೀಯ ದಳ

## ಶಿಕ್ಷಣ—ಪರಿಹಾರ

ಪರಿಹಾರ ಜ್ಯೋತಿಷ್ಯದ ಮೂರನೇಯ ಅಧ್ಯಾಯದಲ್ಲಿ ಶಿಕ್ಷಣದ ಬಗೆಗೆ ಪ್ರಸ್ತಾಪಿಸುತ್ತೇನೆ. ಯಾರೊಬ್ಬರ ಮನೆಯಲ್ಲಿ ಮಗುವಿನ ಜನನವಾದ ಕೂಡಲೆ ಆ ಮನೆಯ ತಂದೆ-ತಾಯಿಗಳು ಪಾಲಕರು ಮನೆಯಲ್ಲಿಯ ಹಿರಿಯರು ಜ್ಯೋತಿಷಿಗಳ (ಧಾವಿಸಿ) ಬಳಿಗೆ ಬಂದು ಮಗುವಿನ ಜನನದ ಸಮಯ ಹೇಗಿದೆ ಎಂದು ವಿಚಾರಿಸುತ್ತಾರೆ. ಇದೇ ಗ್ರಂಥದ 36ನೇ ಪುಟದಿಂದ 38ನೇ ಪುಟದ ವರೆಗೆ ವಿವರಿಸಿದಂತೆ ಜನನ ಸಮಯದಲ್ಲಿಯ ನಕ್ಷತ್ರಾದಿ ಯಾವುದಾದರು ದೋಷಗಳಿದ್ದರೆ ಆ ದೋಷ ಪರಿಹಾರಕ್ಕಾಗಿ ಯಾವ ಯಾವ ಶಾಂತಿಯನ್ನು ಎಂದು ಮಾಡಬೇಕು ಎಂದು ವಿಚಾರಿಸುತ್ತಾರೆ. ಆ ಬಳಿಕ ಮಗುವಿನ ನಾಮಕರಣ ಎಂದು ಮಾಡಬೇಕೆಂಬುದರ ಶುಭ ಮುಹೂರ್ತದ ಬಗೆಗೆ ವಿಚಾರಿಸುತ್ತಾರೆ. ಅದಕ್ಕೆ ಉತ್ತರಕೊಟ್ಟನಂತರ ಮಗುವಿನ ಜಾತಕ ಬರೆಯಲು ಭಿನ್ನವಿಸುತ್ತಾರೆ. ಇಲ್ಲಿಗೆ ಪಾಲಕರ ಕೆಲಸವಾಗಿಯಿತು.

ಇನ್ನು ಜ್ಯೋತಿಷಿಗಳು ಮಗುವಿನ ಜಾತಕತೆಗೆದು ಫಲ ಬರೆಯುವಾಗ ಮೊದಲು ಮಗುವಿನ ಆರೋಗ್ಯದಬಗೆಗೆ ಬರೆದು ಆಬಳಿಕ ಮಗುವಿನ ಶಿಕ್ಷಣದ ಬಗೆಗೆ ಆ ಬಳಿಕ ಉದ್ಯೋಗದ ಬಗೆಗೆ ಆ ಬಳಿಕ ವಿವಾಹದ ಬಗೆಗೆ ಮನೆಯ ಬಗೆಗೆ ಹೀಗೆ ಕ್ರಮಬದ್ಧವಾಗಿ ಜಾತಕದ ಫಲ ಬರೆಯುವ ಪದ್ಧತಿ ಇದೆ. ಹಾಗೆ ನೋಡಿದರೆ ಪರಿಹಾರ ಜ್ಯೋತಿಷ್ಯದ ಈ ಗ್ರಂಥದಲ್ಲಿ **"ಶಿಕ್ಷಣ ಪರಿಹಾರದ"** ಅಧ್ಯಾಯವು ಎರಡನೇ ಅಧ್ಯಾಯವಾಗಿ ಬರೆಯಬೇಕಾಗಿತ್ತು. ಆದರೆ ಜ್ಯೋತಿಷಿಗಳ ಬಳಿಗೆ ಬರುವವರು ಹೆಚ್ಚಾಗಿ ಆರ್ಥಿಕದ ವಿಷಯದ ಬಗೆಗೆ ಪ್ರಶ್ನೆಗಳನ್ನು ಕೇಳುವುದರಿಂದ ಆರ್ಥಿಕ ಪರಿಹಾರವನ್ನು ಎರಡನೇ ಅಧ್ಯಾಯ ವಾಗಿ ಶಿಕ್ಷಣ ಪರಿಹಾರವನ್ನು ಮೂರನೇಯ ಅಧ್ಯಾಯವಾಗಿ ಬರೆಯುತ್ತಿರುವೆ

ಶಿಕ್ಷಣವು ಮಾನವನ ದೈಹಿಕವಾಗಿ, ಮಾನಸಿಕವಾಗಿ ಸರ್ವತೋಮುಖ ವಾಗಿ ವಿಕಾಸಗೊಳ್ಳುವ ಸಾಧನವಾಗಿದೆ. ಆದರೆ ಇಂದು ಶಿಕ್ಷಣವು ಮಾನವನ ಭವಿಷ್ಯ ನಿರೂಪಣೆಯ ಒಂದು ಮಹತ್ವದ ಉಪಕರಣವೆಂದು ಪರಿಗಣಿಸಲಾಗಿದೆ ಇಷ್ಟೇ ಅಲ್ಲ ಶಿಕ್ಷಣವು ಜಾತಕನ ಜೀವನದ ಭದ್ರತೆಗೆ ಸಹಾಯವಾಗಿದೆ. ಅಂತೆಯೇ ಶಿಕ್ಷಣ ಪಡೆಯಲು ಜನರ ಒಲವು ಈ ಹಿಂದಿನಗಿಂತಲೂ ಹೆಚ್ಚಾಗಿದೆ ಅದರಂತೆ ಶಿಕ್ಷಣಕ್ಕೆ ಸಂಬಂಧಿಸಿದ ಪ್ರಶ್ನೆ-ಸಮಸ್ಯೆಗಳೂ ಹೆಚ್ಚಾಗಿವೆ. ಆದುದ ರಿಂದ ಶಿಕ್ಷಣದ ಬಗೆಗೆ ಪ್ರಶ್ನೆ-ಸಮಸ್ಯೆಗಳಾವವು? ಎಂಬುದನ್ನು ಮೊದಲು ವಿವರಿಸಿ ಆ ಬಳಿಕ ಅವುಗಳಿಗೆ ಮುಂಜಾಗ್ರತೆಯ ಕ್ರಮಗಳನ್ನು ಪರಿಹಾರ ಕ್ರಮಗಳನ್ನು ಪರಿಶಿಲಿಸೋಣ.

ಕೆಲವಿದ್ಯಾರ್ಥಿಗಳು ತಾವು ಪ್ರವೇಶಪಡೆಯಬೇಕೆಂಬ ಕೋರ್ಸಿನವಿಷಯ ವಾಗಿಯೂ ಶಾಲೆ, ಕಾಲೇಜುಗಳ ವಿಷಯವಾಗಿಯೂ ಪ್ರವೇಶ ಲಭಿಸುವುದೇ ಎಂದು ವಿಚಾರಿಸುತ್ತಾರೆ. ಈ ಪ್ರವೇಶದ ಪ್ರಶ್ನೆ ಇಷ್ಟು ಭೂತಾಕಾರವಾಗಿ ಬೆಳೆದಿದೆ.ಎಂದರೆ ಮಗುವಿನ 3ನೇ ವರುಷದಿಂದಲೇ ಪ್ರವೇಶದ ಪ್ರಶ್ನೆಉದ್ಭವಿ ಸುತ್ತದೆ. ಅಷ್ಟೆ ಏಕೆ ಮುಂಬಯಿ, ಪುಣೆ, ಬೆಂಗಳೂರ ಧಾರವಾಡಗಳಂಥ ದೊಡ್ಡ ದೊಡ್ಡ ನಗರ ಮಹಾನಗರ ಶಹರ ಪುರ ಪಟ್ಟಣಗಳಲ್ಲಿ ಮಗುವಿನ ಎರಡನೇ ವರುಷದಿಂದಲೇ ಪ್ರವೇಶದ ಸಂಬಂಧ ಮುಂಗಡ ಹಣವನ್ನು ಕಾಣಿಕೆ ರೂಪದಿಂದ ತೆತ್ತಿ ಸ್ಥಳ ಕಾಯ್ದಿರಿಸುತ್ತಾರೆ. ಇಷ್ಟೇ ಅಲ್ಲ ಲೋವರ ಕೆಜಿ, ಅಪ್ಪರ ಕೆಜಿ ಬಾಲವಾಡಿಗಳಿಂದ ನರ್ಸರಿ ಶಾಲೆಗಳಿಗೆ ಮಕ್ಕಳನ್ನು ಸೇರಿ ಸಲು ಅರ್ಥಾತ ಪ್ರವೇಶ ದೊರಕಿಸುವ ಪೂರ್ವದಲ್ಲಿ 2-3 ವರುಷದ ಮಕ್ಕಳ ಪರೀಕ್ಷೆತೆಗೆದುಕೊಳ್ಳುತ್ತಾರೆ. ಅದಕ್ಕಾಗಿ 2-3 ವರುಷ ಮಕ್ಕಳಿಗೆ ಮನೆ ಯಲ್ಲಿ ಪರೀಕ್ಷೆಯ ತಯಾರಿ ಮಾಡಬೇಕಾಗುತ್ತದೆ. ಇದಕ್ಕೂ ಮಹತ್ವದ ವಿಷಯುವೆಂದರೆ ತಮ್ಮ 3ನೇ ವರುಷದ ಮಗುವಿನ ನರ್ಸರಿ ಪ್ರವೇಶ ಪಡೆ ಯಲು ಆ ಮಗುವಿನ ತಂದೆ-ತಾಯಿಗಳು ಇಲ್ಲವೇ ಪಾಲಕರು ಕೂಡ ಪರೀಕ್ಷೆಗೆ ಒಳಗಾಗುತ್ತಾರೆ. ಈ ಪ್ರವೇಶದ ಪ್ರಶ್ನೆ ಬಾಲವಾಡಿ ಶಿಕ್ಷಣದಿಂದ ಹಿಡಿದು ಪ್ರಾಥಮಿಕ ಮಾಧ್ಯಮಿಕ, ಪ್ರೌಢ ಶಿಕ್ಷಣ, ಕಾಲೇಜ ಪ್ರವೇಶದವರೆಗೂ ವಿಶ್ವ ವಿದ್ಯಾಲಯಗಳಲ್ಲಿಯ ಶಿಕ್ಷಣದ ಪ್ರವೇಶದವರೆಗೂ ಸಮಸ್ಯೆಯಾಗಿರುತ್ತದೆ.

ಅವರಲ್ಲಿಯೂ ಇಂಗ್ಲಿ ಮಾಧ್ಯಮ ಹಾಗೂ ಕಾನವೆಂಟ ಶಾಲೆಗಳಲ್ಲಿ ಪ್ರವೇಶ ಪಡೆಯಲು ನೂಕು-ನುಗ್ಗಲಾಗಿದೆ. ಅದಕ್ಕೆ ಮಗುವಿನ ತಂದೆ-ತಾಯಿಗಳು ಪಾಲಕರು ಪಡುವ ಬವಣೆ ಮಾಡುವ ಪ್ರಯತ್ನವಾಗಲಿ ಕಾಣಿಕೆ ಮೊದಲಾದವುಗಳ ಬಗೆಗೆ ಬರೆದರೆ ಅದೊಂದು ಉದ್ಗ್ರಂಥವಾಗಬಹುದಾಗಿದೆ. ಒಟ್ಟಿನಲ್ಲಿ ಇಚ್ಛಿಸಿದ ಶಾಲೆ-ಕಾಲೇಜಗಳ ಪ್ರವೇಶ ಪಡೆಯಲು ಮಗುವಿನ 3ನೇ ವರುಷದಿಂದ ಪ್ರಾರಂಭವಾಗಿ ವಿಶ್ವವಿದ್ಯಾಲಯಗಳಲ್ಲಿ ಪಡೆಯುವ ಶಿಕ್ಷಣದವರೆಗೂ ವಿಸ್ತರಿಸುತ್ತದೆ. ಇದು ಜ್ಯೋತಿಷಿಗಳು ಉತ್ತರಕೊಡುವ ಪ್ರಪ್ರಥಮ ಪ್ರಶ್ನೆ ಆ ಬಳಿಕ ಪ್ರಶ್ನೆಗಳ ಸರಮಾಲೆ ಪ್ರಾರಂಭವಾಗುತ್ತವೆ. ಅವುಗಳ ವೈವಿಧ್ಯಗಳನ್ನು ಓದಿರಿ.

ಕೆಲ ತಂದೆ-ತಾಯಿಗಳು ಪಾಲಕರು ತಮ್ಮ ಮಕ್ಕಳು ಇಂಜನಿಯರ ಡಾಕ್ಟರ ಆಗಬೇಕೆಂಬ ಬಲವಾದ ಇಚ್ಛೆಯುಳ್ಳವರಾಗುತ್ತಾರೆ. ಅವರಲ್ಲಿಯೂ ತಂದೆ-ತಾಯಿಗಳು ಡಾಕ್ಟರ ವೃತ್ತಿಯಾಗಿದ್ದರಂತೂ ಮುಗಿದೇ ಹೋಯಿತು. ಶತಾಯ ಗತಾಯ ತಮ್ಮ ಮಕ್ಕಳಿಗೆ ಮೆಡಿಕಲ್ ಸೀಟು ದೊರಕಿಸಲು ಪ್ರಯತ್ನಿಸುತ್ತಾರೆ. ಆಕಾಶ-ಪಾತಾಳ ಒಂದು ಮಾಡುತ್ತಾರೆ. ಕಂಡ ಕಂಡವರ ಕಾಲಿಗೆ ಬೀಳುತ್ತಾರೆ. 10-15ಲಕ್ಷ ಕಾಣಿಕೆ ಕೊಟ್ಟು ಮೆಡಿಕಲ್ ಸೀಟು ಪಡೆಯಲು ಇಚ್ಛಿಸುತ್ತಾರೆ. ಅವರ ಜೀವನದ ಪರಮೋಚ್ಛ ಧ್ಯೇಯವೆಂದರೆ ತಮ್ಮ ಮಗನನ್ನು ಡಾಕ್ಟರರನ್ನಾಗಿ ತಯಾರಿಸಬೇಕು. ತಮ್ಮ ವೃತ್ತಿ ಮುಂದುವರಿಯಬೇಕು ವೃತ್ತಿಗಾಗಿ ತಾವು ತೊಡಗಿಸಿದ ಹಣಕ್ಕೆ ಬಾಧೆ ಬರಬಾರದು ಎಂಬ ಛಲವುಳ್ಳವರಾಗಿರುತ್ತಾರೆ. ಇದು ಡಾಕ್ಟರ ತಂದೆ-ತಾಯಿಗಳಿಗೆ ಮಾತ್ರ ಸೀಮಿತವಿಲ್ಲ ಅಕೌಂಟನ್ಸ್ವೃತ್ತಿಯವರು ತಮ್ಮ ಮಗ ಚಾರ್ಟರ್ಡ ಅಕೌಂಟಂಟ ಆಗಬೇಕು. ಆರ್ಕಿಟೆಕ್ಟ (ಶಿಲ್ಪಿ) ಇಂಜನೀಯರರು ತಮ್ಮ ಮಗ ಆರ್ಕಿಟೆಕ್ಟ ಆಗಬೇಕು. ಉದ್ಯಮದಾರರು ತಮ್ಮ ಮಗ ಇಂಜನೀಯರ ಆಗಬೇಕು. ವಕೀಲರು ವರಮಾನ ಮಾರಾಟ ತೆರಿಗೆಗಳ ಸಲಹೆಗಾರರು ತಮ್ಮ ಮಗ ವಕೀಲರಾಗಿ ಸಲಹೆಗಾರರಾಗಿ ವೃತ್ತಿ ಮುಂದುವರಿಸಬೇಕು ಎಂಬ ಅಭಿಲಾಷೆವಿರುವದು ಸ್ವಾಭಾವಿಕ ಹೌದು. ಇಲ್ಲಿ ತಮ್ಮ "ಮಗ" ಎಂಬ ಶಬ್ದ ಪ್ರಯೋಗ ಮಾಡಿರುವೆ ಮಕ್ಕಳು ಎಂದು ಬರೆದಿಲ್ಲ.

ಏಕೆಂದರೆ ಈ ಬುದ್ಧಿಜೀವಿ ವರ್ಗದವರಿಗೆಲ್ಲ 1–2 ಮಕ್ಕಳಾದ ಬಳಿಕ ಸಂತಾನ ಪ್ರತಿಬಂಧ ಮಾಡಿಕೊಳ್ಳುತ್ತಾರೆ. ಆದುದರಿಂದ ಇರುವ ಒಬ್ಬನೇ ಮಗ ತಮ್ಮ ವೃತ್ತಿ ಮುಂದುವರಿಸಿಕೊಂಡು ಹೋಗಬೇಕು. ಅದಕ್ಕಾಗಿ ಆಯಾ ಕೋರ್ಸಿನ ಪ್ರವೇಶ ಪಡೆಯಲು ಪ್ರಯತ್ನಿಸುತ್ತಾರೆ. ಹಾಗೂ ಪ್ರವೇಶ ಸಿಗುವುದೇ ಹೇಗೆ ಎಂದು ಜ್ಯೋತಿಷಿಗಳನ್ನು ವಿಚಾರಿಸುತ್ತಾರೆ. ಇದರಂತೆ ಕಲಾವಿದರು.ಶಿಕ್ಷಕರು ಕೂಡ ತಮ್ಮ ಮಕ್ಕಳಿಗೆ ತಮ್ಮ ವೃತ್ತಿಯಲ್ಲಿ ಮುಂದುವರಿಸುವ ಅಭಿಲಾಷೆಯುಳ್ಳವರಿರುತ್ತಾರೆ. ಅದಕ್ಕಾಗಿ ಜ್ಯೋತಿಷಿಗಳನ್ನು ಪ್ರಶ್ನಿಸುತ್ತಾರೆ. ಇಲ್ಲಿ ಮಕ್ಕಳು ಎಂಬ ಶಬ್ದ ಪ್ರಯೋಗ ಮಾಡಿರುವೆ. ಏಕೆಂದರೆ ಕಲಾವಿದರಿಗೆ ಶಿಕ್ಷಕರಿಗೆ ಮಕ್ಕಳು ಬಹಳ ಆದುದರಿಂದ ತಮ್ಮ ಮಕ್ಕಳಲ್ಲಿ ಯಾರೊಬ್ಬರಾದರೂ ತಮ್ಮ ವೃತ್ತಿಯನ್ನು ಮುಂದುವರಿಸುವರೋ ಹೇಗೆ ಎಂದು ಪ್ರಶ್ನಿಸುತ್ತಾರೆ.

ಇನ್ನು ಕೆಲವು ತಂದೆ–ತಾಯಿಗಳು ತಮ್ಮ ಮಕ್ಕಳಿಗೆ ನಿರ್ದಿಷ್ಟ ಕೋರ್ಸಿನ ಕಾಲೇಜುಗಳಲ್ಲಿ ಪ್ರವೇಶದ ಬಗೆಗೆ ಪ್ರಶ್ನಿಸಿದರೆ ಕೆಲವರು 3–4 ಕೋರ್ಸುಗಳಲ್ಲಿ ಯಾವುದಾದರೊಂದು ಕೋರ್ಸಿನ ಪ್ರವೇಶ ಪಡೆಯಲು ಪ್ರಯತ್ನಿಸುತ್ತಾರೆ. ಉದಾಹರಣೆಗೆ ಮೆಡಿಕಲ್, ಇಂಜಿನಿಯರಿಂಗ್, ಡೆಂಟಲ್. ಫಾರ್ಮಸಿ ಮೊದಲಾದ ಕೋರ್ಸುಗಳಲ್ಲಿ ಯಾವುದು ತಮ್ಮ ಮಗನಿಗೆ ಸಿಗುತ್ತದೆ, ಯಾವುದು ಉತ್ತಮ, ಯಾವುದರ ಬಗೆಗೆ ಪ್ರಯತ್ನಿಸಬೇಕು ಎಂದು ವಿಚಾರಿಸುತ್ತಾರೆ. ಇಷ್ಟೇ ಅಲ್ಲಾ ತಾವು ಇಚ್ಛಿಸುವ ಪಟ್ಟಣದಲ್ಲಿ ತಮ್ಮ ಮಗನಿಗೆ ಸೀಟು ಲಭಿಸೀತೆ ಎಂದೂ ವಿಚಾರಿಸುತ್ತಾರೆ. ಅದಕ್ಕಾಗಿ ಪ್ರಯತ್ನಿಸುತ್ತಾರೆ. ಇಂಥವರನ್ನು ಭೆಟ್ಟಿಯಾದರೆ ಕೆಲಸವಾದೀತೆ? ಇಂತಿಷ್ಟು ಕಾಣಿಕೆಯಿಂದ ಕೆಲಸವಾದೀತೆ ? ಕೆಲಸವಾಗುವದಾದರೆ ಎಂದು ಅವರನ್ನು ಕಾಣಬೇಕು ಮೊದಲಾಗಿ ಪ್ರಶ್ನಿಸುತ್ತಾರೆ.

ಇನ್ನು ಕೆಲ ಆಯ್.ಎ.ಎಸ್. ಆಯ್.ಪಿ.ಎಸ್. ಆಯ್.ಎಫ್.ಎಸ್. ಕೆ.ಎ.ಎಸ್. ಗಳಂಥ ಅಧಿಕಾರಿ ವರ್ಗದವರು ತಮ್ಮ ಮಕ್ಕಳು ತಮ್ಮಂತೆ ಹುಟ್ಟು ಅಧಿಕಾರಿಗಳಾಗಬೇಕು ಎಂಬ ಒಲವುಳ್ಳವರಿರುತ್ತಾರೆ. ಅದಕ್ಕಾಗಿ

ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ತಮ್ಮ ಮಗ ತೇರ್ಗಡೆ ಆಗಿ ಆಯ್ಕೆ ಆಗುತ್ತಾನೋ ಹೇಗೆ ಎಂದು ವಿಚಾರಿಸುತ್ತಾರೆ, ಅಧಿಕಾರಿ ಆಗುತ್ತಾನೆ ಎಂದು ಜ್ಯೋತಿಷಿಗಳ ಉತ್ತರ ದೊರೆತರೆ ಸಾಕು, ಅಂದಿನಿಂದಲೇ ಆ ಮಗು ವಿಗೆ ನೀನು ನನ್ನಂತೆ ಆಫೀಸರು ಆಗು ಎಂದು ಅವನ ತಲೆ ತುಂಬುತ್ತಾರೆ. ಹಾಗೂ ಅವರ ಬಗೆಗೆ ಪ್ರಯತ್ನಿಸುತ್ತಾರೆ. ತರಬೇತಿ ಕೊಡಿಸುತ್ತಾರೆ. ಮನೆ ಪಾಠ ಹೇಳಿಸುತ್ತಾರೆ, ಬಟ್ಟಿನಲ್ಲಿ ತಯಾರಿಸುತ್ತಾರೆ.

ಇನ್ನು ಕೆಲ ತಂದೆ–ತಾಯಿಗಳು ಪಾಲಕರು ತಮ್ಮ ಮಕ್ಕಳಿಗೆ ಎಸ್. ಎಸ್. ಎಲ್. ಸಿ. ಆದ ಬಳಿಕ ಕಾಲೇಜಿಗೆ ಸೇರಿಸಬೇಕೋ? ಹೇಗೆ? ಒಂದು ವೇಳೆ ಕಾಲೇಜಿಗೆ ಸೇರಿಸಿರಿ ಎಂದು ಜ್ಯೋತಿಷಿಗಳು ಉತ್ತರಿಸಿದರೆ ಕಲೆ, ವಾಣಿಜ್ಯ, ವಿಜ್ಞಾನ ಯಾವ ಕೋರ್ಸಿಗೆ ಎಂದು ವಿಚಾರಿಸುತ್ತಾರೆ. ಕಾಲೇಜು ಬೇಡ ಎಂದು ಉತ್ತರಿಸಿದರೆ ಡಿಪ್ಲೋಮಾ ಹೇಗೆ ಡಿಪ್ಲೋಮಾಗಳಲ್ಲಿ ಅನೇಕ ಕೋರ್ಸುಗಳಿದ್ದು ಅವುಗಳಲ್ಲಿ ಈ ಕೋರ್ಸು ಹೇಗೆ ಆ ಕೋರ್ಸು ಹೇಗೆ ವೃತ್ತಿ ಪೂರಕ ಕೋರ್ಸು ಹೇಗೆ ನಿರ್ದಿಷ್ಟ ಕೋರ್ಸಿನ ವಿಷಯವಾಗಿ ವಿಚಾರಿಸುತ್ತಾರೆ. ಇನ್ನು ಕೆಲ ಪಾಲಕರು, ತಂದೆ–ತಾಯಿಗಳು ತಮ್ಮ ಮಗನಿಗೆ ವಿದ್ಯೆ ಹತ್ತಲೊಲ್ಲದು 2–3 ವರ್ಷಗಳಿಂದ ಅನುತ್ತೀರ್ಣನಾಗು ತ್ತಿರುತ್ತಾನೆ. ಶಿಕ್ಷಣ ಮುಂದುವರಿಸಬೇಕೋ, ಹೇಗೆ ? ವಿಚಾರಿಸುತ್ತಾರೆ. ಈವರೆಗೆ ತಂದೆ–ತಾಯಿಗಳು ಪಾಲಕರು ತಮ್ಮ ಮಕ್ಕಳ ಶಿಕ್ಷಣದ ಬಗೆಗೆ ಯಾವ ರೀತಿ ಪ್ರಶ್ನಿಸುತ್ತಾರೆ ಎಂದು ಮನವರಿಕೆಯಾಯಿತು. ಇನ್ನು ವಿದ್ಯಾರ್ಥಿ ಗಳು ನೇರವಾಗಿ ಯಾವ ಯಾವ ಪ್ರಕಾರ ಪ್ರಶ್ನೆಗಳನ್ನು ಕೇಳುತ್ತಾರೆ. ಅವರ ಪ್ರಶ್ನೆಗಳ ವೈವಿಧ್ಯ ಹೇಗೆ ಎಂಬುದನ್ನು ಓದಿರಿ.

ನನ್ನ 40 ವರುಷಗಳ ವೃತ್ತಿಜೀವನದ ಅನುಭವದ ಆಧಾರದ ಮೇಲಿಂದ ಹೇಳಬೇಕೆಂದರೆ ವಿದ್ಯಾರ್ಥಿ ಜೀವನವೆಂದರೆ ಸಮಸ್ಯೆಗಳ ಸಾಗರ ವಾಗಿಯೇ ಇರುತ್ತದೆ. ಎಲ್ಲೋ ಕೆಲ ವಿದ್ಯಾರ್ಥಿಗಳು ಮಾತ್ರ ಸ ದೈವಿ ಗಳಿರುತ್ತಾರೆ. ಅವರು ವಿಚಾರಿಸುವ ಪ್ರಶ್ನೆಗಳನ್ನು ಓದಿದರೆ ಈ ಮಾತಿನ ಸತ್ಯಾಂಶದ ಅನುಭವ ನಿಮಗೂ ಬರುತ್ತದೆ. ಹಾಗಾದರೆ ಓದಿರಿ ಕೇಳಿರಿ.

ಮೇ ತಿಂಗಳ ಬೇಸಿಗೆಯ ಸೂಟಿ ಮುಗಿದು ಜೂನ್ ತಿಂಗಳಲ್ಲಿ ಶಾಲಾ ಕಾಲೇಜುಗಳು ಪ್ರಾರಂಭವಾದೊಡನೆ ವ್ಯಗಸಿರಾದ ಜಟಪಟ, ಮಳೆಯಂತೆ ಸಮಸ್ಯೆಗಳ ಮಳೆ ವಿದ್ಯಾರ್ಥಿಗಳನ್ನು ಕಾಡಲು ಪ್ರಾರಂಭವಾಗುತ್ತದೆ. ಹಿಂದಿನ ಪುಟಗಳಲ್ಲಿ ವಿವರಿಸಿದಂತೆ ಪ್ರಪ್ರಥಮ ಕಾಡುವ ಪ್ರಶ್ನೆಯೆಂದರೆ ಯಾವ ಶಾಲೆ, ಕಾಲೇಜಿಗೆ ಹೋಗಬೇಕು? ಎಲ್ಲಿ ಪ್ರವೇಶ ದೊರೆಯುತ್ತದೆ? ಪ್ರಶ್ನೆ ಸಮಸ್ಯೆಗಳು ಪ್ರಾಥಮಿಕ, ಮಾಧ್ಯಮಿಕ ವಿದ್ಯಾರ್ಥಿಗಳಿಗಿಂತ ಕಾಲೇಜು ಸೇರ ಬಯಸುವ ವಿದ್ಯಾರ್ಥಿಗಳ ಪ್ರಶ್ನೆಗಳೇ ಬಹಳ.

ವಿಜ್ಞಾನದ ಕೋರ್ಸಿಗೆ ಹೋಗಬೇಕೋ ? ಆರ್ಟ್ಸ್ [ಕಲೆ] ಕೋರ್ಸಿಗೆ ಹೋಗಬೇಕೋ ? ವಾಣಿಜ್ಯ ಕಾಲೇಜಿಗೆ ಸೇರಬೇಕೋ ? ಅಥವಾ ಯಾವ ಡಿಪ್ಲೋಮಾ ಕೋರ್ಸ್‌ಗೆ ಹೋಗಬೇಕೋ ? ಡಿಪ್ಲೋಮಾದಲ್ಲಿ ಕೂಡ ಯಾವ ಡಿಪ್ಲೋಮಾ ಕೋರ್ಸಿಗೆ ಹೋಗಬೇಕು ? ಯಾವ ಡಿಪ್ಲೋಮಾ ಕೋರ್ಸಿನ ಸೀಟು ಸಿಗುತ್ತದೆ. ಅಥವಾ ಯಾವುದಾದರೊಂದು ಸರ್ಟಿಫಿಕೇಟ್ ತರಬೇತಿ ಕೋರ್ಸ್‌ಸೇರಬೇಕೋ ಇದು ಎಸ್.ಎಸ್.ಎಲ್.ಸಿ. ಆದ ವಿದ್ಯಾರ್ಥಿಗಳ ಸಮಸ್ಯೆಯಾದರೆ ಪದವೀಧರ ಆದವರು ಸ್ನಾತಕೋತ್ತರ ಪ್ರವೇಶ ದೊರೆಯುವುದೋ? ಅಥವಾ ಯಾವುದಾದರೊಂದು ಉದ್ಯೋಗಕ್ಕೆ ಅಂಟಿಕೊಳ್ಳಬೇಕೋ? ಅಥವಾ ಹೆಚ್ಚಿನ ಶಿಕ್ಷಣಕ್ಕೆ ವಿದೇಶ ಯೋಗ ವಿದೆಯೋ ಹೇಗೆ ಎಂದು ವಿಚಾರಿಸುತ್ತಾರೆ. ಈ ಎಲ್ಲ ಸಮಸ್ಯೆಗಳು ಜೂನ ತಿಂಗಳದು ಇನ್ನು ಜುಲೈ ತಿಂಗಳು ಪ್ರಾರಂಭವಾದ ಕೂಡಲೇ ಮತ್ತೆ ಸಮಸ್ಯೆಗಳು ಉದ್ಭವಿಸುತ್ತವೆ. ಯಾವ ಯಾವ ವಿಷಯ ಮುಖ್ಯ ವಿಷಯವಾಗಿ ಹಾಗೂ ಯಾವುದನ್ನು ಉಪಮುಖ್ಯ ವಿಷಯವಾಗಿ (major and minor subjects] ಆಯ್ದುಕೊಳ್ಳಬೇಕು ? ಇದರೊಡನೆ ಕೆಲ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿಸಂಗದ ಚುನಾವಣೆ ಸಂಬಂಧಿಸಿದ ಪ್ರಶ್ನೆಗಳ ತಾಕಲಾಟ ಪ್ರಾರಂಭವಾಗುತ್ತದೆ. ಅಷ್ಟರಲ್ಲಿ ಆಗಸ್ಟ ಪ್ರಾರಂಭವಾಗುತ್ತದೆ. ಆಗ ಪ್ರತಿಭಾ ಶಿಷ್ಯವೇತನ (Merit scholarship) ಸಾಲ ಶಿಷ್ಯವೇತನ (Loan Scholarship) ಪುಕ್ಕಟ್ಟೆ ಶಿಕ್ಷಣದ ಸವಲತ್ತುಗಳ ಬಗೆಗೆ ಪ್ರಯತ್ನ ಈ ಯಾವುದೊಂದು ಸೌಲಭ್ಯದೊರೆಯದಿದ್ದಲ್ಲಿ ಎಲ್ಲಿಯಾದರೂ ಅರೆಕಾಲಿಕ ಕೆಲಸ

ಮಾಡುತ್ತಾ ಶಿಕ್ಷಣ ಮುಂದುವರಿಸಬೇಕೆಂಬ ವಿದ್ಯಾರ್ಥಿಗಳು ಕೆಲಸದ ಬಗೆಗೆ ಪ್ರಯತ್ನ ಅಷ್ಟರಲ್ಲಿಯೇ ಸಪ್ಟಂಬರ, ಅಕ್ಟೋಬರ, ತಿಂಗಳಲ್ಲಿ ಪೂರಕ ಪರೀಕ್ಷೆಗಳು (supplementery exam) ಬರುತ್ತವೆ. ಕೆಲ ವಿದ್ಯಾರ್ಥಿಗಳ ಈ ಪೂರಕ ಪರೀಕ್ಷೆಗೆ ಕಟ್ಟಿದರೆ ಹೇಗೆ ಗುಣಗಳು ಹೆಚ್ಚು ಪಡೆಯಲಾರವೆಂದರೆ ವಾರ್ಷಿಕ ಪರೀಕ್ಷೆಗೆ ತಯಾರಯಾಗಬೇಕೆಂಬ ಪ್ರಶ್ನೆಗಳು ಉದ್ಭವಿಸುತ್ತವೆ. ಮತ್ತೆ ನವಂಬರ-ಡಿಶಂಬರ ತಿಂಗಳಲ್ಲಿ ಶಾಲೆ-ಕಾಲೇಜುಗಳ ವಾರ್ಷಿಕೋತ್ಸವಗಳಿಗೆ ಗ್ಯಾದರಿಂಗ ಸಂಬಂಧಿಸಿದ ಚಟುವಟಿಕೆಗಳಿಗೆ ಭಾಗವಹಿಸಬೇಕೋ ಎಂಬುದರ ಪೆಚಾಟ.

ಜನೇವರಿ, ಫೆಬ್ರುವರಿ, ಮಾರ್ಚ ಈ ಮೂರುತಿಂಗಳಲ್ಲಿ ಮಾತ್ರ ವಿದ್ಯಾಥಿಗಳ ನಿಜವಾದ ಪ್ರಶ್ನೆಗಳು ಉದ್ಭವಿಸುತ್ತವೆ. ಪರೀಕ್ಷೆಗೆ ಕಟ್ಟಬೇಕೋ ಹೇಗೆ ಪ್ರಾಪತೆಗೆದುಕೊಂಡರೆ ಹೇಗೆ ಶ್ರೇಣಿ, ದರ್ಜೆ ಸಿಗುವುದೋ ಹೇಗೆ? ಶ್ರೇಣಿ ದರ್ಜೆ ಅಷ್ಟೇ ಅಲ್ಲಾ 100ಕ್ಕೆ 80ರ ಮೇಲೆ ಅಂಕ ಪಡೆಯಲು ಶಕ್ಯವಿದೆಯೇ ಹೇಗೆ ಅಂದರೆ ಮಾತ್ರ ಮೇಡಿಕಲ್ ಇಂಜನೀಯರಿಂಗ, ಡೆಂಟಲ್ ಮೊದಲಾದ ಕೋರ್ಸಿನಧ್ಯೇಯವುಳ್ಳ ವಿದ್ಯಾರ್ಥಿಗಳಿಗೆ ಕಾಡುವ ಪ್ರಶ್ನೆಗಳು ಏಪ್ರೀಲ, ಮೇ, ತಿಂಗಳು ಪ್ರಾರಂಭವಾದ ಕೂಡಲೇ ವಿದ್ಯಾರ್ಥಿಗಳ ಸತ್ವಪರೀಕ್ಷೆಗಳ ಕಾಲ ಥೇಯರಿ (Theory)ಪೇಪರ ಹೇಗಾಗುತ್ತದೆ? ಪ್ರಾತ್ಯಕ್ಷಿಕೆ(Practicals) ಹೇಗಾಗುತ್ತವೆ? ಮೌಖಿಕ (Oral) ವಾಯುವಾ ಹೇಗಾಗುತ್ತದೆ? ಎಂಬ ಪ್ರಶ್ನೆಗಳು ಉದ್ಭವಿಸುತ್ತವೆ. ಏಕೆಂದರೆ ಕೆಲ ವಿದ್ಯಾರ್ಥಿಗಳು ಥೇರಿಯಲ್ಲಿ ಪ್ರವೀಣರಿದ್ದು ಪ್ರಾತ್ಯಕ್ಷಿಕೆಯಂದರೆ ನಡುಕ ಪ್ರಾರಂಭವಾಗುತ್ತದೆ ಮತ್ತೆ ಕೆಲ ವಿದ್ಯಾರ್ಥಿಗಳ ಮೌಖಿಕವೆಂದರೆ ಕೈಕಾಲುಗಳನ್ನು ಕಳೆದುಕೊಳ್ಳುವರು. ಮತ್ತೆ ಜೂನ ತಿಂಗಳುಬರುತ್ತದೆ. ಪ್ರವೇಶದ ಪ್ರಶ್ನೆ ಪಟ್ಟಿನ ಶಿಕ್ಷಣ ಪಡೆಯಬೇಕೋ ಅಥವಾ ಯಾವುದಾದರೊಂದುಉದ್ಯೋಗಕ್ಕೂ ಅಂಟಿಕೊಳ್ಳಬೇಕೋ ಇದಲ್ಲದೇ ಕೆಲ ವಿದ್ಯಾರ್ಥಿಗಳಿಗೆ ಅಧ್ಯಾಪಕರ ಅಸಹಕಾರದಿಂದಾಗುವ ಸಮಸ್ಯೆಗಳು ಕೆಲ ವಿದ್ಯಾರ್ಥಿಗಳಿಗೆ ಮನೆಯಲ್ಲಿಯ ವಿಷಮವಾತಾವರಣದ ಸಮಸ್ಯೆಗಳು ಕೆಲ ವಿದ್ಯಾರ್ಥಿಗಳು ಪಾಠ್ಯೇತರ ಚಟುವಟಿಕೆಗಳಾದ ಕ್ರೀಡೆ, ಸಾಹಿತ್ಯ, ಸಂಗೀತ, ನಾಟಕಗಳ ಗೀಳುಗಳ ಸಮಸ್ಯೆ ಕೆಲ ವಿದ್ಯಾರ್ಥಿಗಳ ಪ್ರೇಮ ಪ್ರಕರಣಗಳ

ಸಂಬಧಿಸಿದ ಪ್ರಶ್ನೆಗಳು "ಫೀ'' ಸಂಬಂಧಿಸಿದ ಪ್ರಶ್ನೆಗಳು ರ್‍ಯಾಗಿಂಗ್ ಪ್ರಶ್ನೆಗಳು ಶಾರೀರಿಕ ಪೀಡೆಯು ಸಮಸ್ಯೆಗಳು ಒಂದೇ ಎರಡೇ ಹಲವು ಹತ್ತಾರು ಪ್ರಶ್ನೆಗಳನ್ನು ವರುಷದ ಉದ್ದಕ್ಕೂ ಇರುತ್ತವೆ. ಈ ಎಲ್ಲ ಪ್ರಶ್ನೆಗಳಿಗೆ ವೃತ್ತಿ ಜ್ಯೋತಿಷಿಗರು ಉತ್ತರಿಸಬೇಕಾಗುತ್ತದೆ. ಹಾಗಾದರೆ ಈಗ ಹೇಳಿ ವಿದ್ಯಾರ್ಥಿ ಜೀವನವೆಂದರೆ ಸಮಸ್ಯೆಗಳ ಸಾಗರವೇ? ಆಗರವೆ? ಮಗುವಿನ ಮೂರನೇ ವರುಷದಿಂದ ಪ್ರಾರಂಭವಾದ ಪ್ರಶ್ನೆಗಳು ಸ್ನಾತ್ತಕೊಸ್ಕರ ಶಿಕ್ಷಣದವರೆಗೆ ಅಷ್ಟೆ ಏಕೆ ಡಾಕ್ಟರೇಟ ಪಡೆಯಲು ಎಂ. ಪಿ. ಎಲ್‌ದಿಂದ ಗ್ರಂಥಗಳಿಂದ ಪ್ರಂಬಂಧ ಮಂಡಿಸಿದ ಬಳಿಕ ಬಾಹ್ಯ ತಪಾಸಗಾರರಿಂದಲೂ ಪ್ರಶ್ನೆಗಳು ಉದ್ಭವಿಸುತ್ತವೆ. ಅಲ್ಲದೇ ಇನ್ನು ಕೆಲ ವಾಮಮಾರ್ಗದ ಪ್ರಶ್ನೆಗಳಿವೆ. ಕಾಪಿ ಸಂಬಂಧಿಸದ ಪ್ರಶ್ನೆ ಪೇಪರ ತಪಾಸಿಸುವವರ ಮೇಲೆ ಪ್ರಭಾವ ಬೀರುವ ಪ್ರಶ್ನೆಗಳು ಹೀಗೆ ಒಂದೇ ಎರಡೇ ಇಂಥನೂರಾರು ಪ್ರಶ್ನೆಗಳಿಗೆ ಜ್ಯೋತಿಷಿಗಳು ಉತ್ತರಿಸ ಬೇಕಾಗುತ್ತದೆ. ಈ ವಿಷಯದ ಆಳ-ವಿಸ್ತಾರವನ್ನು ನಾವು ಈಗಾಗಲೇ ಬರೆದು ಪ್ರಕಟಿಸಿದ **"ಶಿಕ್ಷಣ ಜ್ಯೋತಿಷ್ಯ"** ದಲ್ಲಿ ವಿವರಿಸಲಾಗಿದ್ದರೂ ಈ ಅಧ್ಯಾಯ ದಲ್ಲಿ ಮುಂಜಾಗ್ರತೆ ಹಾಗೂ ಪರಿಹಾರ ದೃಷ್ಟಿಯಿಂದ **ಶಿಕ್ಷಣ ಪರಿಹಾರ** ಎಂಬ ಶೀರ್ಷಿಕೆಯ ಅಡಿಯಲ್ಲಿ ವಿಶ್ಲೇಷಿಸಲಾಗಿದೆ.

ಯಾರೊಬ್ಬರ ಶಿಕ್ಷಣದ ವಿಷಯವಾಗಿ ತಿಳಿದುಕೊಳ್ಳಲು ಅರ್ಥಾತ ಇಂದಿನ ಶಿಕ್ಷಣ ಪದ್ಧತಿಯಂತೆ ತಿಳಿದುಕೊಳ್ಳಲು ಜಾತಕದಲ್ಲಿಯ ಅನೇಕ ಗ್ರಹ ಗಳ ಅನೇಕ ಸ್ಥಾನಗಳ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ.

ನಮ್ಮ ಪುರಾತನ ಜ್ಯೋತಿಷಿಗಳು ಯಾರೊಬ್ಬರ ಶಿಕ್ಷಣ ವಿಷಯವಾಗಿ ಪಂಚಮಸ್ಥಾನದಲ್ಲಿಯ ಗ್ರಹ ಹಾಗೂ ಪಂಚಮೇಶನ ಬಲಾಬಲ ಮತ್ತು ವಿದ್ಯಾಕಾರಕ ಗ್ರಹವಾದ ಗುರುವಿನ ಬಲಾಬಲ ಹೀಗೆ ವಿದ್ಯಾಸ್ಥಾನವಾದ ಪಂಚಮಸ್ಥಾನವನ್ನು ವಿದ್ಯಾಕಾರಕ ಗ್ರಹವಾದ ಗುರುವಿನ ಬಲಾಬಲವನ್ನು ಮಾತ್ರ ಪರಿಶೀಲಿಸಿ ಜಾತಕನ ಶಿಕ್ಷಣ ಮಟ್ಟ ವಿದ್ಯೆಯ ಮಟ್ಟವನ್ನು ಅಳಿ ಯುತ್ತಿದ್ದರು. ಆದರೆ ಇಂದು ಕಾಲಬದಲಾಗಿದೆ. ಶಿಕ್ಷಣ ಕ್ಷೇತ್ರದಲ್ಲಿ ಆಮುಲಾಗ್ರ ಬದಲಾವಣೆಯಾಗಿದೆ ಕಲಿಯುವ ವಿಷಯಗಳಲ್ಲಿಯೂ ಕಲಿಯುವ

ರೀತಿಯಲ್ಲಿಯೂ ಅಪೂರ್ಲಾಗ್ರ ಬದಲಾವಣೆಗಳಾಗಿವೆ. ಆದುದರಿಂದಲೇ ಜಾತಕದಲ್ಲಿಯ ಅನೇಕ ಗ್ರಹಗಳ, ಅನೇಕ ಸ್ಥಾನಗಳ ಬಲಾಬಲವನ್ನು ಪರಿಶಿಲೀಸಬೇಕಾಗುತ್ತದೆ.

ಯಾರೊಬ್ಬ ವಿದ್ಯಾರ್ಥಿಯ ಶಿಕ್ಷಣ ವಿದ್ಯಾಪೂರ್ತಿಯಾಗಲು ಜಾತಕದಲ್ಲಿ ಗುರುವು ಬಲಾಢ್ಯನಿರಬೇಕು. ಏಕೆಂದರೆ ಗುರುವು ವಿದ್ಯೆಯ ಜ್ಞಾನದ ಅಧಿಪತಿಯು ಗುರುವು ಬಲಾಢ್ಯನಿದ್ದ ಜಾತಕನು ತೀಕ್ಷ್ಣಮತಿಯೂ ಕುಶಾಗ್ರಮತಿಯೂ ಇದ್ದು, ಜ್ಞಾನವಂತನಿರುತ್ತಾನೆ. ಆದರೆ ವಿದ್ಯಾವಂತ ನಿರುತ್ತಾನೆ. ಎಂದು ಹೇಳಲುಬಾರದು. ವಿದ್ಯಾ, ಬುದ್ಧಿ, ಜ್ಞಾನ ಇವುಗಳಿಗೆ ವಿಶಿಷ್ಟ ಅರ್ಥವಿರುತ್ತದೆ. ವಿದ್ಯಾವಂತ ಬೇರೆ ಜ್ಞಾನವಂತ ಬೇರೆ ಬುದ್ಧಿವಂತ ಬೇರೆ ಕುಶಾಗ್ರಮತಿಯುವ ತೀಕ್ಷ್ಣಮತಿಯುವ ಬೇರೆ ಗುರುವು ಜಾತಕದಲ್ಲಿ ಬಲಾಢ್ಯನಿದ್ದರೆ ಜಾತಕನು ಖಂಡಿತವಾಗಿ ಜ್ಞಾನವಂತನಿರುತ್ತಾನೆ. ಆದರೆ ವಿದ್ಯಾವಂತನಿರುತ್ತಾನೆ ಎಂದು ಹೇಳಲು ಬಾರದು ಆದುದರಿಂದ ಇಂದಿನ ಶಿಕ್ಷಣಪದ್ಧತಿಯಂತೆ ಗುರುವಿನ ಬಲಾಬಲದ ಸಂಗಡ ಇತರ ಗ್ರಹಗಳ ಬಲಾಬಲವನ್ನು ಪರಿಶೀಲಿಸ ಬೇಕಾಗುತ್ತದೆ. ಉದಾಹರಣೆಗೆ ರವಿಯು ಬಲಾಢ್ಯನಿದ್ದ ಜಾತಕನಿಗೆ ತಕ್ಕ ಅವಕಾಶ, ಸೌಲಭ್ಯ, ಸವಲತ್ತು, ಸುಸಂಧಿ, ಸಕಾಲದಲ್ಲಿ ದೊರೆತು ತಾನು ತೆಗೆದುಕೊಂಡ ವಿಷಯ ಕೋರ್ಸುಗಳನ್ನು ಪೂರ್ತಿಗೊಳಿಸುತ್ತಾನೆ. ಇದು ಅಲ್ಲದೇ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ತೇರ್ಗಡೆಯಾಗಲು ರವಿಯು ಬಲಾಢ್ಯನಿರದ ಜಾತಕನು ತೇರ್ಗಡೆಯಾಗಲಾರ ಇದು ಅಲ್ಲದೇ ಆಧುನಿಕ ಶಿಕ್ಷಣ ಪದ್ಧತಿಯಂತೆ ವಿಭಿನ್ನ ಶೈಕ್ಷಣಿಕ ವಿಷಯಗಳನ್ನು ಅಭ್ಯಾಸಿಸಬೇಕಾಗುತ್ತದೆ. ವಿಭಿನ್ನ ವಿಷಯಗಳಾಗಿ ವಿಭಿನ್ನ ಕೋರ್ಸುಗಳಿಗೆ ವಿಭಿನ್ನ ರೀತಿಯ ಪರೀಕ್ಷೆಗಳಿಗೆ ವಿಭಿನ್ನ ಗ್ರಹಗಳು ಕಾರಕವಿರುತ್ತವೆ. ಉದಾಹರಣೆಗೆ ಅರ್ಥಶಾಸ್ತ್ರ, ಭಾಷಾಶಾಸ್ತ್ರಕ್ಕೆ ವಾಣಿಜ್ಯ ಕೋರ್ಸುಗಳಿಗೆ ಬೆರಳಚ್ಚು ಗಾರಿಕೆ ಪರೀಕ್ಷೆಗೆ ಬುಧನುಕಾರಕನಿದ್ದರೆ, ಭೌತಶಾಸ್ತ್ರ, ತಾಂತ್ರಿಕ ಶಿಕ್ಷಣ ಇಂಜನೀಯರಿಂಗ ಶಿಕ್ಷಣಕ್ಕೆ ಮಂಗಳನು ಕಾರಕನು ಸಂಗೀತ, ನೃತ್ಯ, ಚಿತ್ರಕಲೆ, ಬಣ್ಣದಕಲೆ, ವಾದ್ಯಕಲೆ, ಅಭಿನಯ ಮೊದಲಾದ ಲಲಿತಕಲೆಗೆ ಸಂಬಂಧಿಸಿದ ವಿಷಯಗಳಿಗೆ ಕೋರ್ಸುಗಳಿಗೆ ಶುಕ್ರನು ಕಾರಕನು ಇದರಂತೆ ಕೃಷಿ ವಿಜ್ಞಾನ, ಪಶುವಿಜ್ಞಾನ, ಕಾಯಿದೆ

ಕೋರ್ಸುಗಳಿಗೆ ಶನಿಯುಕಾರಕ ಇದರಂತೆ ಥಿಯರಿ ಪರೀಕ್ಷೆಗಳಿಗೆ ಬುಧ, ಗುರು ಗಳುಕಾರಕರಿದ್ದರೆ ಪ್ರತ್ಯಕ್ಷಪರೀಕ್ಷೆಗೆ ರವಿ ಕುಜರು ಮೌಖಿಕಕ್ಕೆ ರವಿ, ಬುಧ, ಗುರು, ಚಂದ್ರರು ಕಾರಕರು ಹೀಗೆ ವಿಭಿನ್ನ ಕೋರ್ಸುಗಳಿಗೆ ವಿಭಿನ್ನ ವಿಷಯ ಗಳಿಗೆ ವಿಭಿನ್ನ ಪರೀಕ್ಷೆಗಳಿಗೆ ವಿಭಿನ್ನ ಗ್ರಹಗಳು ಪೋಷಕವೂ ಪೂರಕವೂ ಕಾರಕವೂ ಇರುತ್ತವೆ.

ಇನ್ನು ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ನಮ್ಮ ಪ್ರರಾತನ ಜ್ಯೋತಿಷಿಗಳ ಅಭಿಪ್ರಾಯದಂತೆ ಪಂಚಮ ಸ್ಥಾನವೇ ವಿದ್ಯಾ ಸ್ಥಾನ ವೆನ್ನುತ್ತಾರೆ. ಈ ಹಿಂದಿನ ಪುಟದಲ್ಲಿ ವಿವರಿಸಿದಂತೆ ಇಂದಿನ ಶೈಕ್ಷಣಿಕ ಪದ್ಧತಿಗೂ ಪರೀಕ್ಷಾ ವಿಧಾನಗಳಿಗೆ ವಿವಿಧ ಕೋರ್ಸು ವಿವಿಧ ವಿಷಯಗಳಿಗನು ಗುಣವಾಗಿ ಅನೇಕ ಸ್ಥಾನಗಳನ್ನು ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ಕೆಲವು ವಿಷಯಗಳಿಗೆ ಪಾಠ ಪ್ರವಚನಗಿಂತಲೂ ಪ್ರಯೋಗ ಶಾಲೆಯಲ್ಲಿಯ ಪ್ರತ್ಯಕ್ಷಿಕೆಯ ಜ್ಞಾನವನ್ನು ಪಡೆಯಬೇಕಾಗುತ್ತದೆ. ಈ ಪ್ರತ್ಯಕ್ಷಿಯ ಪರೀಕ್ಷೆಯ ಸ್ಥಾನವೆಂದರೆ ತೃತೀಯ ಸ್ಥಾನವು ಅಲ್ಲದೇ ತಾಂತ್ರಿಕ ಶಿಕ್ಷಣ ಡಿಪ್ಲೋಮಾ ಸರ್ಟಿಫಿಕೇಟ ತರಬೇತಿ ಕೋರ್ಸುಗಳಲ್ಲಿ ತೃತೀಯ ಸ್ಥಾನವೇ ಕಾರವು ಇದರಂತೆ ಸೈನಿಕ ಪರೀಕ್ಷೆಗಳಿಗೆ ದೇಹಧಾರ್ಢ್ಯವೇ ಮುಖ್ಯವಿರುವುದ ರಿಂದ ತನು ಸ್ಥಾನವನ್ನು ಮೌಖಿಕ ಪರೀಕ್ಷೆಗೆ ಹಾಗೂ ಸಂಗೀತಗಾರರಿಗೆ ದ್ವಿತೀಯ ಸ್ಥಾನವನ್ನು ಪರಿಶೀಲಿಸಬೇಕಾಗುತ್ತದೆ. ಇದಲ್ಲದೇ ಹಿಂದೆ ವಿವರಿಸಿ ದಂತೆ ಥೇರಿ ಪರೀಕ್ಷೆಗಳಿಗೆ ಪಂಚಮಸ್ಥಾನ ಹಾಗೂ ಬುಧ, ಗುರುಗಳು ಬಲಾ ಬಲವನ್ನು ಪ್ರತ್ಯಕ್ಷಿಕ ಪರೀಕ್ಷೆಗಳಿಗೆ ತೃತೀಯ ಸ್ಥಾನ ಹಾಗೂ ರವಿ, ಮಂಗಳ ಬಲಾಬಲವನ್ನು ಪರೀಕ್ಷಿಸಬೇಕಾಗುತ್ತದೆ. ಮೌಖಿಕ ಪರೀಕ್ಷೆಗಳಿಗೆ ದ್ವಿತೀಯ ಸ್ಥಾನ ಚಂದ್ರ, ಶುಕ್ರ, ಲಗ್ನೇಶ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಆದುದರಿಂದ ಹೀಗೆ ಯಾರೊಬ್ಬರ ಶಿಕ್ಷಣದ ಬಗೆಗೆ ತಿಳಿದುಕೊಳ್ಳಲು ಅನೇಕ ಗ್ರಹಗಳ ಅನೇಕ ಸ್ಥಾನಗಳ ಬಲಾಬಲವನ್ನು ಯಾವ ಯಾವ ವಿಷಯಗಳಿಗೆ ಯಾವ ಯಾವ ಕೋರ್ಸುಗಳಿಗೆ ಯಾವ ಯಾವ ಗ್ರಹಗಳು ಯಾವ ಯಾವ ಸ್ಥಾನಗಳು ಕಾರಕವಿರುತ್ತವೆ ಪೂರಕವಿರುತ್ತವೆ ಎಂಬುದರ ಸುದೀರ್ಘ ವಿವರಣೆಯನ್ನು ನಾವು ಬರೆದು ಪ್ರಕಟಿಸಿದ **ಶಿಕ್ಷಣ ಜ್ಯೋತಿಷ್ಯ ಎಂಬ**

**ಗ್ರಂಥದಲ್ಲಿ ವಿವರ ವಿವರವಾಗಿ ವಿವೇಚಿಸಿದೆ.** ಪ್ರಸ್ತುತ ಈ ಗ್ರಂಥದ ಈ ಅಧ್ಯಾಯಕ್ಕೆ ಸಂಬಂಧಿಸಿದ ವಿಷಯದ ರೂಪರೇಷೆಗಳನ್ನು ಮಾತ್ರ ಇಲ್ಲಿ ಉಲ್ಲೇಖಿಸಿದೆ.

ವಿಭಿನ್ನ ಸ್ಥಾನಗಳ ಮೇಲ್ಲಿಂದಲೂ ವಿಭಿನ್ನ ಗ್ರಹಗಳ ಮೇಲಿಂದಲೂ ವಿವಿಧ ಕೋರ್ಸುಗಳ ಮೇಲಿಂದಲೂ ವಿವಿಧ ಪರೀಕ್ಷೆಗಳ ಮೇಲಿಂದಲೂ ಶಿಕ್ಷಣದ ಬಗೆಗೆ ವಿವರಿಸಿದರೂ ಯಾರೊಬ್ಬರ ಶಿಕ್ಷಣದ ವಿಷಯವಾಗಿ ಒಂಬತ್ತು ಸಂಗತಿಗಳನ್ನು ಮಾತ್ರ ಪರಿಶೀಲಿಸಬೇಕಾಗುತ್ತದೆ. 1] ಗುರುವಿನ ಬಲಾಬಲ 2] ಬುಧನ ಬಲಾಬಲ 3] ಮಂಗಳನ ಬಲಾಬಲ 4] ಶನಿಯ ಬಲಾಬಲ 5] ಪಂಚಮ ಸ್ಥಾನದಲ್ಲಿಯ ಗ್ರಹ ಹಾಗೂ ಪಂಚಮೇಶನ ಬಲಾಬಲ 6] ತೃತೀಯ ಸ್ಥಾನದಲ್ಲಿಯ ಗ್ರಹ ಹಾಗೂ ತೃತಿಯೇಶನ ಬಲಾಬಲ 7] ದ್ವಿತೀಯ ಸ್ಥಾನದಲ್ಲಿಯ ಗ್ರಹ ಹಾಗೂ ದ್ವಿತೀಯೇಶನ ಬಲಾಬಲ 8] ಗ್ರಹ ಯೋಗ 9] ಗೋಚರೀ ಗ್ರಹಗಳ ಪರಿಭ್ರಮಣದ ಪರಿಣಾಮ ಹಾಗೂ ಮಹಾದಶೆ. ಅಂತರದಶೆಗಳ ಪ್ರಭಾವ ಹೀಗೆ ಮೇಲೆ ಬರೆದ ಈ ಒಂಬತ್ತು ಸಂಗತಿಗಳು ಪೂರಕವು, ಪೋಷಕವು, ಶುಭವು. ಇದ್ದರೆ ಅಂಥ ಜಾತಕನು ಅರ್ಥಾತ ಅಂಥ ವಿದ್ಯಾರ್ಥಿಯ ಶಿಕ್ಷಣವು ಸುಗಮವಾಗಿ ಪೂರ್ತಿಸುತ್ತಾನೆ. ಇವರು ಸುದೈವಿಗಳಿರುವುದರಿಂದ ಇವರಿಗೆ ಯಾವ ಮುಂಜಾಗ್ರತೆ ಪರಿಹಾರದ ಕ್ರಮಗಳ ಅವಶ್ಯಕತೆ ಇರುವುದಿಲ್ಲ ಆದರೆ ಈ ಒಂಬತ್ತು ಸಂಗತಿಗಳು ಪ್ರತಿಕೂಲವೂ ಅಶುಭವಿದ್ದ ವಿದ್ಯಾರ್ಥಿಗಳು ದುರ್ದೈವಿ ಇದ್ದು ವಿದ್ಯಾರ್ಥಿ ಜೀವನ ತಾಪದಾಯಕವಾಗಿ ಪರಿಣಮಿಸಿ ಶಿಕ್ಷಣ ಅರ್ಧಕ್ಕೆ ನಿಲ್ಲುವ ಸಂಭವವಿದೆ. ಆದರೆ ಈ ಒಂಬತ್ತು ಸಂಗತಿಗಳಲ್ಲಿ ಕೆಲವೊಂದು ಸಂಗತಿಗಳು ಪ್ರತಿಕೂಲವು, ಅಶುಭವಿದ್ದರೆ ಅವುಗಳಿಗೆ ಮುಂಜಾಗ್ರತೆ ಪರಿಹಾರದ ಕ್ರಮಗಳನ್ನು ಕೈಕೊಂಡಲ್ಲಿ ವಿಘ್ನಗಳು ದೂರಾಗಿ ಶಿಕ್ಷಣಮುಂದು ವರೆಯುತ್ತದೆ. ಆದುದರಿಂದ ಯಾವ ಸಂಗತಿಗಳು ಅನುಕೂಲ ಯಾವ ಸಂಗತಿಗಳು ಪ್ರತಿಕೂಲ ಇವುಗಳನ್ನು ಅವರವರ ಜಾತಕದಆಧಾರದ ಮೇಲಿಂದ ಖಚಿತಪಡಿಸಿಕೊಂಡು ಯಾವ ಯಾವ ಯಾವ ಮುಂಜಾಗ್ರತೆ ಹಾಗೂ ಪರಿಹಾರದ ಕ್ರಮಗಳನ್ನು ಕೈಕೊಳ್ಳಬೇಕೆಂಬುದನ್ನು ಪರಿಶೀಲಿಸುವಾ.

1) **ಗುರುವಿನ ಬಲಾಬಲ :** ಹೇಗೆ ಮಾತೃಸೌಖ್ಯಕ್ಕೆ ಚಂದ್ರನು ಸದೃಡ ಆರೋಗ್ಯಕ್ಕೆ ಹಾಗೂ ವರಿಷ್ಟ ಅಧಿಕಾರ ಪಡೆಯುವುದಕ್ಕೆ ಸೂರ್ಯನು ಪತಿ-ಪತ್ನಿ ಸೌಖ್ಯಕ್ಕೆ ಶುಕ್ರನು ಕಾರಕರಿರುವರೋ ಹಾಗೇ ವಿದ್ಯಾ, ಬುದ್ಧಿ, ಜ್ಞಾನ, ಶಿಕ್ಷಣ ಇವುಗಳಿಗೆಲ್ಲ ಗುರುವೇ ಕಾರಕನು ಪೋಷಕನು ಪೂರಕನು ಇರುತ್ತಾನೆ. ವಿದ್ಯಾ, ಬುದ್ಧಿ, ಜ್ಞಾನದ ಅಧಿಪತಿಯೇ ಗುರುವು ಗುರುವಿನ ಗುರುತ್ವವಿಲ್ಲದೆ ಯಾರಿಗೂ ವಿದ್ಯಾ, ಬುದ್ಧಿ,ಜ್ಞಾನ ಶಿಕ್ಷಣ ಲಭಿಸದು. ಗುರುವಿಗೆ ಬೃಹಸ್ಪತಿಯೆಂದೂ ಕರೆಯುತ್ತಾರೆ ಬೃಹಸ್ಪತಿ ಯೆಂದರೆ ಸಕಲ ಶಾಸ್ತ್ರಗಳಲ್ಲಿ ನಿಷ್ಣಾತ ಪಾಂಡಿತ್ಯ ಪಡೆದವ ಅನೇಕ ವಿಷಯ ಗಳನ್ನು ತಿಳಿದುಕೊಂಡವ ಎಂದರ್ಥವಾಗುತ್ತದೆ. ಇಷ್ಟೇ ಅಲ್ಲಾ ಜ್ಞಾನದ ಆಳ, ಜ್ಞಾನದ ಎತ್ತರಕ್ಕೆ ಗುರುವೇ ಕಾರಕನು. ಇದು ಅಲ್ಲದೇ ಥೇರಿಗೆ ಗುರುವೇ ಕಾರಕನು ಇದು ಬಹಳ ಮಹತ್ವದ ಸಂಗತಿ ಏಕೆಂದರೆ ಯಾರೊಬ್ಬ ವಿದ್ಯಾರ್ಥಿ ಆಯಾ ವಿಷಯವನ್ನು ಚನ್ನಾಗಿ ತಿಳಿದುಕೊಂಡಿರುತ್ತಾನೆ ಆದರೆ ಅದನ್ನು ಪರೀಕ್ಷಾ ಸಮಯದಲ್ಲಿ ಬರಹದಲ್ಲಿ ಇಳಿಸುವುದು ಉತ್ತರಿಸುವುದು ಅರ್ಥಾತ ಥೇರಿ ಪೇಪರ ಚನ್ನಾಗಿ ಮಾಡುವುದು ಇದು ಗುರುವಿನ ಬಲಾ ಬಲದ ಮೇಲೆ ಅವಲಂಬಿಸಿದೆ. ಗುರುವು ಬಲಾಢ್ಯನಿದ್ದ ಜಾತಕನು ಯಾವುದೇ ವಿಷಯದ ಯಾವುದೇ ಕೋರ್ಸಿನ ಥೇರಿ ಪೇಪರಿನಲ್ಲಿ ಹೆಚ್ಚು ಗುಣ ಸಂಪಾ ದಿಸುತ್ತಾನೆ. ಆದರೆ ಅದೇ ಗುರುವು ನಿರ್ಬಲನಿದ್ದ ಜಾತಕನ ಥೇರಿ ಪೇಪರ ಚನ್ನಾಗಿ ಬರುವುದಿಲ್ಲ. ಅರ್ಥಾತ ಕಡಿಮೆ ಗುಣ ಸಂಪಾದಿಸುತ್ತಾನೆ ಇದು ಅಲ್ಲದೇ ಗುರುವು ಕೆಲ ವಿಷಯಗಳ ಕಾರಕನಿರುತ್ತಾನೆ. ಉದಾಹರಣೆಗೆ ಆತ್ಮಜ್ಞಾನ ವೇದಾಂತ, ತತ್ವಜ್ಞಾನ, ಕಾಯುದೇಶಾಸ್ತ್ರ, ಆಯುರ್ವೇದಶಿಕ್ಷಣ, ವೈದಿಕ ಶಿಕ್ಷಣ, ಸಂಸ್ಕೃತ, ನ್ಯಾಯ, ವ್ಯಾಕರಣ, ತರ್ಕ, ಮಿಮಾಂಸೆ, ಶಾಸ್ತ್ರಗಳು ಅಂಕಗಣಿತ, ರಾಜಕಾರಣಶಾಸ್ತ್ರ. ಶಿಕ್ಷಕರ ತರಬೇತಿ ಕೋರ್ಸುಗಳು ಇವೇ ಮೊದಲಾದವುಗಳು ಗುರುವಿನ ಕಾರಕ ವಿಷಯಗಳು. ಗುರುವು ಬಲಾಢ್ಯನಿದ್ದ ಜಾತಕನು ಮೇಲೆ ಬರೆದ ವಿಷಯಗಳಲ್ಲಿ ಪ್ರಭುತ್ವ ಪಡೆದಿರುವವರಿರುತ್ತಾರೆ.

2) **ಬುಧನ ಬಲಾಬಲ**—ಯಾರೊಬ್ಬ ವಿದ್ಯಾರ್ಥಿಯ (ಜಾತಕನ ಶಿಕ್ಷಣದ ಬಗೆಗೆ ವಿಚಾರಿಸುವಾಗ ಗುರುವಿನ ಬಲಾಬಲದ ನಂತರ ಬುಧನ ಬಲಾಬಲವನ್

ಪರಿಶೀಲಿಸ ಬೇಕಾಗುತ್ತದೆ. ಏಕೆಂದರೆ ಗುರುವು ವಿದ್ಯಾಕಾರಕನಿದ್ದರೆ ಬುಧನು ಬುದ್ಧಿ ಕಾರಕನು ಜ್ಞಾನದ ಆಳ ಎತ್ತರಕ್ಕೆ ಗುರುವು ಕಾರಕನಿದ್ದರೆ ಜ್ಞಾನದ ವಿಸ್ತಾರಕ್ಕೆ ಬುಧನುಕಾರಕನು ಯಾವುದೊಂದು ಭಾಷೆಯಲ್ಲಿ ಪ್ರಭುತ್ವ ಪಡೆಯಲು ಗುರುವು ಬಲಾಢ್ಯನಿರಬೇಕಾಗುತ್ತದೆ. ಆದರೆ ಅನೇಕ ಭಾಷೆಗಳಲ್ಲಿ ಅನೇಕ ವಿಷಯಗಳಲ್ಲಿ ತಿಳವಳಿಕೆ ಇರುವಂತೆ ಬಹುಭಾಷೆ ಬಲ್ಲವ ಇವುಗಳಲ್ಲಿ ಬುಧನ ಬಲಾಬಲದ ಮೇಲೆ ಅವಲಂಬಿಸಿರುತ್ತದೆ. ಇದು ಅಲ್ಲದೇ ಥೇರಿಗೆ ಗುರುವು ಕಾರಕನಿದ್ದರೆ ಮೌಖಿಕಕ್ಕೆ (ಓರಲ್‌ ವಾಯವ) ಬುಧನು ಕಾರಕನು ಬುಧನುಬಲಾಢ್ಯನಿದ್ದ ಜಾತಕನು ಮೌಖಿಕ ಪರೀಕ್ಷೆಯಲ್ಲಿ ಹೆಚ್ಚು ಗುಣ ಸಂಪಾದಿಸ ಬಲ್ಲನು ಇದು ಅಲ್ಲದೇ ವಾಣಿಜ್ಯಶಾಸ್ತ್ರ, ಅರ್ಥಶಾಸ್ತ್ರ, ಪತ್ರಿಕೋದ್ಯಮ ಅಂಕಿ–ಸಂಖ್ಯಾಶಾಸ್ತ್ರ, ಬೀಜಗಣಿತ, ವಾಚನಾಲಯ ವಿಜ್ಞಾನ, ಬೆರಳಚ್ಚುಗಾರಿಕೆಯ ಶಿಕ್ಷಣ, ಶೀಘ್ರಲಿಪಿಗಾರಿಕೆ ಶಿಕ್ಷಣ, ಭಾಷಾಶಾಸ್ತ್ರ ಕಂಪ್ಯೂಟರ್ ವಾಣಿಜ್ಯ ಕೋರ್ಸು, ರೇಡಿಯೋಇಂಜಿನಿಯರಿಂಗ, ಟೆಲಿಕಮ್ಯುನಿಕೇಶನ್ ಇಂಜನಿಯರಿಂಗ ಟಿ. ವಿ. ಇಂಜನಿಯರಿಂಗ ಈ ಎಲ್ಲ ವಿಷಯ ಹಾಗೂ ಕೋರ್ಸುಗಳಿಗೆ ಬುಧನು ಕಾರಕನು ಬುಧನು ಬಲಾಢ್ಯನಿದ್ದರೆ ಮೇಲೆ ಬರೆದ ವಿಷಯಗಳಲ್ಲಿ ಪಾಂಡಿತ್ಯ ಪಡೆದು ಈ ವಿಷಯಗಳ ಕೋರ್ಸುಗಳನ್ನು ಸುಸೂತ್ರವಾಗಿ ಮುಗಿಸುತ್ತಾನೆ. ಆದರೆ ಬುಧನು ನಿರ್ಬಲನಿದ್ದರೆ ಮೇಲೆ ಬರೆದ ವಿಷಯಗಳ ಹಾಗೂ ಕೋರ್ಸುಗಳನ್ನು ಪೂರ್ತಿಸಲು ತಿಳಿದುಕೊಳ್ಳಲು ತೊಂದರೆಯಾಗುತ್ತದೆ.

3) **ಮಂಗಳನ ಬಲಾಬಲ** : ಹಿಂದಿನ ಪುಟದಲ್ಲಿ ಬರೆದಂತೆ ಶಿಕ್ಷಣವು ಜಾತಕನ ಜೀವನ ಭವ್ಯತೆಗೆ ಸಹಾಯವಾಗುತ್ತದೆ. ಶಿಕ್ಷಣವನ್ನು ವ್ಯಕ್ತಿಯ ಭವಿಷ್ಯ ನಿರೂಪಣೆ. ಒಂದು ಉಪಕರಣವನ್ನಾಗಿ ಬಳಸಲಾಗುತ್ತದೆ. ಈ ದೃಷ್ಟಿಕೋನದಿಂದ ವಿಚಾರಿಸಿದರೆ ಜಾತಕದಲ್ಲಿ ಮಂಗಳನ ಬಲಾಬಲವನ್ನು ಪರಿಶೀಲಿಸುವದು ಅತ್ಯಾವಶ್ಯವು ಏಕೆಂದರೆ ಇಂದಿನ ಶಿಕ್ಷಣ ಪದ್ಧತಿಯಲ್ಲಿ ಅದರಲ್ಲಿಯೂ ಇತ್ತೀಚಿನ ಶಿಕ್ಷಣದ ವಿಷಯಗಳಿಗೆ ಕೋರ್ಸುಗಳಿಗೆ ಮಂಗಳನ ಪ್ರಾಮುಖ್ಯತೆ ಬಹಳವಿದೆ. ಕಾರಣ ಇಂದಿನ ಅನೇಕ ವಿದ್ಯಾರ್ಥಿಗಳು ಎಸ್. ಎಸ್. ಎಲ್. ಸಿ. ಆದ ಬಳಿಕ ವಿಜ್ಞಾನ ಕೋರ್ಸುಗಳನ್ನು ಪಡೆಯಲು ಇಚ್ಛಿಸುತ್ತಾರೆ.

ಇವರಂತೆ ಅವರ ಪಾಲಕರು ತಂದೆ-ತಾಯಿಗಳು ತಮ್ಮ ಮಕ್ಕಳಿಗೆ ಅದರಲ್ಲಿಯೂ ಗಂಡುಮಕ್ಕಳಿಗೆ ವಿಜ್ಞಾನದ ಕೋರ್ಸ (Science Course) ಗಳಿಗೆ ಪ್ರವೇಶ ಪಡೆಯಲು ಇಚ್ಛಿಸುತ್ತಾರೆ ಹಾಗೂ ಪ್ರಯತ್ನಿಸುತ್ತಾರೆ. ಕಾರಣ ವಿಜ್ಞಾನದ ವಿಷಯ ಆಯ್ದುಕೊಂಡರೆ ತೆಗೆದುಕೊಂಡರೆ ಮುಂದೆ ಎಲ್ಲ ಪ್ರಕಾರದ ಇಂಜನೀಯರಿಂಗ ಕೋರ್ಸಗಳಿಗೂ ಎಲ್ಲ ಪ್ರಕಾರದ ಮೆಡಿಕಲ್ ಕೋರ್ಸಗಳಿಗೂ ಪ್ರವೇಶ ಪಡೆಯಲು ಪಿ.ಯು.ಸಿ. ಯಲ್ಲಿ ವಿಜ್ಞಾನದ ವಿಷಯಗಳನ್ನು ವಿಜ್ಞಾನದ ಕೋರ್ಸಗಳ ಆಯ್ಕೆಗೆ ಸಹಾಯಕಾರಿಯಾಗುತ್ತದೆ ಏಕೆಂದರೆ ಮಂಗಳನು ವಿಜ್ಞಾನದ ವಿಷಯಗಳ, ವಿಜ್ಞಾನ ಕೋರ್ಸಿನ ಕಾರಕ ಗ್ರಹವು ಅಲ್ಲದೇ ಭೌತ ವಿಜ್ಞಾನ, ಕ್ರಿಮಿನಾಲಜಿ, ಶಸ್ತ್ರಕ್ರಿಯಾಶಾಸ್ತ್ರ, ಭೂಗರ್ಭಶಾಸ್ತ್ರ, ಸೈನಿಕ ಶಿಕ್ಷಣ ಮೊದಲಾದ ವಿಷಯಗಳಿಗೂ ಕೋರ್ಸಗಳಿಗೂ ಮಂಗಳಕಾರಕನು ಇದು ಅಲ್ಲದೇ ಧೈರ್ಯ, ಶೌರ್ಯ, ಸಾಹಸ, ಆತ್ಮವಿಶ್ವಾಸ,ಧೃಡನಿಶ್ಚಯ, ಪ್ರಭಾವೀ ವ್ಯಕ್ತಿತ್ವ,ವೈಜ್ಞಾನಿಕ ಮನೋವೃತ್ತಿ, ಛಲ-ಹಟವಾದಿ, ಯಾವುದೊಂದು ನಿರ್ಣಯ, ನಿಯಮಗಳನ್ನು ಕೈಕೊಂಡರೆ ಅದನ್ನು ಕಾರ್ಯಗೊಳಿಸುವಿಕೆ ಅನುಷ್ಠಾನದಲ್ಲಿ ತರುವಿಕೆ ಈ ಎಲ್ಲ ನೈಸರ್ಗಿಕ ಗುಣಧರ್ಮಗಳು ಮಂಗಳನದು ಇರುತ್ತದೆ. ಆದುದರಿಂದ ಮಂಗಳನು ಬಲಾಢ್ಯನಿದ್ದ ಜಾತಕನ ಈ ಗುಣ ಸ್ವಭಾವದವನಿರುತ್ತಾನೆ. ಇದು ಅಲ್ಲದೇ ಇಂದಿನ ಪರೀಕ್ಷಾ ವಿಧಾನದಲ್ಲಿಯ ಪ್ರಯೋಗಶಾಲೆಯಲ್ಲಿ ಜ್ಞಾನ ಪಡೆದು ಪ್ರತ್ಯಕ್ಷಿಕೆ ಪರೀಕ್ಷೆಯಲ್ಲಿ ಯಶ ಪಡೆಯಲು ಜಾತಕದಲ್ಲಿ ಮಂಗಳನು ಬಲಾಢ್ಯನಿರಬೇಕಾಗುತ್ತದೆ. ಈ ಎಲ್ಲ ಕಾರಣಗಳಿಂದ ವಿಜ್ಞಾನ ಕೋರ್ಸಗಳನ್ನು ಆಯ್ದುಕೊಳ್ಳುವ ವಿದ್ಯಾರ್ಥಿಗಳ ಜಾತಕದಲ್ಲಿ ಮಂಗಳನ ಬಲಾಬಲವನ್ನು ಪರಿಶೀಲಿಸುವುದು ಅತ್ಯುತ್ತಮವು ಆದುದರಿಂದ ಯಾರೊಬ್ಬ ವಿದ್ಯಾರ್ಥಿಯ ಜಾತಕನ ಶಿಕ್ಷಣದ ಬಗೆಗೆ ವಿಚಾರಿಸುವಾಗ ಗುರುವಿನ ಬಲಾಬಲದೊಂದಿಗೆ ಮಂಗಳನ ಬಲಾಬಲವನ್ನು ಪರಿಶೀಲಿಸುವುದು ಅತ್ಯಾವಶ್ಯವಿರುತ್ತದೆ.

4] **ಶನಿಯ ಬಲಾಬಲ :** ಹಿಂದಿನ ಪುಟದಲ್ಲಿ ವಿವರಿಸಿದಂತೆ ಇಂದಿನ ಶಿಕ್ಷಣ ಪದ್ಧತಿಗೆ ಮಂಗಳನ ಬಲಾಬಲವನ್ನು ಪರಿಶೀಲಿಸುವುದು

ಹೇಗೆ ಅತ್ಯಾವಶ್ಯವೋ ಹಾಗೆ ಶನಿಯ ಬಲಾಬಲವನ್ನು ಪರಿಶೀಲಿಸುವುದು ಕೂಡ ಅತ್ಯಾವಶ್ಯವು. ಏಕೆಂದರೆ ವಿಜ್ಞಾನ ವಿಷಯವನ್ನು ಆಯ್ದುಕೊಳ್ಳುವ ವಿದ್ಯಾರ್ಥಿಗಳ ಜಾತಕದಲ್ಲಿ ಮಂಗಳನೊಂದಿಗೆ ಶನಿಯೂ ಬಲಾಢ್ಯನಿರಬೇಕಾ ಗುತ್ತದೆ. ಏಕೆಂದರೆ ಇಂಜೀನಿಯರಿಂಗ ಹಾಗೂ ವೈದ್ಯಕೀಯ ಕೋರ್ಸುಗಳಿಗೆ ಶನಿ.-ಮಂಗಳ ಈರ್ವರು ಕಾರಕರಿರುತ್ತಾರೆ. ಕೆಲ ಇಂಜನೀಯರಿಂಗ ವೈದ್ಯಕೀಯ ಕೋರ್ಸುಗಳಿಗೆ ಮಂಗಳನು ಕಾರಕನಿದ್ದರೇ ಕೆಲ ಇಂಜನೀಯ ರಿಂಗ ಹಾಗೂ ವೈದ್ಯಕೀಯ ಕೋರ್ಸುಗಳಿಗೆ ಶನಿಯುಕಾಂಕ ಹೇಗೆಂದರೆ ಎಲೆಕ್ಟ್ರಿಕ್ ಹಾಗೂ ಎಲೆಕ್ಟ್ರಾನಿಕ್, ರೇಡಿಯೋ ಇಂಜನೀಯರಿಂಗ, ಸೌಂಡ ಇಂಜೀನಿಯರಿಂಗ,ಏರೋನಾಟಿಕಲ್,ಇಂಜನೀಯರಿಂಗ ಪ್ರೊಡಕ್ಷನ್ ಇಂಜನೀ ಯರಿಂಗ ಇವೇ ಮೊದಲಾದ ಇಂಜನೀಯರಿಂಗ ಕೋರ್ಸುಗಳಿಗೆ ಮಂಗಳನು ಕಾರಕನಿದ್ದರೆ ಅಗ್ರಿಕಲ್ಚರಲ್, ಮೆಟಲರ್ಜಿಕಲ್, ಮೈನಿಂಗ, ಪ್ರಿಂಟಿಂಗ ಟೆಕ್ನಾಲಜಿ, ಲೆದರ ಟೆಕ್ನಾಲಜಿ, ಈ ಎಲ್ಲ ಇಂಜನೀಯರಿಂಗನ ಹಾಗೂ ಟೆಕ್ನಾಲಜಿಗಳಲ್ಲಿ ಶನಿಯುಕಾರಕನು ಇದರಂತೆ ಭೌತಶಾಸ್ತ್ರಕ್ಕೆ ಮಂಗಳನು ಕಾರಕನಿದ್ದರೆ ರಸಾಯನ ಶಾಸ್ತ್ರಕ್ಕೆ ಶನಿಯು ಕಾರಕ. ಶಸ್ತ್ರಕ್ರಿಯೆ ಶಿಕ್ಷಣಕ್ಕೆ ಹಾಗೂ ಸರ್ಜನ ವೃತ್ತಿಗೆ ಮಂಗಳಕಾರಕನಿದ್ದರೆ ಔಷಧಿ ಶಾಸ್ತ್ರಕ್ಕೆ ಹಾಗೂ ಅರೆಗುಳಿಕೆ (ಅನೇಸ್ತೆಷಿಯಾ) ಶಾಸ್ತ್ರಕ್ಕೆ ಶನಿಯುಕಾರಕ ಅಲ್ಲದೇ ಶಾಸ್ತ್ರಕ್ರೀಯೆ ಆದ ಬಳಿಕ ಹಾಗೂ ಮುಂಚೆ ಕೈಕೊಳ್ಳುವ ನರ್ಸರೀ ಕೆಲಸಕ್ಕೆ ಸೇವಾ ಕೆಲಸಕ್ಕೆ ಶನಿಯು ಕಾರಕನಿರುತ್ತಾನೆ ಹೋಮಿಯೋಪತಿಗೆ ಶಿಕ್ಷಣಕ್ಕೆ ಶನಿಯುಕಾರಕ ಮಂಗಳನು ಇಂಜನೀಯರಾಗಿ ಅಧಿಕಾರ ಚಲಾಯಿಸುತ್ತಿದ್ದರೆ ಫಿಟರ ಮೆಕ್ಯಾನಿಕ್, ಮಿಲ್ಲರ, ವೆಲ್ಡರ ಲೇಥಮನ್ ಗ್ರೈಂಡರ ಡ್ರೀಲರ, ಪ್ಯಾಟರ್ನ ಮೇಕರ, ಮೊದಲಾದ ಕೋರ್ಸುಗಳಿಗೆ ಹಾಗೂ ಕೆಲಸಗಳಿಗೆ ಶನಿಯು ಕಾರಕ ಮಂಗಳ ಬಲಾಢ್ಯನಿದ್ದರೆ ಅಧಿಕಾರ ಚಲಾಯಿಸುತ್ತಾರೆ. ಶನಿಯು ಬಲಾಢ್ಯ ನಿದ್ದರೆ ಕೆಲಸ ಸ್ವತಃ ಮಾಡುತ್ತಾರೆ ವಿದ್ಯುತ್‌ಗೆ ಮಂಗಳನು ಕಾರಕನಿದ್ದರೆ ಪೆಟ್ರೋಲ್, ಡಿಜಾಯಿಲ್, ಚಿಮಣಿ ಎಣ್ಣೆ ಮೊದಲಾದ ಎಲ್ಲ ಪ್ರಕಾರದ ಎಣ್ಣೆಗಳಿಗೆ ಹಾಗೂ ಕಬ್ಬಿಣ ಉಕ್ಕು, ಕಟ್ಟಿಗೆ, ಸಿಮೆಂಟು, ಕಲ್ಲಿದ್ದಲು, ಕೋಕ್ ಇವುಗಳಿಗೆ ಶನಿಯು ಕಾರಕ. ಟ್ರಕ್ಕ ಚಾಲಕನಾಗಲು ಮಂಗಳ ಬಲಾಢ್ಯನಿದ್ದರೆ, ಟ್ರ್ಯಾಕ್ಟರ ಚಾಲಕ ಕೆಲಸಕ್ಕೆ ಶನಿಯು ಬಲಾಢ್ಯನಿರಬೇಕು.

ಹೀಗೆ ಶನಿ-ಮಂಗಳರ ತುಲನಾತ್ಮಕವಾಗಿ ಬರೆವರೆ ಅನೇಕ ಪುಟಗಳಷ್ಟು ಬರೆಯಬೇಕಾಗುತ್ತದೆ. ಈ ಎಲ್ಲ ವಿಷಯಗಳನ್ನು ನಾವು ಬರೆದು ಪ್ರಕಟಿಸ ಬೇಕೆಂದಿರುವ **"ಗ್ರಹದರ್ಶನ"** ಗ್ರಂಥದಲ್ಲಿ ವಿವರಿಸಲಾಗುವುದು.

ವಿಜ್ಞಾನದ ಕೋರ್ಸುಗಳಿಗೆ ಶನಿ-ಮಂಗಳ ಇಬ್ಬರೂ ಹೇಗೆ ಕಾರಕರು ಎಂದು ವಿವರಿಸಿದ್ದಾಯಿತು ಅಲ್ಲದೇ ಶನಿ-ಮಂಗಳ ಈರ್ವರು ವಿಭಿನ್ನ ವಿಷಯಗಳಿಗೂ ಕಾರಕರಿದ್ದಾರೆ. ಉದಾ— ಕಾಯಿದೆ ಕೋರ್ಸು, ಕೃಷಿ-ವಿಜ್ಞಾನ, ಪಶುವಿಜ್ಞಾನ, ಸ್ಥಾನಪತಿ, ಪ್ರಾಚ್ಯವಸ್ತುಸಂಶೋಧನೆ. ಇತಿಹಾಸ ಶಾಸ್ತ್ರ ಶನಿಯು ಕಾರಕನಿದ್ದರೆ ಭೂಗೋಲ ಭೂಮಿತಿ, ಭೂಗರ್ಭ-ಶಾಸ್ತ್ರ, ಕಂಪ್ಯೂಟರ ಸಾಯನ್ಸ ಈ ಎಲ್ಲ ವಿಷಯಗಳಿಗೆ ಮಂಗಳನು ಕಾರಕನನು ಆದುದರಿಂದ ಯಾರೊಬ್ಬ ವಿದ್ಯಾರ್ಥಿ ಮುಖ್ಯವಿಷಯ, ಉಪ ಮುಖ್ಯ ವಿಷಯ ಆಯ್ದುಕೊಳ್ಳುವಾಗ ಬಲಾಢ್ಯರಿದ್ದ ಗ್ರಹದ ಮುಖ್ಯವಿಷಯ ವನ್ನು ಆಯ್ದುಕೊಳ್ಳಬೇಕು. ಹೀಗೆ ಆಧುನಿಕ ಶಿಕ್ಷಣ ಪದ್ಧತಿಗೆ ಅನುಸಾರ ಯಾರೊಬ್ಬರ ಶಿಕ್ಷಣದ ವಿಷಯವಾಗಿ ವಿಚಾರಿಸುವಾಗ ಕೇವಲ ಗುರುವಿನ ಬಲಾಬಲವನ್ನು ನೋಡದೇ ಗುರುವಿನೊಂದಿಗೆ ಮಂಗಳ, ಶನಿಯರ ಬಲಾಬಲ ವನ್ನು ಪರಿಶೀಲಿಸುವುದು ಎಷ್ಟು ಮಹತ್ವದ್ದು ಎಂಬುದರ ಕಲ್ಪನೆ ಬರದೇ ಇರಲಾರದು.

5) **ಪಂಚಮ ಸ್ಥಾನದ ನೋಲಿಂದ** :— ಯಾರೊಬ್ಬ ಜಾತಕನ ಯಾರೊಬ್ಬ ವಿದ್ಯಾರ್ಥಿಯ ಶಿಕ್ಷಣದ ವಿಷಯವಾಗಿ ಅವನ ಜಾತಕ ಹೇಗಿದೆ? ಯಾವ ವಿಷಯವನ್ನು ಆತನು ಆಯ್ದುಕೊಳ್ಳಬೇಕು? ಯಾವ ಕೋರ್ಸ ಆತನು ಆಯ್ದುಕೊಳ್ಳಬೇಕು? ಇದಕ್ಕಾಗಿ ಜಾತಕನ ಜಾತಕದ ಯಾವ ಸ್ಥಾನ ವನ್ನು ಪ್ರಮುಖವಾಗಿ ಪರಿಶೀಲಿಸಬೇಕು ಎಂಬ ಪ್ರಶ್ನೆ ಉದ್ಭವಿಸಿದಾಗ ಖಂಡಿತವಾಗಿ ಆತನ **ಪಂಚಮ ಸ್ಥಾನವನ್ನೇ ಪ್ರಮುಖವಾಗಿ ಪರಿಶೀಲಿಸ ಬೇಕು** ಎಂಬ ಉತ್ತರಕೊಡಬೇಕಾಗುತ್ತದೆ. ಇದಕ್ಕೆ ಕಾರಣವಿಷ್ಟೇ ಪಂಚಮ ಸ್ಥಾನವಿದ್ದು ವಿದ್ಯಾ, ಬುದ್ಧಿ, ಜ್ಞಾನ, ಶಿಕ್ಷಣ ಈ ಎಲ್ಲ ವಿಷಯಗಳ ಕಾರಕ ಸ್ಥಾನವು. ವಿದ್ಯೆಗಿಂತ ಜ್ಞಾನ ಬುದ್ಧಿಗಳ ವಿಷಯವಾಗಿ ಹೆಚ್ಚು ವಿವರಿಸ

ಲಾಗುತ್ತದೆ. ಬುದ್ಧಿಯು ಆಳ, ಎತ್ತರ, ವೈಶಾಲ್ಯಗಳ ಕಲ್ಪನೆ ಈ ಸ್ಥಾನ ದಿಂದಲೇ ಬರುತ್ತದೆ. ಆಧುನಿಕ ಶಿಕ್ಷಣ ಕ್ರಮದಂತೆ ಯಾವುದೇ ವಿಷಯದಲ್ಲಿ ಯಾವುದೇ ಕೋರ್ಸುಗಳಲ್ಲಿ ಪದವಿ(Degree)ಇಲ್ಲವೇ ಅನೇಕ ಪದವಿಗಳನ್ನು ಪಡೆಯಲು ಅಷ್ಟೇ ಏಕೆ ಸಂಶೋಧನೆಮಾಡಿ ಪ್ರಬಂಧ ಮಂಡಿಸಿ ಡಾಕ್ಟರೇಟ ಪದವಿ ಪಡೆಯಲು ಇಲ್ಲವೆ ಗೌರವ ಡಾಕ್ಟರೇಟ ಪಡೆಯಲು ಸಹ ಪಂಚಮ ಸ್ಥಾನವನ್ನೇ ಪರಿಶಿಲೀಸಬೇಕು. ಬುದ್ಧಿ, ಜ್ಞಾನದ ಪೋಷಕ, ಪೂರಕ ಕಾರಕ ಸ್ಥಾನವೆಂದರೆ ಪಂಚಮಸ್ಥಾನವು ಪಂಚಮ ಸ್ಥಾನವಲ್ಲಿ ಬಲಾಢ್ಯ ಗ್ರಹ ಹಾಗೂ ಪಂಚಮೇಶ ಬಲಾಢ್ಯನಿರುವ ಜಾತಕನಿಗೆ ಪದವಿ ಪಡೆಯಲು ಪದವಿ ಸಂಪಾದಿಸಲು ಸುಲಭವಾಗುತ್ತದೆ.

ಇದು ಅಲ್ಲದೇ ಪಾಂಡಿತ್ಯ ಪ್ರತಿಭೆಗೆ ಸ್ಥಾನವೂ ಪಂಚಮಸ್ಥಾನವೇ ಇರುತ್ತದೆ. ಇದೂ ಅಲ್ಲದೇ ಯಾರೊಬ್ಬ ವಿದ್ಯಾರ್ಥಿಗೆ ಪ್ರತಿಭಾಶಿಷ್ಯವೇತನ ದೊರೆಯುವುದೇ ಹೇಗೆ ಎಂಬುದಕ್ಕೆ ಉತ್ತರಿಸಬೇಕಾದರೆ ಪಂಚಮಸ್ಥಾನವನ್ನೇ ಪರಿಶೀಲಿಸಬೇಕಾಗುತ್ತದೆ. ಆಧುನಿಕ ಶಿಕ್ಷಣ ಕ್ರಮದಂತೆ ಥೇರಿ ಪರೀಕ್ಷೆಗಳಲ್ಲಿ ಹೆಚ್ಚಿನ ಗುಣ ಸಂಪಾದಿಸಲು ಪಂಚಮಸ್ಥಾನವೇ ಕಾರಕಸ್ಥಾನವು ಸ್ಪರ್ಧಾತ್ಮಕ ಪರೀಕ್ಷೆಗಳಿಗೂ ಯಶಪಡೆಯಲು ಪಂಚಮಸ್ಥಾನವನ್ನೇ ಪರಿಶಿಲೀಸಬೇಕಾಗುತ್ತದೆ.ಆದರೆ ಯಶಪಡೆದು ಆಯ್ಕೆ ಆಗಲು ಮಾತ್ರ ಪಂಚಮದೊಂದಿಗೆ ನವಮಸ್ಥಾನವನ್ನು ಪರಿಶೀಲಿಸಬೇಕಾಗುತ್ತದೆ. ಯಾರೊಬ್ಬ ವಿದ್ಯಾರ್ಥಿಯ ತರಗತಿ, ಶ್ರೇಣಿ, ದರ್ಜೆ, ವರ್ಗ, ರ್‍ಯಾಂಕಗಳನ್ನು ಪಡೆಯಲು ಕೂಡ ಪಂಚಮಸ್ಥಾನದಲ್ಲಿಯ ಗ್ರಹ ಹಾಗೂ ಪಂಚಮೇಶನ ಬಲಾಬಲವನ್ನು ಪರಿಶೀಲಿಸುವುದು. ಅತ್ಯವಶ್ಯ.

6) **ತೃತೀಯ ಸ್ಥಾನದ ಬಲಾಬಲ :—** ತೃತೀಯ ಸ್ಥಾನವು ಶಿಕ್ಷಣದ ವಿಷಯವಾಗಿ ಬಹಳೇ ಮಹತ್ವದ್ದಿದೆ. ಕಾರಣ ಹಿಂದಿನ ಶಿಕ್ಷಣ ಪದ್ಧತಿಯಲ್ಲಿ ವಿದ್ಯಾರ್ಥಿಯ ಸ್ಮರಣಶಕ್ತಿಗೆ ಮಹತ್ವ ಕೊಡುತ್ತಿದ್ದರು ಗುರುಕೆಲ ಪದ್ಧತಿಯಂತೆ ವಿದ್ಯಾರ್ಥಿಗಳು ವಿಷಯಗಳನ್ನು ಬಾಯಿಪಾಠ (ಉರಲು) ಮಾಡಿ ಒಪ್ಪಿಸುವ ಪದ್ಧತಿ ಬಹಳ ಇತ್ತು, ಅಲ್ಲದೇ ಥೇರಿಗೆ ಬಹಳ ಮಹತ್ವ

ಕೊಡುತ್ತಿದ್ದರು. ಹಿಂದೆ ಹೇಳಿದಂತೆ ಇಂದು ಶಿಕ್ಷಣದಲ್ಲಿಆಮೂಲಾಗ್ರ ಬದಲಾವಣೆಯಾಗಿದೆ ಕೇವಲ ಥೇರಿಯಲ್ಲಿ ಚೆನ್ನಾಗಿಪೇಪರ ಬರೆದರೆ ಸಾಲದು ಪ್ರಯೋಗ ಶಾಲೆಯಲ್ಲಿ ಪ್ರತ್ಯಕ್ಷಕೀಯ ಜ್ಞಾನವನ್ನು ಪಡೆದು ಪ್ರತ್ಯಕ್ಷಕೀಯ ಪರೀಕ್ಷೆಯಲ್ಲಿ ಉತ್ತೀರ್ಣನಾಗಬೇಕಾಗುತ್ತದೆ. ಕೇವಲ ಪ್ರತ್ಯಕ್ಷಕೀಯ ಜ್ಞಾನ ಪುಸ್ತಕೀಯ ಪುಸ್ತಕೀಯ ಶಿಕ್ಷಣಸಾಲದು ಪ್ರಯೋಗ ಶಾಲೆಯಲ್ಲಿ ಸ್ಥಾನವೂ ಪ್ರಾತ್ಯಕ್ಷಕೀಯ ಸ್ಥಾನವೂ ಆದ ತೃತೀಯಸ್ಥಾನದ ಬಲಾಬಲದ ಮೇಲೆಅವಲಂಬಿಸಿದೆ. ಅಂದರೆ ತೃತೀಯಸ್ಥಾನದಲ್ಲಿ ಬಲಾಢ್ಯಗ್ರಹ ಇದ್ದಿವೆ ಬಲಾಢ್ಯಗ್ರಹಗಳಿದ್ದು, ತೃತೀಯೇಶನೂ ಬಲಾಢ್ಯನಿದ್ದ ವಿದ್ಯಾರ್ಥಿಗಳು ಪ್ರಯೋಗಶಾಲೆಯಲ್ಲಿ ಜ್ಞಾನಪಡೆದು ಪರೀಕ್ಷೆಯಲ್ಲಿ ಯಶ ಪಡೆಯುತ್ತಾರೆ. ಹೆಚ್ಚು ಗುಣ ಸಂಪಾದಿಸುತ್ತಾರೆ. ಇದಲ್ಲದೇ ಡ್ರಾಯಿಂಗ, ಪೇಂಟಿಗ್, ವೆಲ್ಡಿಂಗ್, ಮಿಲಿಂಗ, ಟರ್ನಿಂಗ, ಡ್ರಿಲಿಂಗ, ಶೀಥ ಟುಲಮೆಕಿಂಗ್, ಫೌಂಡರಿ, ಗ್ರೆಂಡಿಂಗ ಪ್ಯಟರ್ನ ಮೇಕಿಂಗ್, ಪ್ಲಾಂಬಿಗ್ ಡ್ರಾಫ್ಟಿಂಗ ಆಪ್ರೇಟಿಂಗ, ಇಲೆಕ್ಟ್ರೀಶೀಯನ್ ವೈರಮನ ಲೈಬ್ರರೀಸಾಯನ್ಸ ನರ್ಸಿಂಗ್ ಮಿಡವಾಯರಿ ಕಂಪೌಂಡರ ಫೋಟೋಗ್ರಾಫ ಟೆಕ್ನೀಶಿಯನ್ ಇವೇ ಮೊದಲಾದ ತಾಂತ್ರಿಕ ಅಲ್ಪಾವಧಿಯ ಕೋರ್ಸಗಳು ಕೆಲ ಇಂಜನೀಯರಿಂಗ ಕೋರ್ಸಗಳಿಗೂ ಕೆಲ ಮೆಡಿಕಲ್ ಕೋರ್ಸಗಳಿಗೂ ವಿದ್ಯೆಪಡೆಯಲು ತೃತಿಯಸ್ಥಾನವನ್ನು ಪರಿಶೀಲಿಸ ಬೇಕಾಗುತ್ತದೆ. ಆದುದರಿಂದ ಇಂದಿನ ಶಿಕ್ಷಣಪದ್ಧತಿಯಂತೆ ತೃತೀಯ ಸ್ಥಾನದ ಬಲಾಬಲವನ್ನು ಪರಿಶೀಲಿಸುವುದು ಅತ್ಯಾವಶ್ಯವು ತೃತೀಯ ಸ್ಥಾನದಲ್ಲಿ ದುರ್ಬಲ, ನಿರ್ಬಲಗ್ರಹಗಳಿದ್ದು, ತೃತೀಯೇಶನೂ ದುರ್ಬಲ ನಿರ್ಬಲನಿದ್ದ ವಿದ್ಯಾರ್ಥಿಗಳು ಮೇಲೆಕಂಡ ಕೋರ್ಸುಗಳಲ್ಲಿ ವಿಷಯಗಳಲ್ಲಿ ಜ್ಞಾನ ಪಡೆಯಲು ಹಾಗೂ ಪ್ರತ್ಯಕ್ಷಕೆಯ ಪರೀಕ್ಷೆಯಲ್ಲಿಯಶಪಡೆಯಲು ಹೊರಾಡಬೇಕಾಗುತ್ತದೆ.

2) **ದ್ವಿತೀಯ ಸ್ಥಾನದ ಬಲಾಬಲ :** ಶಿಕ್ಷಣದ ವಿಷಯವಾಗಿ ಪಂಚಮ ಸ್ಥಾನ ಹಾಗು ತೃತೀಯ ಸ್ಥಾನದ ನಂತರ ದ್ವಿತೀಯ ಸ್ಥಾನವನ್ನು ಪರಿಶೀಲಿಸಬೇಕಾಗುತ್ತದೆ. ದ್ವಿತೀಯ ಸ್ಥಾನಕ್ಕೆ **ವಾಕ್‌ಸ್ಥಾನ** ವೆನ್ನುತ್ತಾರೆ. ವಾಗೇಶ ದುರ್ಬಲನಿದ್ದರೆ ಮೌಖಿಕ ಪರೀಕ್ಷೆಯಲ್ಲಿ ತೊಂದರೆಯಾಗುತ್ತದೆ. ವಾಗೇಶ ಬಲಾಢ್ಯನಿದ್ದರೆ ಮೌಖಿಕ ಪರೀಕ್ಷೆಯಲ್ಲಿ ಸುಲಭವಾಗಿ ಯಶ

ಪಡೆಯುತ್ತಾನೆ. ಅಲ್ಲದೆ ಶಿಕ್ಷಕರ ತರಬೇತಿ ಕೋರ್ಸುಗಳು ಸಂಗೀತ ಶಿಕ್ಷಣದ ಕೋರ್ಸುಗಳೇ ಮೊದಲಾದ ಕೋರ್ಸುಗಳಲ್ಲಿ ಯಶಸ್ಸು ಪಡೆಯಲು ದ್ವಿತೀಯ ಸ್ಥಾನದಲ್ಲಿರುವ ಗ್ರಹ ಹಾಗೂ ದ್ವಿತೀಯೇಶ ಬಲಾಢ್ಯನಿರಬೇಕು. ಶಿಕ್ಷಣ ಪಡೆಯಲು ಈ ಸ್ಥಾನ ಹೆಚ್ಚು ಸಹಕಾರಿಯಾಗಿದೆ. ಪರೀಕ್ಷಾ ದೃಷ್ಟಿಯಿಂದ ಅದರಲ್ಲಿಯೂ ಮೌಖಿಕ ಪರೀಕ್ಷೆಯ ದೃಷ್ಟಿಯಿಂದ ಈ ಸ್ಥಾನವು ಮಹತ್ವದ್ದಾಗಿದೆ.

8) **ಶುಭಾ-ಅಶುಭ ಯೋಗಗಳ ವಿಚಾರ :** ಯಾರೊಬ್ಬರ ಶಿಕ್ಷಣದ ವಿಷಯವಾಗಿ ತಿಳಿದು ಕೊಳ್ಳಲು ಅವರ ಜಾತಕದಲ್ಲಿಯ ಶುಭಾ-ಅಶುಭ ಯೋಗಗಳು ಕೂಡ ಮಹತ್ವದ್ದಾಗಿರುತ್ತವೆ. ಕೆಲ ಶುಭ-ಅಶುಭ ಯೋಗಗಳ ವಿವರಣೆಯನ್ನು ಈ ಕೆಳಗಿನಂತೆ ಬರೆಯಲಾಗಿದೆ.

1] ಪಂಚಮೇಶನು ಬಲಾಢ್ಯನಾಗಿ 1-2-4-5-9-10-11 ಈ ಸ್ಥಾನಗಳಲ್ಲಿದ್ದರೆ ಶಿಕ್ಷಣಕ್ಕೆ ಪೋಷಕನು.

2] ಪಂಚಮೇಶನು ದುರ್ಬಲನಾಗಿ 6-8-12 ಈ ಸ್ಥಾನಗಳಲ್ಲಿದ್ದರೆ ಶಿಕ್ಷಣಕ್ಕೆ ಹಾನಿಕಾರಕನು.

3] ಬಲಾಢ್ಯಗುರು ಹಾಗೂ ಬಲಾಢ್ಯ ಪಂಚಮೇಶನಿದ್ದ ಜಾತಕನ ಶಿಕ್ಷಣ ಸುಗಮವಾಗಿ ಮುಗಿಯುತ್ತದೆ.

4] ತೃತೀಯ ಸ್ಥಾನದಲ್ಲಿ ಬಲಾಢ್ಯ ಗ್ರಹ ಹಾಗೂ ತೃತಿಯೇಶ ಮತ್ತು ಮಂಗಳ ಬಲಾಢ್ಯನಿದ್ದ ಜಾತಕನಿಗೆ ತಾಂತ್ರಿಕ ಶಿಕ್ಷಣವು ಸರಿ ಇದೆ

5] ಬುಧ. ಗುರು. ಹಾಗೂ ಪಂಚಮೇಶರು ಬಲಾಢ್ಯರಿದ್ದ ಜಾತಕರು ಥೇರಿ ಪೇಪರಿನಲ್ಲಿ ನಿಷ್ಣಾತರು ಹಾಗೂ ಹೆಚ್ಚು ಗುಣಗಳನ್ನು ಸಂಪಾದಿಸುತ್ತಾರೆ.

6] ಶನಿ, ಮಂಗಳ, ಹಾಗೂ ತೃತಿಯೇಶ ಬಲಾಢ್ಯರಿದ್ದ ಜಾತಕರು ಪ್ರಯೋಗ ಶಾಲೆಯಲ್ಲಿಯ ಕೆಲಸ ಹಾಗೂ ಪ್ರತ್ಯೇಕೀಯ ಪರೀಕ್ಷೆಯಲ್ಲಿ ಪ್ರವೀಣರು.

7] ಬುಧ, ಗುರು ಬಲಾಢ್ಯರಿದ್ದರೆ ಕಲೆ ಹಾಗೂ ವಾಣಿಜ್ಯ ಕೋರ್ಸ್‌ಗಳಲ್ಲಿ ಯಶಸ್ಸು ಪಡೆಯುತ್ತಾರೆ.

8] ಶನಿ, ಮಂಗಳ ಬಲಾಢ್ಯರಿದ್ದ ಜಾತಕರು ಮೆಡಿಕಲ್ ಹಾಗೂ ಇಂಜಿನೀಯರಿಂಗ ಕೋರ್ಸ್‌ಗಳಲ್ಲಿ ಯಶಸ್ಸು ಪಡೆಯುತ್ತಾರೆ.

9] ದ್ವಿತೀಯ ಹಾಗೂ ಬುಧ, ಗುರು, ಚಂದ್ರರು ಬಲಾಢ್ಯರಿದ್ದ ಜಾತಕರು ಮೌಖಿಕ ಪರೀಕ್ಷೆಯಲ್ಲಿ ಯಶ ಪಡೆಯುತ್ತಾರೆ.

10] ಶನಿ–ಮಂಗಳ, ಶನಿ–ರವಿ, ಶನಿ–ಚಂದ್ರರ ಪ್ರತಿಯೋಗ ಲಾಭ-ಪಂಚಮ, ತೃತೀಯ-ಭಾಗ್ಯ, ಚತುರ್ಥ-ದಶಮದಲ್ಲಿದ್ದರೆ ಶಿಕ್ಷಣಕ್ಕೆ ವಿಘ್ನಗಳು ಬಹಳ.

11] ಬಲಾಢ್ಯ ಗುರುವು, ಲಗ್ನ, ಪಂಚಮ, ಲಾಭ, ನವಮ ಈ ಯಾವುದೊಂದು ಸ್ಥಾನದಲ್ಲಿದ್ದ ವಿದ್ಯಾರ್ಥಿಗಳಿಗೆ ಶಿಕ್ಷಣವನ್ನು ಸುಗಮವಾಗಿ ಪೂರ್ತಿಸುತ್ತಾರೆ.

12] ಪಂಚಮೇಶನು ಸ್ಥಾನಬಲದವನೂ ರಾಶಿ ಬಲದವನೂ ಇದ್ದರೆ ನಿರ್ವಿಘ್ನವಾಗಿ ಶಿಕ್ಷಣ ಪೂರ್ತಿಯಾಗುತ್ತದೆ. ಆದರೆ ಪಂಚಮೇಶನು ಕೇವಲ ರಾಶಿ ಬಲದವನಿದ್ದು ಸ್ಥಾನ ಬಲದವನಿದ್ದರೆ ಶಿಕ್ಷಣ, ಕೋರ್ಸ್ ಅರ್ಧಕ್ಕೆ ನಿಂತು ಕೆಲ ವರುಷಗಳ ನಂತರ ಪೂರ್ತಿ ಆಗುತ್ತದೆ. ಆದರೆ ಪಂಚಮೇಶನು ಸ್ಥಾನಬಲದವಮಾತ್ರನಿದ್ದು ರಾಶಿಬಲದವನ್ನಿಲ್ಲದಿದ್ದರೆ ಅನೇಕ ವಿಘ್ನಗಳಿಂದ ಶಿಕ್ಷಣ ಪೂರ್ತಿಆಗುತ್ತದೆ.

9] **ಗೋಚರೀ ಗ್ರಹಗಳ ಪರಿಭ್ರಮಣದ ಪರಿಣಾಮ ಹಾಗೂ ಮಹರ್ದಶೆ, ಅಂತರರ್ದಶೆಗಳ ಪರಿಣಾಮ :** ಯಾರೊಬ್ಬರ ಶಿಕ್ಷಣದ ವಿಷಯವಾಗಿ ವಿಚಾರಿಸುವಾಗ ಗೋಚರೀ ಗ್ರಹಗಳ ಪರಿಭ್ರಮಣದ ಪರಿಣಾಮ ಅಷ್ಟೊಂದು ಇರಲಿಕ್ಕಿಲ್ಲ, ಇರಬಹುದು. ಆದರೆ ಶಿಕ್ಷಣದ ವಿಷಯವಾಗಿಯೂ ಚುನಾವಣೆಯ ವಿಷಯವಾಗಿಯೂ ಗೋಚರೀ ಗ್ರಹಗಳ ಪರಿಭ್ರಮಣದ ಪ್ರಭಾವವು ಬಹಳವಾಗುತ್ತದೆ. ಇಷ್ಟೇ ಅಲ್ಲಾ ಈ ವಿದ್ಯಾರ್ಥಿ ಜೀವನದಲ್ಲಿ ಆದ ಗೋಚರೀ ಗ್ರಹಗಳ ಪ್ರಭಾವವು ವ್ಯಕ್ತಿಯ ಜೀವನದ

ಉದ್ದಕ್ಕೂ ಅನುಭವಿಸಬೇಕಾಗುತ್ತದೆ. ಉದಾಹರಣೆಗೆ ಯಾರೊಬ್ಬ ವಿದ್ಯಾರ್ಥಿಯ ಪಂಚಮದಲ್ಲಿ ಬಲಾಢ್ಯ ಗುರು ಹಾಗೂ ಪಂಚಮೇಶನೂ ಬಲಾಢ್ಯನಿದ್ದಾನೆ ಹಾಗೂ ಚಂದ್ರ, ಬುಧರುಬಲಾಢ್ಯರಿದ್ದಾರೆ. ಶನಿ.ಮಂಗಳರು ಕೂಡ ಬಲಾಢ್ಯರಿದ್ದಾರೆ. ಹೀಗಿದ್ದು ಕೂಡ ವಿದ್ಯಾರ್ಥಿದೆಶೆಯಲ್ಲಿ ಸಾಡೇಸಾತಿ, ಪಂಚಮಾಷ್ಟಮ ಶನಿ ಗೋಚರೀಯಿಂದ ಗುರುವು 4–6 8–12 ನೇಯವನಾಗಿ ಬಂದಾಗ ವಿದ್ಯಾರ್ಥಿಯ ಬುದ್ಧಿಮಟ್ಟ ಚನ್ನಾಗಿದ್ದರೂ ಸಾಡೇಸಾತಿ, ಪಂಚಮಾಷ್ಟಮ ಶನಿ 4–6–8–12 ನೇ ಅಶುಭ ಗುರುವಿನ ಪರಿಭ್ರಮಣದಿಂದಾಗಿ ಆ ವಿದ್ಯಾರ್ಥಿ ಪರೀಕ್ಷಾಸಮಯದಲ್ಲಿ ಹೆಚ್ಚು ಗುಣ ಪಡೆಯಲು ಅಸಮರ್ಥನಾಗುತ್ತಾನೆ. ಅದೂ ಕೂಡ ಎಸ್. ಎಸ್. ಎಲ್.ಸಿ. ಸಮಯದಲ್ಲಿ ಪಿ.ಯು.ಸಿ. ದ್ವಿತೀಯ ವರುಷವಿರುವ ಸಮಯದಲ್ಲಿ ಮೇಲೆ ಬರೆದ ಗ್ರಹಸ್ಥಿತಿ ಇದ್ದರೆ ಎಂಥ ಬುದ್ಧಿವಂತ, ಕುಶಾಗ್ರಮತಿ ಕ್ಲಾಸಿಗೆ. ಶಾಲೆಗೆ ಕಾಲೇಜುಗಳಿಗೆ .ಪ್ರಥಮ ನೆನೆಸಿಕೊಂಡ ವಿದ್ಯಾರ್ಥಿ ಅನುತ್ತೀರ್ಣನಾಗುತ್ತಾನೆ ಇಲ್ಲವೆ ಕಡಿಮೆ ಗುಣ ಸಂಪಾದಿಸುವುದರಿಂದ ಡಾಕ್ಟರ,ಇಂಜನೀಯರ ಅಧಿಕಾರಿ ಆಗಬೇಕೆಂಬ ಕನಸು ನನಸಾಗದೇ ಇರುತ್ತದೆ. ಇಂಥಹ ಸಾವಿರಾರು ವಿದ್ಯಾರ್ಥಿಗಳ ಜಾತಕ ನೋಡಿದ ಅನುಭವವಿದೆ. ಆದುದರಿಂದ ಯಾರೊಬ್ಬ ಜಾತಕನ ಶಿಕ್ಷಣದ ವಿಷಯವಾಗಿ ವಿಚಾರಿಸುವಾಗ ಅವರ ಮೂಲ ಜಾತಕದೊಂದಿಗೆ ಗೋಚರೀ ಗ್ರಹಗಳ ಪರಿಭ್ರಮಣದ ಪರಿಣಾಮ, ಮಹರ್ದಶೆ ಅಂತರರ್ದಶೆಗಳ ಪರಿಣಾಮಗಳನ್ನು ತುಲನಾತ್ಮಕವಾಗಿ ಪರಿಶೀಲಿಸಬೇಕು ಮೂಲ ಜಾತಕದ ಪ್ರಕಾರ ಅವರ ಶಿಕ್ಷಣದ ಸ್ಥಿತಿಗತಿ ಹೇಗಿದೆ ? ಬೌದ್ಧಿಕಮಟ್ಟ ಹೇಗಿದೆ ? ಪುಟ 96 ರಿಂದ 109 ಪುಟದವರೆಗೆ ವಿವರಿಸಿದಂತೆ ಜಾತಕನು ಯಾವಯಾವ ಪ್ರಕಾರದ ವಿಷಯ ಕೋರ್ಸುಗಳಲ್ಲಿ ಯಶಸ್ಸು ಸಾಧಿಸಬಹುದು ? ಶಿಕ್ಷಣಕ್ಕೆ ಇರುವ ಅಡೆತಡೆಗಳಾವವು ? ಯಾವ ಯಾವ ಪ್ರಕಾರದ ಪರೀಕ್ಷೆಯಲ್ಲಿ ತೇರ್ಗಡೆಯಾಗಬಹುದು ? ವಿದ್ಯಾರ್ಥಿಗಳನ್ನು ಕಾಡುತ್ತಿರುವ ಸಮಸ್ಯೆಗಳಾವವು ? ಈ ಎಲ್ಲ ವಿಷಯಗಳನ್ನು ಅವರವರ ಜಾತಕದ ಆಧಾರದ ಮೇಲಿಂದ ಅಭ್ಯಸಿಸಿ ಆ ಬಳಿಕ ಹಿಂದಿನ ಪುಟದಲ್ಲಿ ವಿವರಿಸಿದಂತೆ ಗೋಚರೀ ಗ್ರಹಗಳ ಪರಿಭ್ರಮಣದ ಪರಿಣಾಮ ಹಾಗೂ ಮಹರ್ದಶೆ ಅಂತರರ್ದಶೆಗಳ

ಪರಿಣಾಮ ಇವನ್ನು ಕುಲಂಕುಷವಾಗಿ ಪರಿಶೀಲಿಸಲೇಬೇಕು ಏಕೆಂದರೆ ವಿದ್ಯಾರ್ಥಿ ಜೀವನದ ಅವಧಿಯಲ್ಲಿ ಅಂದರೆ ವಯಸ್ಸಿನ 13 ರಿಂದ 23ರ ವಯಸ್ಸಿನವರೆಗೆ ಅದರಲ್ಲಿಯೂ **ಟೀನಏಜ** ಅಂದರೆ 13 ರಿಂದ 19ರ ವರೆಗಿನ ಕಾಲ ಬಹಳೇ ಮಹತ್ವದ್ದು. ಈ ಅವಧಿಯಲ್ಲಿ ಅವರ ಇಚ್ಛೆಯಂತೆ ಪರೀಕ್ಷೆ ಗಳಲ್ಲಿ ಹೆಚ್ಚು ಗುಣ ಪಡೆಯಲಿಲ್ಲದಿದ್ದರೆ ಅವರ ಇಚ್ಛೆಯಂತೆ ಕೋರ್ಸುಗಳಿಗೆ ಪ್ರವೇಶ ದೊರೆಯದಿದ್ದರೆ ಅಂಥ ವಿದ್ಯಾರ್ಥಿಗಳು ನಿರಾಶರಾಗಿ ಹತಾಶರಾಗಿ ಅಡ್ಡದಾರಿ ಬೀಳಬಹುದಾಗಿದೆ. ವ್ಯಸನಾಧೀನರಾಗಬಹುದಾಗಿದೆ. ಮನೆ ಯಿಂದ ಪಲಾಯನ ಮಾಡಬಹುದಾಗಿದೆ. ಇದಕ್ಕೆಲ್ಲ ಗೋಚರೀ ಗ್ರಹಗಳ ಪರಿಭ್ರಮಣದ ಪರಿಣಾಮ ಈ ಗೋಚರಿ ಗ್ರಹಗಳ ಪರಿಭ್ರಮಣದ ಅವಧಿ ಯೆನೋ ಕಡಿಮೆ ಇದೆ. ಗುರು ಅಶುಭನಾಗಿ ಬಂದಾಗ ಒಂದು ವರುಷ ಶನಿಯು ಅಶುಭನಾಗಿ ಬಂದಾಗ 2½ವರುಷ ಚಂದ್ರನು ಅಶುಭನಾಗಿ ಬಂದಾಗ ಎರಡು ಕಾಲ ದಿವಸ ಹೀಗಿದ್ದರೂ ಅವುಗಳ ಶುಭಾ–ಅಶುಭದ ಫಲ ಮಾತ್ರ ಜೀವನ ಉದ್ದಕ್ಕೂ ಇರುತ್ತದೆ. ಆದುದರಿಂದ ಯಾವ ಯಾವ ಗೋಚರೀ ಗ್ರಹಗಳ ಪರಿಭ್ರಮಣದ ಪರಿಣಾಮ ಹೇಗೆ ಹಾಗೂ ಯಾವ ಗ್ರಹಗಳ ಮಹರ್ದಶೆ ಅಂತರರ್ದಶೆಗಳು ಶುಭ ಫಲಕೊಡುತ್ತವೆ. ಯಾವ ಗ್ರಹಗಳ ಮಹರ್ದಶೆ ಅಂತರರ್ದಶೆ ಅಶುಭ ಫಲ ಕೊಡುತ್ತವೆ ಎಂಬುದನ್ನು ನೋಡುವಾ.

ಯಾರೊಬ್ಬರ ಆರ್ಥಿಕ ವಿಷಯವಾಗಿ ಅನೇಕ ಗೋಚರೀ ಗ್ರಹಗಳ ಪರಿಭ್ರಮಣದ ಶುಭಾ–ಅಶುಭ ಫಲಗಳನ್ನು ಪರಿಶೀಲಿಸಬೇಕಾಗುತ್ತದೆ. ಆದರೆ ಶಿಕ್ಷಣದ ವಿಷಯವಾಗಿ ಪರೀಕ್ಷೆಯ ವಿಷಯವಾಗಿ ಗುರು, ಶನಿ, ಚಂದ್ರ, ರವಿ ಕ್ರಮಶಃ ಈ ನಾಲ್ಕೇ ನಾಲ್ಕು ಗ್ರಹಗಳ ಶುಭಾ–ಅಶುಭ ಫಲ ಗಳನ್ನು ಪರಿಶೀಲಿಸಬೇಕಾಗುತ್ತಿದ್ದು ಅವುಗಳ ವಿವರಣೆ ಹೀಗಿದೆ.

1] **ಗುರುವಿನ ಗೋಚರೀ ಫಲ :** ಗುರುವು ಗೋಚರಿಯಿಂದ 2–5–7–9–11 ನೇಯವನಾಗಿ ಬಂದಾಗ ಶುಭ ಫಲಗಳನ್ನು ಕೊಡುತ್ತಾನೆ. ಅಂದರೆ ಇಚ್ಛಿಸಿದ ವಿಷಯಗಳ, ಇಚ್ಛಿಸಿದ ಕೋರ್ಸುಗಳ ಪ್ರವೇಶ ಪಡೆದು ಎಲ್ಲ ಪ್ರಕಾರದ ಪರೀಕ್ಷೆಗಳಲ್ಲಿ ಅಂದರೆ ಥೇರಿ, ಪ್ರತ್ಯಕ್ಷಿಕೆ, ಮೌಖಿಕ, ಈ ಎಲ್ಲಾ

ಪ್ರಕಾರದ ಪರೀಕ್ಷೆಗಳಲ್ಲಿ ಶ್ರೇಣಿ, ದರ್ಜೆ, ರ್‍ಯಾಂಕ, ವರ್ಗಗಳಲ್ಲಿ ತೇರ್ಗಡೆ ಯಾಗುವುದಲ್ಲದೇ ರ್‍ಯಾಂಕು ಸಹ ಪಡೆಯಬಹುದಾಗಿದೆ. ಪ್ರತಿಭಾ ಶಿಷ್ಯವೇತನ, ಸಾಲ ಶಿಷ್ಯವೇತನ, ಪುಕ್ಕಟೆ ಶಿಕ್ಷಣದ ಸೌಲಭ್ಯ ಸಿಗಬಹುದಾಗಿದೆ. ವಿದೇಶಿ ಯಾತ್ರೆ ಸಹ ಕೈಕೊಳ್ಳಬಹುದಾಗಿದೆ.

ಗುರುವು ಗೋಚರೀಯಿಂದ 4-6-8-12 ನೇಯವನಾಗಿ ಬಂದಾಗ ಇಚ್ಛಿಸಿದ ವಿಷಯಗಳಲ್ಲಿ ಇಚ್ಛಿಸಿದ ಕೋರ್ಸುಗಳಲ್ಲಿ ಪ್ರವೇಶ ದೊರೆಯಲಾರದು. ಇಲ್ಲವೇ ಪ್ರವೇಶ ದೊರೆತರು ಕೋರ್ಸುಗಳನ್ನು ಮುಗಿಸಲು ತೊಂದರೆಯಾಗುತ್ತದೆ. ಇಲ್ಲವೆ ಹೆಚ್ಚು ಗುಣ ಸಂಪಾದಿಸಲಾಗದು ಇಲ್ಲವೇ ಅನುತ್ತೀರ್ಣನಾಗಬಹುದು. ಅಲ್ಲದೆ ಕಾಫಿ ಮಾಡಿ ಡಿಬಾರ ಆಗ ಬಹುದಾಗಿದೆ ಅಥವಾ ರ್‍ಯಾಗಿಂಗ್ ಆಗಬಹುದಾಗಿದೆ. ಮನೆಯಲ್ಲಿಯ ವಿಷಮವಾತಾವರಣದಿಂದಲೂ ಶಾರೀರಿಕ ಪೀಡೆಯಿಂದಲೂ ಆರ್ಥಿಕ ಮುಗ್ಗಟ್ಟಿನಿಂದಲೂ ಅಧ್ಯಾಪಕರ, ಗೈಡುಗಳ ಅಸಹಕಾರದಿಂದಲೂ ಪಠ್ಯೇತರ ಚಟುವಟಿಕೆಗಳಿಂದಲೂ ಶಿಕ್ಷಣಕ್ಕೆ ವಿಘ್ನ ಬರಬಹುದಾಗಿದೆ.

ಗೋಚರೀಯಿಂದ ಗುರುವು 3ನೇ 10ನೇ ಯವನಾಗಿ ಬಂದಾಗ ಶುಭಾ-ಅಶುಭಗಳ ಮಿಶ್ರಫಲ ಅಥವಾ ಯಥಾಸ್ಥಿತಿ ಮುಂದುವರೆಯುತ್ತದೆ.

2] **ಶನಿಯ ಗೋಚರೀ ಫಲ :** ಶನಿಯು ಗೋಚರೀಯಿಂದ 3-6-10-11 ನೇಯವನಾಗಿ ಬಂದಾಗ ಶುಭ ಫಲವನ್ನು ಕೊಡುತ್ತಾನೆ. ಅಂದರೆ ಇಚ್ಛಿಸಿದ ವಿಷಯಗಳ ಇಚ್ಛಿಸಿದ ಕೋರ್ಸುಗಳಲ್ಲಿ ಪ್ರವೇಶ ದೊರೆತು ಕೋರ್ಸುಗಳನ್ನು ನಿರ್ವಿಘ್ನವಾಗಿ ಪೂರ್ತಿಸುತ್ತಾನೆ. ಅಲ್ಲದೇ ಎಲ್ಲ ಪ್ರಕಾರದ ಪರೀಕ್ಷೆಗಳಲ್ಲಿ ತೇರ್ಗಡೆ ಆಗುತ್ತಾನೆ. ಇಷ್ಟೇ ಅಲ್ಲಾ ಶ್ರೇಣಿ, ದರ್ಜೆ, ವರ್ಗ, ರ್‍ಯಾಂಕುಗಳನ್ನು ಪಡೆದು ಎಲ್ಲ ಪ್ರಕಾರದ ಶಿಷ್ಯವೇತನಗಳನ್ನು ಪಡೆಯಬಹುದಾಗಿದೆ ವಿದೇಶ ಯಾತ್ರೆಯನ್ನು ಕೈಕೊಳ್ಳಬಹುದಾಗಿದೆ.

ಶನಿಯು ಗೋಚರೀಯಿಂದ 1-2-4-5-8-12 ನೇಯವನಾಗಿ ಬಂದಾಗ ಇಚ್ಛಿಸಿದ ವಿಷಯ, ಕೋರ್ಸುಗಳಲ್ಲಿ ಪ್ರವೇಶ ದೊರೆಯಲಾರದು. ಅಲ್ಲದೇ

ಅನುತ್ತೀರ್ಣನಾಗಬಹುದಾಗಿದೆ. ಇಲ್ಲವೇ ಕಾಪಿ ಮಾಡಿ ಡಿಬಾರ ಆಗಬಹು ದಾಗಿದೆ. ರ್‍ಯಾಂಗಿಂಗ ಆಗಬಹುದಾಗಿದೆ. ಇಲ್ಲವೇ ಮನೆಯ ವಿಷಮ ವಾತಾವರಣದಿಂದಲೂ ಶಾರೀರಿಕ ಪೀಡೆಯಿಂದಲೂ ಪಠ್ಯೇತರ ಚಟುವಟಿಕೆ ಗಳಿಂದಲೂ ಅಧ್ಯಾಪಕರ, ಗೈಡುಗಳ ಅಸಹಕಾರದಿಂದಲೂ ಶಿಕ್ಷಣ ಕೋರ್ಸು ಮುಗಿಸಲು ತೊಂದರೆಗಳು ಉದ್ಭವಿಸುತ್ತವೆ ಇಲ್ಲವೇ ಅರ್ಧಕ್ಕೆ ನಿಲ್ಲಿಸಬಹು ದಾಗಿದೆ. ಆದರೆ ಶನಿಯು ಗೋಚರಿಯಿಂದ 7ನೇ ಹಾಗೂ 9ನೇ ಯವನಾಗಿ ಬಂದಾಗ ಶುಭಾ–ಅಶುಭ ಫಲ ಕೊಡದೇ ಯಥಾಸ್ಥಿತಿ ಮುಂದುವರೆಯುತ್ತವೆ ಅಥವಾ ಮಿಶ್ರ ಫಲಗಳು ದೊರೆಯುತ್ತವೆ.

3] **ಚಂದ್ರನ ಗೋಚರೀ ಫಲ :** ಚಂದ್ರನು ಗೋಚರಿಯಿಂದ 1-2-3-5-7-9-10-11 ನೇಯವನಾಗಿ ಬಂದಾಗ ಶುಭ ಫಲ ಕೊಡುತ್ತಾನೆ ಎರಡೂ ಕಾಲ ದಿನ ಚಂದ್ರನ ಗೋಚರೀ ಫಲದ ಮಹತ್ವ ಬಹಳವಿದೆ. ಈ ಮೇಲೆ ಬರೆದ ಶುಭ ಫಲವನ್ನು ಕೊಡುವನು ಅಂದರೆ ಎಲ್ಲ ಪ್ರಕಾರದ ಪರೀಕ್ಷೆಗಳಲ್ಲಿ ಎಲ್ಲ ವಿಷಯಗಳಲ್ಲಿ ಹೆಚ್ಚಿನ ಗುಣ ಪಡೆಯುತ್ತಾರೆ.

ಚಂದ್ರನು ಗೋಚರೀಯಿಂದ 4_6–8–12 ನೇಯವನಾಗಿ ಬಂದಾಗ ಶಾರೀರಿಕ ಪೀಡೆ, ಆರ್ಥಿಕ ಮುಗ್ಗಟ್ಟು ಮನೆಯಲ್ಲಿಯ ವಿಷಮ ವಾತಾವರಣ, ಪಠ್ಯೇತರ ಚಟುವಟೀಗಳಿಂದಲೂ ಕಠಿಣ ಪ್ರಶ್ನೆಗಳು ಬರುವದಿಂದಲೂ ಅಥವಾ ಅಭ್ಯಾಸ ಮಾಡದೇ ಇರುವ ಪಾಠಗಳಿಂದಾಗಿ ಪ್ರಶ್ನೆಗಳಿಗೆ ಉತ್ತರಿಸಲು ಕಠಿಣವಾಗುತ್ತದೆ.

4] **ರವಿಯ ಗೋಚರೀ ಫಲ :** ರವಿಯು ಗೋಚರೀಯಿಂದ 3–6–10–11 ನೇಯವನಾಗಿ ಬಂದಾಗ ಶುಭ ಫಲ ಕೊಡುತ್ತಾನೆ. ಒಂದು ತಿಂಗಳವರೆಗೆ ವಾಸ್ತವ್ಯ ಮಾಡುವ ರವಿಯ ಗೋಚರೀ ಫಲದ ಮಹತ್ವ ಬಹಳ ಇದೆ. ರವಿಯು ಗೋಚರೀಯಿಂದ ಶುಭನಾಗಿ ಬಂದಾಗ ಆ ತಿಂಗಳಲ್ಲಿ ಜರಗುವ ಎಲ್ಲ ಪ್ರಕಾರದ ಪರೀಕ್ಷೆಗಳಲ್ಲಿ ಯಶಸ್ಸು ಕೊಡುತ್ತಾನೆ. ವಿಶೇಷ ವಾಗಿ ಥೇರಿಗಿಂತ ಪ್ರತ್ಯಕ್ಷಿಕೆ ಹಾಗೂ ಮೌಖಿಕ ಪರೀಕ್ಷೆಗಳಲ್ಲಿ ಯಶಸ್ಸು ಕೊಡುತ್ತಾನೆ. ಅದರಲ್ಲಿ ಇಚ್ಛಿಸಿದ ಕೋರ್ಸುಗಳ, ವಿಷಯುಗಳ, ಶಾಲೆ,

ಕಾಲೇಜುಗಳ ಪ್ರವೇಶ ಪಡೆಯುವ ಸಮಯದಲ್ಲಿ ಗೋಚರಿಯಿಂದ ರವಿಯು ಶುಭನಾಗಿ ಬಂದಾಗ ಪ್ರವೇಶದ ಪ್ರಶ್ನೆ ಸುಲಭವಾಗಿ ಬಗೆ ಹರಿಯುತ್ತದೆ

ಗೋಚರೀಯಿಂದ 4_6–8_12 ನೇಯವನಾಗಿಬಂದಾಗ ಆಶುಭ ಫಲ ಕೊಡುತ್ತಾನೆ. ಅಶುಭನಾಗಿ ಬಂದಾಗ ಆ ತಿಂಗಳಲ್ಲಿ ಜರಗುವ ಎಲ್ಲ ಪ್ರಕಾರದ ಪರೀಕ್ಷೆಗಳಲ್ಲಿ ತೊಂದರೆಗಳು ಉದ್ಭವಿಸುತ್ತವೆ. ವಿಶೇಷವಾಗಿ ಮೌಖಿಕ ಸಂದರ್ಶನದ ಪರೀಕ್ಷೆಗಳಿದ್ದರೆ ಪ್ರತ್ಯಕ್ಷಿಕೆ ಹಾಗೂ ಮೌಖಿಕ ಪರೀಕ್ಷೆಗಳಿದ್ದರೆ ಅದನ್ನು ಎದುರಿಸುವುದು ಕಠಿಣವಾಗುತ್ತದೆ. ಅಲ್ಲದೇ ರವಿಯು ಅಶುಭನಾಗಿಬಂದಾಗ ಶಾರೀರಿಕ ಪೀಡೆ,ಆರ್ಥಿಕ ಮುಗ್ಗಟ್ಟು, ಶತ್ರು ಪೀಡೆ, ಮನೆಯಲ್ಲಿಯ ವಿಷಮ ವಾತಾವರಣ ಅಧ್ಯಾಪಕರ ಮೇಲ್ವಿಚಾರಕ ಅಸಹಕಾರವಾಗಬಹುದಾಗಿದೆ.ಆದರೆ ರವಿಯು 2ನೇ 5ನೇ 7ನೇ ಯವನಾಗಿ ಬಂದಾಗ ಶುಭಾ–ಅಶುಭ ಫಲದ ಮಿಶ್ರಿತ ಫಲ ದೊರೆಯುತ್ತವೆ.

ಹೀಗೆ ಗುರು ಚಂದ್ರ, ಶನಿ. ರವಿಗಳ ಗೋಚರೀ ಫಲದ ಪರಿಣಾಮ ಶಿಕ್ಷಣದ ಮೇಲೆ ಹೇಗಾಗುತ್ತದೆ ಎಂಬುದನ್ನು ವಿವರಿಸಿದ್ದಾಯಿತು. ಇನ್ನು ಮಹರ್ದಶೆ ಅಂತರರ್ದಶೆಗಳ ಫಲಗಳನ್ನು ನೋಡುವಾ.

## ದಶಾಪದ್ಧತಿಯಿಂದ ಶಿಕ್ಷಣದ ವಿಚಾರ

ಯಾರೊಬ್ಬ ವಿದ್ಯಾರ್ಥಿಯ ಅರ್ಥಾತ ಯಾರೊಬ್ಬ ಜಾತಕನ ಶೈಕ್ಷಣಿಕ ದೃಷ್ಟಿಯಿಂದ ಯಾವ ಯಾವ ಗ್ರಹಗಳ ಮಹರ್ದಶೆ, ಅಂತರರ್ದಶೆಗಳು ಶುಭ ಫಲವನ್ನು ಕೊಡತ್ತವೆ. ಯಾವ ಯಾವ ಗ್ರಹಗಳ ಮಹರ್ದಶೆ ಅಂತರರ್ದಶೆಗಳು, ಅಶುಭ ಫಲ ಕೊಡುತ್ತವೆ. ಇವುಗಳ ವಿವರಣೆ ಈ ಕೆಳಗಿನಂತೆ ವಿವರಿಸಲಾಗಿದೆ.

1) ಮೊದಲನೇಯದಾಗಿ ಜಾತಕನ ಜಾತಕದಲ್ಲಿ ಯಾವ ಗ್ರಹಗಳು ಬಲಾಢ್ಯರಿರುವವೋ ಆ ಗ್ರಹಗಳ ಮಹರ್ದಶೆ ಅಂತರರ್ದಶೆಗಳು ಶುಭ ಫಲವನ್ನು ಕೊಡುತ್ತವೆ. ಯಾವ ಗ್ರಹಗಳು ದುರ್ಬಲ, ನಿರ್ಬಲರಿರುವವೋ ಆ

ಗ್ರಹಗಳ ಮಹರ್ದಶೆ ಅಂತರದರ್ಶೆಗಳು ಅಶುಭ ಫಲವನ್ನು ಕೊಡುತ್ತವೆ. ಇದು ಕೇವಲ ಶಿಕ್ಷಣ ದೃಷ್ಟಿಯಿಂದ ಇರದೇ ಜೀವನದ ಎಲ್ಲ ದೃಷ್ಟಿಯಿಂದಲೂ ಗ್ರಹಗಳ ಬಲಾಬಲದ ಮೇಲೆ ಶುಭ-ಅಶುಭ ಫಲಗಳು ದೊರೆಯುತ್ತವೆ.

2) ಎರಡನೇಯದಾಗಿ ಮಹರ್ದಶೆ ಅಂತರರ್ದಶೆಗಳು ಒಂದೇ ಗ್ರಹದ ಕಾಲದಲ್ಲಿ ನಡೆಯುತ್ತಿದ್ದರೆ ಆ ಗ್ರಹದ ಬಲಾ ಬಲದ ಮೇಲೆ ಶುಭಾ-ಅಶುಭ ಫಲಗಳು ದೊರೆಯುತ್ತವೆ. ಬಲಾಢ್ಯ ಗ್ರಹದ ಮಹರ್ದಶೆಯಲ್ಲಿ ಅದರದೇ ಅಂತರರ್ದಶೆ ಹೆಚ್ಚು ಶುಭಫಲವನ್ನು ಕೊಡುತ್ತದೆ. ದುರ್ಬಲ ನಿರ್ಬಲ ಗ್ರಹದ ಮಹರ್ದಶೆಯಲ್ಲಿ ಅದರದೇ ಅಂತರರ್ದಶೆ ಹೆಚ್ಚು ಅಶುಭ ಫಲವನ್ನು ಕೊಡುತ್ತದೆ.

3) ಬಲಾಢ್ಯ ಗ್ರಹದ ಮಹರ್ದಶೆಯಲ್ಲಿ ಬಲಾಢ್ಯ ಮಿತ್ರ ಗ್ರಹದ ಅಂತರರ್ದಶೆಯ ಫಲವು ಶುಭವಿರುತ್ತದೆ. ಬಲಾಢ್ಯ ಗ್ರಹದ ಮಹರ್ದಶೆಯಲ್ಲಿ ದುರ್ಬಲ, ನಿರ್ಬಲ ಮಿತ್ರ ಗ್ರಹದ ಅಂತರರ್ದಶೆ ಅಶುಭ ಫಲಸಿಗುತ್ತದೆ. ಇದರಂತೆ ದುರ್ಬಲ, ನಿರ್ಬಲ ಗ್ರಹದ ಮಹರ್ದಶೆಯಲ್ಲಿ ಬಲಾಢ್ಯ ಮಿತ್ರ ಗ್ರಹದ ಅಂತರದಶೆಯು ಫಲವು ಮಿಶ್ರಿತ ವಿರುತ್ತದೆ. ಶುಭಾ-ಶುಭ ಮಿಶ್ರಿತವು,

4] ಬಲಾಢ್ಯ ಗ್ರಹದ ಮಹರ್ದಶೆಯಲ್ಲಿ ಬಲಾಢ್ಯ ಶತೃ ಗ್ರಹದ ಅಂತರರ್ದಶೆಯು ಫಲವು ಮಿಶ್ರಿತವಿರುತ್ತದೆ. ಮಿಶ್ರಫಲ ಏಕೆಂದರೆ ಮಹರ್ದಶೆಯು ಗ್ರಹ ಬಲಾಢ್ಯವಿರುತ್ತದೆ. ಆದರೆ ಅಂತರರ್ದಶೆಯ ಗ್ರಹವೇನೋ ಬಲಾಢ್ಯವಿದೆ. ಆದರೆ ಶತೃಗ್ರಹವಿರುವುದರಿಂದ ಆ ಗ್ರಹದ ಅಂತರರ್ದಶೆಯು ಅವಧಿ ಮಾತ್ರ ಶುಭಾ-ಶುಭ ಮಿಶ್ರಿತವಿರುತ್ತದೆ.

5] ದುರ್ಬಲ, ನಿರ್ಬಲ ಗ್ರಹದ ಮಹರ್ದಶೆಯಲ್ಲಿ ದುರ್ಬಲ, ನಿರ್ಬಲ ಶತೃ ಗ್ರಹದ ಅಂತರ್ದಶೆಯು ಫಲವು ಬಹಳೇ ಅಶುಭವವು ಏಕೆಂದರೆ ಮೊದಲೇ ಮಹರ್ದಶೆ ಅಂತರರ್ದಶೆಗಳು ದುರ್ಬಲರಿದ್ದು ಅವು ಕೂಡ ಪರಸ್ಪರ ಶತೃಗಳಿಂದಾಗಿ ಅಶುಭ ಫಲ ದೊರೆಯುತವ್ವೆ.

6] ಬಲಾಢ್ಯ ಪಂಚಮೇಶನ ಮಹರ್ದಶೆಯಲ್ಲಿ ಇಲ್ಲವೇ ಪಂಚಮಸ್ಥಾನ ದಲ್ಲಿದ್ದ ಗ್ರಹವು ಬಲಾಢ್ಯವಿದ್ದು ಪಂಚಮೇಶ ಮಿತ್ರಗ್ರಹವಾಗಿದ್ದು ಈ ಗ್ರಹಗಳ ಮಹರ್ದಶೆ ಅಂತರರ್ದಶೆಗಳಲ್ಲಿ ಶುಭಫಲ ಸಿಗುತ್ತದೆ.

7] ಬಲಾಢ್ಯ ಗುರುವಿನ ಮಹರ್ದಶೆ ಅವನದೇ ಅಂತರರ್ದಶೆಯು ಶುಭವಿದ್ದು ಆ ಗುರುವಿನ ಮಹರ್ದಶೆ ಅಂತರದಶೆಯಲ್ಲಿ ಅಶುಭ ಗೋಚರೀ ಗ್ರಹಗಳ ಪರಿಭ್ರಮಣದ ಫಲವು ಅಶುಭವಾಗುವದಿಲ್ಲ ಕಾರಣ ಬಲಾಢ್ಯ ಗುರುವಿನ ಮರ್ಹದಶೆ ಅತಂರರ್ದಶೆಯಿಂದಾಗಿ.

8] ಪಂಚಮೇಶ, ಗುರು, ಬುಧ ಈ ಮೂರು ಗ್ರಹಗಳು ಬಲಾಢ್ಯವಿದ್ದು ಈ ಗ್ರಹಗಳ ಮಹರ್ದಶೆ, ಅಂತರದಶೆಗಳ ಅವಧಿಯಲ್ಲಿ ಪರೀಕ್ಷೆ ನಡೆದಲ್ಲಿ ಥೇರಿ ಪೇಪರ ಚನ್ನಾಗಿ ಆಗುತ್ತದೆ. ಹೆಚ್ಚು ಗುಣಗಳನ್ನು ಪಡೆಯುತ್ತಾರೆ.

9] ತೃತಿಯೇಶ, ಮಂಗಳ, ಶನಿ ಈ ಮೂರೂ ಗ್ರಹಗಳು ಬಲಾಢ್ಯರಿದ್ದು ಈ ಗ್ರಹಗಳ ಮಹರ್ದಶೆ ಅಂತರರ್ದಶೆಯ ಅವಧಿಯಲ್ಲಿ ಪ್ರತ್ಯಕ್ಷಿಕೆಯಲ್ಲಿಯ ಪ್ರಯೋಗಶಾಲೆಯಲ್ಲಿಯ ಪರೀಕ್ಷೆಗಳು ನಡೆದಿದ್ದರೆ ಖಂಡಿತವಾಗಿ ಪ್ರತ್ಯಕ್ಷೀಯ ಪರೀಕ್ಷೆಯಲ್ಲಿ ಯಶಸ್ಸು ಪಡೆಯುತ್ತಾರೆ ಹೆಚ್ಚು ಗುಣ ಸಂಪಾದಿಸುತ್ತಾರೆ.

10] ದ್ವಿತೀಯೇಶ, ಲಗ್ನೇಶ, ಬುಧ, ಗುರು, ಚಂದ್ರರು ಬಲಾಢ್ಯರಿದ್ದು ಈ ಗ್ರಹಗಳ ಮಹರ್ದಶೆ ಅಂತರರ್ದಶೆಗಳ ಅವಧಿಯಲ್ಲಿ ಮೌಖಿಕ ಪರೀಕ್ಷೆಗಳು ನಡೆದಿದ್ದರೆ ಖಂಡಿತವಾಗಿ ಮೌಖಿಕ ಪರೀಕ್ಷೆಗಳಲ್ಲಿ ಹೆಚ್ಚು ಗುಣ ಸಂಪಾದಿಸುವರು. ಹೀಗೆ ಶಿಕ್ಷಣ ದೃಷ್ಟಿಯಿಂದ ಮಹರ್ದಶೆ ಅಂತರರ್ದಶೆಗಳ ಫಲಗಳ ಅರ್ಥವಿವರಣೆ ಮಾಡಬೇಕು.

ಯಾರೊಬ್ಬರ ಶೈಕ್ಷಣಿಕ ವಿಷಯವಾಗಿ ಪ್ರಮುಖವಾಗಿ ಒಂಬತ್ತು ಸಂಗತಿಗಳನ್ನು ಏಕೆ ಹಾಗೂ ಹೇಗೆ ಪರಿಶೀಲಿಸಬೇಕೆಂಬುವನ್ನು ವಿವರಿಸಿದ್ದಾಯಿತು. ಇನ್ನು ಯಾವ ಯಾವ ಮುಂಜಾಗ್ರತೆ ಕ್ರಮುಗಳನ್ನು ಕೈಕೊಳ್ಳಬೇಕು ಯಾವ ಯಾವ ಪರಿಹಾರಕ್ರಮುಗಳನ್ನು ಕೈಕೊಳ್ಳಬೇಕೆಂಬುದನ್ನು ಪರಿಶೀಲಿಸುವಾ.

**1] ಶೈಕ್ಷಣಿಕ ವಿಷಯವಾಗಿ ಮುಂಜಾಗ್ರತೆ ಕ್ರಮುಗಳು**

ಯಾರೊಬ್ಬ ವಿದ್ಯಾರ್ಥಿಯು ಶಿಕ್ಷಣದ ವಿಷಯವಾಗಿ ಯಾವ ಯಾವ

ಮುಂಜಾಗ್ರತೆ ಕ್ರಮಗಳನ್ನು ಕೈ ಕೊಳ್ಳಬೇಕು ಎಂಬುದರ ಪೂರ್ವದಲ್ಲಿ ಮೊದಲು ಯಾರೊಬ್ಬ ವಿದ್ಯಾರ್ಥಿಯ ಜಾತಕವನ್ನು ಸೂಕ್ಷ್ಮವಾಗಿಪರಿಶೀಲಿಸ ಬೇಕು. ಲಗ್ನ ಸರಿಯಾಗಿದೆಯೇ ಹೇಗೆ ಅಥವಾ ಸಂಧಿಗ್ಧ ಲಗ್ನವಿದಿಯೇ ಹೇಗೆ ? ಚಂದ್ರನು ಯಾವ ರಾಶಿಯಲ್ಲಿರುತ್ತಾನೆ ? ಎಷ್ಟು ಅಂಶದವ ನಾಗಿರುತ್ತಾನೆ ಎಂಬುದನ್ನು ಖಚಿತ ಪಡಿಸಿಕೊಳ್ಳಬೇಕು. ಆ ಬಳಿಕ 100 ಪುಟದಿಂದ 116 ಪುಟದವರೆಗೆ ವಿವರಿಸಿದಂತೆ ಒಂಬತ್ತು ಸಂಗತಿಗಳಲ್ಲಿ ಯಾವ ಯಾವ ಸಂಗತಿಗಳಲ್ಲಿ ಯಾವ ಯಾವ ಸಂಗತಿಗಳು ಪೂರಕವಿರುತ್ತವೆ. ಯಾವ ಸಂಗತಿಗಳು ಪ್ರತಿಕೂಲವಿರುತ್ತವೆ ಎಂಬುದನ್ನು ಖಚಿತ ಪಡಿಸಿ ಕೊಂಡು ಆ ಬಳಿಕ ಮುಂಜಾಗ್ರತೆ ಕ್ರಮದ ಬಗೆಗೆ ವಿಚಾರಿಸಬೇಕು ಅವುಗಳ ವಿವರಣೆ ಹೀಗಿದೆ.

1] ಜಾತಕದಲ್ಲಿ ಪಂಚಮ ಸ್ಥಾನದಲ್ಲಿಯ ಗ್ರಹ, ಪಂಚಮೇಶ, ಬುಧ, ಗುರು ಈ ನಾಲ್ಕು ಗ್ರಹಗಳು ಪೂರಕವಿದ್ದು ಅರ್ಥಾತ ಈ ನಾಲ್ಕು ಗ್ರಹಗಳು ಬಲಾಢ್ಯರಿದ್ದು ಗೋಚರೀಯಿಂದ ಗುರು, ಶನಿಯರು ಶುಭರಿದ್ದು ಬಲಾಢ್ಯ ಗ್ರಹಗಳ ಮಹರ್ದಶೆ ಅಂತರರ್ದಶೆಗಳು ನಡೆಯುತ್ತಿದ್ದರೆ ಇಂಥ ವಿದ್ಯಾರ್ಥಿಗಳು ಉನ್ನತ ಶಿಕ್ಷಣದ ಧ್ಯೇಯ ಇಟ್ಟುಕೊಳ್ಳಬಹುದು. ಅರ್ಥಾತ ಯಾವುದೇ ವಿಷಯದ ಯಾವುದೇ ಕೋರ್ಸಿನ ಯಾವುದೇ ಪರೀಕ್ಷೆ ಯಲ್ಲಿ ತೇರ್ಗಡೆ ಆಗಿ ಪದವಿ ಪಡೆಯುವರು.

2) ಯಾರ ಜಾತಕದಲ್ಲಿ ಪಂಚಮೇಶ, ಬುಧ, ಗುರುಗಳು ದುರ್ಬಲ ನಿರ್ಬಲರಿದ್ದು, ತೃತೀಯ ಸ್ಥಾನದಲ್ಲಿಯ ಗ್ರಹ, ತೃತೀಯೇಶ ಶನಿ, ಮಂಗಳ ರಾಹು ಈ ಗ್ರಹಗಳು ಬಲಾಢ್ಯರಿರುವರೋ ಅಂತಹ ಜಾತಕರು ಪದವೀಗಿಂತ ಡಿಪ್ಲೋಮಾವಾಗಲೀ ಸರ್ಟಿಫಿಕೇಟ ಕೋರ್ಸುಗಳಾಗಲೀ ತರಬೇತಿ ಕೋರ್ಸು ಗಳಾಗಲಿ ಕ್ಷಿಪ್ರ ಅವಧಿಯ ಲಘು ಕೋರ್ಸುಗಳಾಗಲಿ ಥೇರಿಗಿಂತ ಪ್ರತ್ಯಕ್ಷೀಯ ಪರೀಕ್ಷೆಯಲ್ಲಿ ಪ್ರಮುಖವಾಗಿರುವ ಕೋರ್ಸುಗಳನ್ನು ವಿಷಯಗಳನ್ನು ಆಯ್ದುಕೊಳ್ಳುವುದು ಉತ್ತಮ.

3) ಯಾವ ವಿದ್ಯಾರ್ಥಿಯ ಜಾತಕದಲ್ಲಿ ರವಿ, ಗುರು, ಪಂಚಮೇಶ ಭಾಗ್ಯೇಶ ಲಗ್ನೇಶರು ಬಲಾಢ್ಯರಿರುತ್ತಾರೆ. ಅಂಥ ವಿದ್ಯಾರ್ಥಿಗಳಿಗೆ

ಯಾವುದೇ ಕೋರ್ಸಿನ ಯಾವುದೇ ವಿಷಯದ ಯಾವುದೇ ಶಾಲೆ ಕಾಲೇಜುಗಳ ಪ್ರವೇಶದ ಪ್ರಶ್ನೆ ಉದ್ಭವಿಸುವುದಿಲ್ಲ.

4) ಶನಿ–ಚಂದ್ರ, ಶನಿ–ಮಂಗಳ, ಶನಿ–ರವಿ ಈ ಗ್ರಹಗಳ ಯುತಿ ಯೋಗ ಪ್ರತಿಯೋಗವು, ಲಗ್ನ, ಪಂಚಮ, ಚತುರ್ಥ, ದಶಮ, ಲಾಭ ಈ ಸ್ಥಾನಗಳಲ್ಲಿ ಆಗುತ್ತಿದ್ದ ವಿದ್ಯಾರ್ಥಿಗಳಿಗೆ ಇಚ್ಛಿತ ಕೋರ್ಸಿಗೆ ಇಚ್ಛಿತ ಶಾಲೆ–ಕಾಲೇಜುಗಳಿಗೆ ಪ್ರವೇಶ ದೊರೆಯುವುದು ಕಠಿಣ.

5) ಯಾವುದೇ ವಿದ್ಯಾರ್ಥಿಗೆ ಗುರುವು ಗೋಚರಿಯಿಂದ 2–5–7–9–11ನೇಯವನಾಗಿ ಬಂದರೆ ಯಾವುದೇ ಕೋರ್ಸಿಗೆ ಯಾವುದೇ ಶಾಲೆ–ಕಾಲೇಜುಗಳಲ್ಲಿ ಪ್ರವೇಶವು ಸುಲಭವಾಗಿ ಸಿಗುತ್ತದೆ.

6) ಗುರುವು ಗೋಚರಿಯಿಂದ 4–6–8–12ನೇಯವನಾಗಿ ಬಂದಾಗ ಇಚ್ಛಿಸಿದ ಕೋರ್ಸಿನ ಶಾಲೆ–ಕಾಲೇಜುಗಳ ಪ್ರವೇಶ ದೊರೆಯುವುದು ಕಠಿಣ

7) ರವಿ, ಗುರು, ಮಂಗಳ, ಪಂಚಮೇಶ, ಭಾಗ್ಯೇಶ, ಲಗ್ನೇಶ ಈ ಆರು ಗ್ರಹಗಳು ಬಲಾಢ್ಯರಿದ್ದ ಜಾತಕನು ಆಯ್.ಎ.ಎಸ್. ಆಯ್.ಎಫ್.ಎಸ್, ಕೆ.ಎ.ಎಸ್. ಗಳಂಥ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಕಟ್ಟಿದರ ಖಂಡಿತ ತೇರ್ಗಡೆ ಆಗುವರು. ಇದ್ದರಿಂದ ಇಂಥ ವಿದ್ಯಾರ್ಥಿಗಳು ಗುರುವು ಗೋಚರಿಯಿಂದ 2–5–7–9–11ನೇಯವನಾಗಿ ಬಂದಾಗ ಮೇಲ್ಕಂಡ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಕಟ್ಟಿದರೆ ತೇರ್ಗಡೆ ಆಗಿ ಆಯ್ಕೆ ಆಗುತ್ತಾರೆ.

8) ಯಾವ ವಿದ್ಯಾರ್ಥಿಯ ಜಾತಕದಲ್ಲಿ ರವಿ–ಶನಿ, ಶನಿ–ಮಂಗಳ, ಶನಿ–ಚಂದ್ರರ ಯುತಿ ಯೋಗ, ಪ್ರತಿಯೋಗ, ದೃಷ್ಟಿಯೋಗಗಳು ಲಗ್ನ, ಚತುರ್ಥ, ದಶಮ ಸ್ಥಾನಗಳಲ್ಲಿ ಆಗುವವು ಅಂಥ ವಿದ್ಯಾರ್ಥಿಗಳು ವೃತ್ತಿ ಪೂರಕ ಕೋರ್ಸ್ ಕೈ ಕೊಳ್ಳುವುದು ಹಿತಕರ.

9) ಯಾರ ಜಾತಕದಲ್ಲಿ ರವಿ, ಮಂಗಳರು ಬಲಾಢ್ಯರಿದ್ದು ಚಂದ್ರನು ಪುರುಷ ರಾಶಿಯಲ್ಲಿ ಇಲ್ಲವೇ ಅಗ್ನಿರಾಶಿಯಲ್ಲಿದ್ದ ಜಾತಕನು ಯಾವುದೇ ಕೆಲಸಕ್ಕೆ ಸಮಕ್ಷಮ ಹೋದರೆ ಕೆಲಸವಾಗುತ್ತದೆ.

**10)** ಯಾರ ಜಾತಕದಲ್ಲಿ ಬುಧ. ಗುರುಗಳು ಬಲಾಢ್ಯರಿದ್ದು ಚಂದ್ರನು ಪಾಪರಾಶಿ ಇಲ್ಲವೆ ಜಲರಾಶಿಯಲ್ಲಿದ್ದ ವ್ಯಕ್ತಿಗಳು ಪತ್ರವ್ಯವಹಾರದಿಂದ ಕಾರ್ಯ ಕೈ ಕೊಳ್ಳಬೇಕು. ಅಂದರೆ ಮಾತ್ರ ಕೆಲಸ ಕೈ ಗೂಡುತ್ತದೆ.

**11)** ಪಂಚಮ. ಸಪ್ತಮ. ಅಷ್ಟಮ. ವ್ಯಯ ಈ ಸ್ಥಾನಗಳಲ್ಲಿ ಶನಿ-ಚಂದ್ರ, ಶನಿ-ಶುಕ್ರ, ಚಂದ್ರ-ಮಂಗಳ, ಶುಕ್ರ-ಮಂಗಳ ಯುತಿಯೋಗ ವಿದ್ದ ವಿದ್ಯಾರ್ಥಿಗಳು ಪ್ರೇಮಪ್ರಕರಣಗಳಲ್ಲಿ ಆಸಕ್ತರಾಗಿ ಶಿಕ್ಷಣಕ್ಕೆ ತೊಂದರೆ ಮಾಡಿಕೊಳ್ಳುತ್ತಾರೆ.

**12)** ಚಂದ್ರ ಇಲ್ಲವೆ ಶುಕ್ರನು ಪಂಚಮ. ಅಷ್ಟಮ, ಸಪ್ತಮ, ವ್ಯಯ ಈ ಯಾವುದೊಂದು ಸ್ಥಾನದಲ್ಲಿದ್ದು ಮಂಗಳ ಇಲ್ಲವೆ ಶನಿಯಿಂದ ನೋಡಲು ಪಡುತ್ತಿದ್ದರೆ ಇಂಥ ವಿದ್ಯಾರ್ಥಿಗಳು ಪ್ರೇಮಪ್ರಕರಣಗಳಲ್ಲಿ ಶಿಲುಕಿ ವಿದ್ಯಾರ್ಥಿ ಜೀವನಕ್ಕೆ ಹಾನಿ ತಂದುಕೊಳ್ಳುತ್ತಾರೆ.

**13)** ಚತುರ್ಥದಲ್ಲಿ ಪಾಪಗ್ರಹವಿದ್ದು ಚತುರ್ಥೇಶ ಹಾಗೂ ಚಂದ್ರನು ದುರ್ಬಲನಿದ್ದು ಗೋಚರಿಯಿಂದ ಗುರು, ಶನಿಯರು ಅಶುಭರಾಗಿ ಬಂದಾಗ ಮನೆಯಲ್ಲಿಯ ವಿಷಮ ವಾತಾರಣದಿಂದ ಶಿಕ್ಷಣಕ್ಕೆ ಹಾಗೂ ಪರೀಕ್ಷೆಗೆ ತೊಂದರೆಯಾಗಬಹುದಾಗಿದೆ.

**14)** ಶನಿ-ಮಂಗಳ. ಇಲ್ಲವೆ ಶನಿ-ಚಂದ್ರರ ಪ್ರತಿಯೋಗವು ಚತುರ್ಥ-ದಶಮ, ಷಷ್ಠ-ದ್ವಾದಶ, ಲಗ್ನ-ಸಪ್ತಮದಲ್ಲಿದ್ದು, ಷಷ್ಠೇಶ- ಹಾಗೂ ಚಂದ್ರ ನಿರ್ಬಲರಿದ್ದ ಜಾತಕನಿಗೆ ಶತ್ರುಪೀಡೆ, ರ್‍ಯಾಗಿಂಗ ತೊಂದರೆ ಪರೀಕ್ಷಾ ಭಯದಿಂದ ಶಿಕ್ಷಣಕ್ಕೆ ಹಾನಿ ಆಗಬಹುದಾಗಿದೆ.

**15)** ಪಂಚಮೇಶ, ಹಾಗೂ ರವಿ ಗುರುಗಳು ಬಲಾಢ್ಯರಿದ್ದು ಗೋಚರಿಯಿಂದ ಗುರು, ಶನಿಯರು ಶುಭರಿದ್ದಾಗ ಪ್ರತಿಭಾ ಶಿಷ್ಯವೇತನ ಸಾಲ ಶಿಷ್ಯವೇತನ ಮೊದಲಾದ ಶಿಷ್ಯ ವೇತನ ಲಭಿಸುವುದರಿಂದ ಶಿಕ್ಷಣಕ್ಕೆ ತೊಂದರೆ ಬರುವುದಿಲ್ಲ.

15) ಲಗ್ನೇಶ, ತೃತಿಯೇಶ, ಭಾಗ್ಯೇಶ ಪಂಚಮೇಶ ರವಿ,ಮಂಗಳ ಈ ಆರು ಸಂಗತಿಗಳು ಪೂರಕವಿದ್ದ ವಿದ್ಯಾರ್ಥಿಗಳು ಪಠ್ಯೇತರ ಚಟುವಟಿಕೆಗಳಲ್ಲಿ ಭಾಗವಹಿಸಿ ಶಿಕ್ಷಣಕ್ಕೆ ತೊಂದರೆ ತಂದುಕೊಳ್ಳುತ್ತಾರೆ. ಮೇಲೆ ಕಂಡ ಯೋಗಗಳಿದ್ದ ವಿದ್ಯಾರ್ಥಿಗಳು ಗೋಚರಿಯಿಂದ ಗುರು–ಶನಿಯರು ಶುಭ ರಾಗಿ ಬಂದರೆ ಪಠ್ಯೇತರ ಚಟುವಟಿಕೆಗಳಲ್ಲಿ ಭಾಗವಹಿಸಿದರೂ ಶಿಕ್ಷಣಕ್ಕೆ ತೊಂದರೆ ಆಗುವುದಿಲ್ಲ ಆದರೆ ಮೇಲೆ ಕಂಡ ಯೋಗಗಳದ್ದ ಗೋಚರಿಯಿಂದ ಗುರು–ಶನಿಯರು ಅಶುಭರಾಗಿ ಬಂದಾಗ ಶಿಕ್ಷಣಕ್ಕೆ ಹಾನಿ ಆಗುತ್ತದೆ.

16) ಮೇಷ, ಸಿಂಹ, ಧನು,ವೃಶ್ಚಿಕ ಈ ರಾಶಿಯವರು ಅವಿಧೇಯ್ಯ ತವದಿಂದ ಶಿಕ್ಷಕರ ಅವಕೃಪೆಗೆ ಪಾತ್ರರಾಗುತ್ತಾರೆ.

17) ಮಿಥುನ, ತುಲಾ, ಕುಂಭ ಈ ರಾಶಿಯ ವಿದ್ಯಾರ್ಥಿಗಳು ತಮ್ಮ ಬುದ್ಧಿವಂತಿಕೆಯ ಪ್ರದರ್ಶನದಿಂದ ಅಧ್ಯಾಪಕರ ಅಸಹಕಾರಕ್ಕೆ ಗುರಿ ಯಾಗುತ್ತಾರೆ.

18) ವೃಷಭ, ಕನ್ಯಾ ರಾಶಿಯ ವಿದ್ಯಾರ್ಥಿಗಳು ಅನಾವಶ್ಯಕವಾಗಿ ಮಾತಾಡಿ ಶಿಕ್ಷಕರ ಅಸಮಾಧಾನಕ್ಕೆ ಕಾರಣರಾಗುತ್ತಾರೆ.

ಮೇಲೆ ಬರೆದ 18 ಯೋಗಗಳನ್ನು ಮಾತ್ರ ಬರೆಯಲಾಗಿದೆ. ಇದಕ್ಕೂ ಹೆಚ್ಚಿನ ವಿವರಣೆ ನಾವು ಬರೆದು ಪ್ರಕಟಿಸಿದ **"ಶಿಕ್ಷಣ ಜ್ಯೋತಿಷ್ಯ"** ಗ್ರಂಥದಲ್ಲಿ ವಿವರಿಸಲಾಗಿದ್ದು ಆಸ್ತಕರು ಓದಬಹುದು.

## ಶೈಕ್ಷಣಿಕ ವಿಷಯವಾಗಿ ಪರಿಹಾರದ ಕ್ರಮಗಳು

ಯಾರೊಬ್ಬ ವಿದ್ಯಾರ್ಥಿಯ (ಜಾತಕನು) ಶೈಕ್ಷಣಿಕ ವಿಷಯವಾಗಿ ಯಾವ ಯಾವ ಮುಂಜಾಗ್ರತೆ ಕ್ರಮಗಳನ್ನು ಕೈಕೊಳ್ಳಬೇಕು ಎಂಬುದನ್ನು ವಿವರಿಸಿದ್ದಾಯಿತು. ಇನ್ನು ಶಿಕ್ಷಣಕ್ಕೆ ಇರುವ ತೊಂದರೆ ನಿವಾರಣೆಗಾಗಿ ಹಾಗೂ ಎಲ್ಲ ಪ್ರಕಾರದ ಪರೀಕ್ಷೆಗಳಲ್ಲಿ ಯಶಸ್ಸು ಪಡೆಯಲು ಯಾವ ಯಾವ ಉಪಾಸನೆ, ವ್ರತ, ಜಪ, ಧ್ಯಾನ, ಪಠಣ, ಸ್ತೋತ್ರ ಕೈಕೊಳ್ಳಬೇಕು ಎಂಬುದನ್ನು ಈ ಕೆಳಗಿನಂತೆ ಬರೆಯಲಾಗಿದೆ.

**1) ಸರಸ್ವತಿ ಪ್ರಾರ್ಥನೆ :** ಪ್ರತಿನಿತ್ಯ ಶಾರದಾ (ಸರಸ್ವತಿ) ದೇವಿಯ ಅರ್ಥಾತ ಸರಸ್ವತಿಯ ಪ್ರಾರ್ಥನೆಯನ್ನು ತಪ್ಪದೇ ಮಾಡಬೇಕು.

**2) ವಿನಾಯಕ ವ್ರತ :** ಪ್ರತಿ ಮಾಸದ ಶುದ್ಧ ಚವತಿ ದಿನ ಬರುವ ವಿನಾಯಕ ಚತುರ್ಥಿಯನ್ನು (ಸಿರಿಕ್ಷಿಪ್ತವಲ್ಲಿ ವಿನಾಯಕೀ ವ್ರತವೆನ್ನುತ್ತಾರೆ.) ಮಧ್ಯಾನ್ಹ ಕಾಲದಲ್ಲಿರುವ ಚತುರ್ಥಿ ವ್ರತ ತಪ್ಪದೇ ಮಾಡಬೇಕು. ಕನಿಷ್ಟ ಭಾದ್ರಪದ ಶುದ್ಧ ಚವತಿ ದಿನ ಬರುವ ಗಣೇಶಚವತಿ ವ್ರತವನ್ನು ಮಾಘಶುದ್ಧ ಚವತಿ ಬರುವ ಗಣೇಶ ಜಯಂತಿಯನ್ನಾದರೂ ಅಂದರೆ ವರ್ಷಕ್ಕೆ ಎರಡು ಬಾರಿಯಾದರೂ ವಿದ್ಯಾರ್ಥಿಜೀವನ ಮುಗಿಯುವವರೆಗೆ ತಪ್ಪದೆ ವ್ರತ ಮಾಡಬೇಕು.

**3) ಸಂಕಷ್ಟ ಚತುರ್ಥಿ :** ಪ್ರತಿ ಕೃಷ್ಣ ಪಕ್ಷದ ಚತುರ್ಥಿ ದಿನ ಬರುವ ಸಂಕಷ್ಟ ವ್ರತವನ್ನು ತಪ್ಪದೇ ಆಚರಿಸಿದಲ್ಲಿ ಶಿಕ್ಷಣಕ್ಕೆ ಬರುವ ತೊಂದರೆಗಳು ದೂರಾಗುವವು ಹಾಗೂ ಪರೀಕ್ಷೆಗಳಲ್ಲಿ ಹೆಚ್ಚಿನ ಗುಣ ಸಂಪಾದಿಸುವರು. ಪ್ರತಿ ತಿಂಗಳು ಸಂಕಷ್ಟೀ ವ್ರತ ಮಾಡಲು ಶಕ್ಯವಿಲ್ಲದಿದ್ದಲ್ಲಿ ಮಂಗಳವಾರ ಬರುವ ಅಂಗಾರಕೀ ಸಂಕಷ್ಟಿ ಹಾಗೂ ಶ್ರಾವಣ, ಅಶ್ವಿನ, ಮಾಘ, ವೈಶಾಖ ಈ ಮಾಸದಲ್ಲಿ ಬರುವ ಸಂಕಷ್ಟೀ ವ್ರತ ಆಚರಿಸಿದಲ್ಲಿ ವಿದ್ಯೆಯಲ್ಲಿ ಪ್ರಗತಿಯಾಗಿ ಶಿಕ್ಷಣ ಮುಂದುವರೆಯುವುದು.

4) ಪ್ರತಿ ಮಂಗಳವಾರ ತಪ್ಪದೇ ಗಣೇಶ ಗುಡಿಗೆ ಹೋಗಿ ದರ್ಶನ ಪ್ರದಕ್ಷಿಣೆ ನಾಮಸ್ಮರಣೆ ಮಾಡಿ ಟೆಂಗಿನಕಾಯಿ ತಪ್ಪದೇ ಒಡೆಯಬೇಕು. ಅರ್ಥಾತ ಬಾಳೇ ಹಣ್ಣು ಟೆಂಗಿನಕಾಯಿ ಪ್ರಸಾದ ಸೇವಿಸಬೇಕು. ಆಸಕ್ತರಿಗೆ ವಿತರಿಸಬೇಕು.

5) ಗಣಪತಿಯ ಅರ್ಥವರ್ಣಶೀರ್ಷ ತಪ್ಪದೇ ಪಠಿಸಬೇಕು.

6) ಮಂಗಳವಾರ ಇಲ್ಲವೇ ಗುರುವಾರ ಉಪವಾಸ ಮಾಡಬೇಕು.

7) ಶ್ರೀದತ್ತಾತ್ರೆಯ ಸ್ತೋತ್ರ ಪಠಿಸಬೇಕು ಪ್ರತಿನಿತ್ಯ ಶ್ರೀದತ್ತಾತ್ರೆಯ ಗುಡಿಗೆ ಹೋಗಿ ದರ್ಶನ ಪ್ರದಕ್ಷಿಣೆ ಹಾಕಬೇಕು. ಕನಿಷ್ಟ ಗುರುವಾರವಾದರೂ ದತ್ತ ಮಂದಿರಕ್ಕೆ ಹೋಗಿ ದರ್ಶನ ಪ್ರದಕ್ಷಿಣೆ ಹಾಕಬೇಕು.

8) ವರುಷಕ್ಕೆ ಕನಿಷ್ಟ ಎರಡು ಬಾರಿ ಆದರೂ ಗುರುಚರಿತ್ರ ಸಪ್ತಾಹ ಮಾಡಬೇಕು.

9) ಶ್ರೀಗುರುರಾಘವೇಂದ್ರ ಸ್ತೋತ್ರ, ಶ್ರೀಚಿದಂಬರ ಸ್ತೋತ್ರ ಮೊದಲಾದ ಅವಧೂತರ ಅವತಾರಿ ಪುರುಷರ ಸ್ತೋತ್ರ ನಿತ್ಯ ಪಠಿಸಬೇಕು.

10) ಅಶ್ವೀನ ಶುದ್ಧ ಮೂಲಾ ನಕ್ಷತ್ರವಿರುವ ದಿನ ಸರಸ್ವತಿ ವ್ರತ (ಪೂಜೆಯನ್ನು) ತಪ್ಪದೇ ಮಾಡಬೇಕು. 11) ಶ್ರೀ ಗುರುವಿನ ನಿತ್ಯ ಜಪ ಮಾಡಬೇಕು ಹೀಗೆ ಮೇಲೆ ಬರೆದ ಹನ್ನೊಂದು ವ್ರತಗಳಲ್ಲಿ ಒಂದನ್ನಾದರೂ ತಪ್ಪದೇ ಆಚರಿಸಿದಲ್ಲಿ ಶಿಕ್ಷಣಕ್ಕೆ ಬರುವ ತೊಂದರೆಗಳು ನಿವಾರಣೆಯಾಗಿ ಪರೀಕ್ಷೆಯಲ್ಲಿ ಯಶ ಪಡೆಯುತ್ತಾರೆ.



# ಚತುರ್ಥ ದಳ

## ಗೃಹಸೌಖ್ಯ—ಪರಿಹಾರ

ಪರಿಹಾರ ಜ್ಯೋತಿಷ್ಯದ ನಾಲ್ಕನೇ ಅಧ್ಯಾಯದಲ್ಲಿ ಗೃಹಸೌಖ್ಯದ ಬಗೆಗೆ ಪ್ರಸ್ತಾಪಿಸುತ್ತೇನೆ. ಗೃಹಸೌಖ್ಯವೆಂದರೆ ಕೌಟುಂಬಿಕ ಸೌಖ್ಯ, ಪ್ರಾಪಂಚಿಕ ಸೌಖ್ಯ, ವೈವಾಹಿಕ ಜೀವನದ ಸೌಖ್ಯ ಇವೇ ಮೊದಲಾದ ಅರ್ಥಗಳಿವೆ. ಆದರೆ ಈಗ ನಾನುಪ್ರಸ್ತಾಪಿಸುತ್ತಿರುವುದು ಗೃಹಸೌಖ್ಯದವಿಷಯವೇ ಬೇರೆ ಇರುತ್ತದೆ. ಗೃಹ ಅಂದರೆ ವಾಸಿಸುವ ಮನೆ, ವಾಸಿಸುವ ನಿವಾಸ.ಈ ಗೃಹಸೌಖ್ಯ ಪರಿಹಾರದ ವಿಷಯವಾಗಿ ಪ್ರಸ್ತಾಪಿಸುತ್ತಿರುವೆ.

ಯಾರೊಬ್ಬ ಜಾತಕನು ಶಿಕ್ಷಣ ಮುಗಿಸಿದ ಕೂಡಲೇ ಉದ್ಯೋಗ, ವೃತ್ತಿ ನೌಕರಿ ಸಂಬಂಧಿಸಿದ ಪ್ರಶ್ನೆಗಳನ್ನು ವಿಚಾರಿಸಿ ಆ ಬಳಿಕ ವಿವಾಹದ ಪ್ರಶ್ನೆ ವಿವಾಹದ ನಂತರ ವಾಸಿಸುವ ಮನೆಯ ಸಂಬಂಧಿಸಿದ ಪ್ರಶ್ನೆಗಳನ್ನು ವಿಚಾರಿಸುತ್ತಾರೆ. ಆದರೆ ಮುಂಬಯಿ, ದಿಲ್ಲಿ, ಕಲಕತ್ತಾ ಈ ಮಹಾನಗರಗಳಲ್ಲಿ ವಾಸಿಸುವ ಮನೆಯ ಪ್ರಶ್ನೆ ಭೂತಾಕಾರವಾಗಿ ಬೆಳೆದಿದೆ. ಅಲ್ಲಿಯ ಜನರು ನೌಕರಿ ವಿವಾಹಕ್ಕಿಂತ ವಾಸಿಸುವ ಮನೆಯ ವಿಷಯವಾಗಿಯೇ ಅನೇಕ ಪ್ರಶ್ನೆಗಳನ್ನು ವಿಚಾರಿಸುತ್ತಾರೆ. ನೌಕರಿಯೇನೋ ಸಿಗುತ್ತದೆ. ಆದರೆ ತಂಗಲು ಜಾಗೆ ಸಿಗುವುದೇ ಹೇಗೆ ಎಂಬ ಪ್ರಶ್ನೆ ಅವರನ್ನು ಕಾಡುತ್ತದೆ.

ಪಕ್ಷಿ ಪ್ರಾಣಿಗಳಿಗೂ ಜಾಗೆ ಇರುತ್ತದೆ. ಜಾಗೆ ಕಲ್ಪಿಸುತ್ತವೆ. ಪಕ್ಷಿಗಳಂತೂ ತತ್ತಿ ಇಡುವ ಪೂರ್ವದಲ್ಲಿ ಗೂಡುಕಟ್ಟಿ ಆ ಬಳಿಕ ತತ್ತಿಹಾಕುತ್ತವೆ. ಮುಂಬಯಿಯಲ್ಲಿ ಪ್ಲಾಟ ಫಾರ್ಮ ಮೇಲೆಯೇ ಜೀವನ ಕಳೆವ ಅಸಂಖ್ಯ ಜನರಿದ್ದಾರೆ. ಅನೇಕರು ಜೀವನದ ಉದ್ದಕ್ಕೂ ಬಾಡಿಗೆಯ ಮನೆಯಲ್ಲಿಯೇ

ಜೀವನ ಕಳೆಯುತ್ತಾರೆ. ಇನ್ನು ಕೆಲ ಜನ ಸ್ವಂತ ಮನೆ ಇದ್ದು, ಅನೇಕ ಕಾರಣಗಳಿಂದಾಗಿ ಬಾಡಿಗೆಯ ಮನೆಯಲ್ಲಿಯೇ ಬಾಳುವುದು ಅನಿವಾರ್ಯ ವಿರುತ್ತದೆ. ಮನೆಗೂ ಮನುಷ್ಯನ ಬಾಳಿಗೂ ನಿಕಟ ಸಂಬಂಧವಿದೆ. ಆದುದರಿಂದ ಈ ಚತುರ್ಥ ಅಧ್ಯಾಯದಲ್ಲಿ ವಾಸಿಸುವ ಮನೆಯ ವಿಷಯವಾಗಿ ಪ್ರಶ್ನೆ ಸಮಸ್ಯೆಗಳಾವವು ಎಂಬುದನ್ನು ಮೊದಲು ವಿವರಿಸಿ ಆ ಬಳಿಕ ಅವುಗಳಿಗೆ ಮುಂಜಾಗ್ರತೆ ಹಾಗೂ ಪರಿಹಾರದ ಕ್ರಮಗಳನ್ನು ಪರಿಶೀಲಿಸೋಣ

ಕೆಲ ಜಾತಕರು ತಮಗೆ ಬಾಡಿಗೆ ಮನೆ ಸಿಗುವುದೇ ಹೇಗೆ? ಸಿಗುವುದಾದರೆ ಎಂದು ಎಂಬುದರ ಕಾಲ ಮಿತಿಯ ಬಗೆಗೆ ವಿಚಾರಿಸುತ್ತಾರೆ. ಇನ್ನು ಕೆಲವರು 2-3ಬಾಡಿಗೆ ಮನೆ ನೋಡಿಕೊಂಡು ಬಂದವರಿದ್ದು ಆ ಮನೆ ಹೇಗೆ? ಈ ಮನೆ ಹೇಗೆ? ಯಾವ ಮನಿ ಸರಿ ಇದೆ ಯಾವ ಮನಿ ತಮಗೆ ಓಂ ಬಂದಿದೆ ಯಾವ ಮನೆಯಿಂದ ತಮಗೆ ಏಳಿಗೆ ಆಗುತ್ತದೆ. ಯಾವ ಮನೆ ಮಾಲಕರು ಹೇಗೆ ವರ್ತಿಸುತ್ತಾರೆ ಮೊದಲಾದ ಬಾಡಿಗೆ ಮನೆ ಸಂಬಂಧ ವಿಚಾರಿಸುತ್ತಾರೆ.

ಇನ್ನು ಕೆಲ ಜಾತಕರು ತಮಗೆ ಸ್ವಂತ ಮನೆ ಯಾವಾಗ ಆಗುತ್ತದೆ? ಎಂದು ವಿಚಾರಿಸುತ್ತಾರೆ. ಅದರಲ್ಲಿಯೂ ಮನೆಯ ಗೃಹಣೀಯರಿಗೆ ಹೆಣ್ಣು ಮಕ್ಕಳಿಗೆ ಜೀವನದಲ್ಲಿ ನಾಲ್ಕು ಮುಖ್ಯ ಆಶೆಗಳಿರುತ್ತವೆ ಒಂದು ತಮ್ಮ ಯಜಮಾನರು ತಮ್ಮ ಮಾತಿನಂತೆ ನಡೆಯಬೇಕು,ಎರಡು ತಮಗೆಸಂತಾನವಾಗಬೇಕು. ಮೂರು ತಮಗೆ ತಮ್ಮದೇ ಆದ ಸ್ವಂತ ಮನೆ ಇರಬೇಕು. ನಾಲ್ಕು ತಮಗೆ ಬಂಗಾರದ ಒಡವೆಗಳು ಇರಬೇಕು. ಇನ್ನು ಕೆಲ ಜಾತಕರು ತಾವು ಅನೇಕ ವರುಷಗಳಿಂದ ವಾಸಿಸುತ್ತಿರುವ ಬಾಡಿಗೆ ಮನೆಯನ್ನು ಮಾಲಕರು ಖರೀದಿ ಕೊಡುವರೋ ಹೇಗೆ? ಕೊಡುವುದಾದರೆ ಎಂದು? ತಾವೇ ಅವರನ್ನು ವಿಚಾರಿಸಬೇಕೋ ಅಥವಾ ಅವರೇ ಹೇಳಿ ಕಳಿಸುವರೋ ಒಂದು ವೇಳೆ ಅವರು ಖರೀದಿಗೆ ಕೊಟ್ಟರೆ ನಮಗೆ ಹಣದ ಅನುಕೂಲತೆ ಹಾಗೂ ಸಹಾಯ ಸಿಕ್ಕೀತೆ ? ಮತ್ತು ತಮ್ಮ ಅಳುವಿನಲ್ಲಿಯೇ ವ್ಯವಹಾರ ಕುದುರುತ್ತದೆಯೋ ಹೇಗೆ ಎಂದು ವಿಚಾರಿಸುತ್ತಾರೆ.

ಇನ್ನು ಕೆಲವರು ಕಟ್ಟಿದ ಮನೆ ಖರೀದಿಸಬೇಕೊ ? ಅಥವಾ ಜಾಗೆ ಖರೀದಿಸಿ ಮನೆ ಕಟ್ಟಬೇಕೊ ಹಂಚಿನ ಮನೆ ಕಟ್ಟಬೇಕೊ ಆರ್. ಸಿ. ಸಿ. ಮನೆ ಕಟ್ಟಬೇಕೋ ಎಂದು ವಿಚಾರಿಸುತ್ತಾರೆ. ಮತ್ತೆ ಕೆಲವರು ಅಪಾರ್ಟಮೆಂಟಿನಲ್ಲಿ ಖರೀದಿಸಿದರೆ ಹೇಗೆ ಎಂದು ವಿಚಾರಿಸಿದರೆ ಮತ್ತೆ ಕೆಲವರು ಗೃಹ ನಿರ್ಮಾಣ ಸಹಕಾರಿ ಸಂಘಗಳ ಮುಖಾಂತರ ಮನೆ ಸಿಗುವುದೋ ಹೇಗೆ? ಆ ಸಹಕಾರಿ ಸಂಸ್ಥೆಗಳಿಗೆ ಸದಸ್ಯರಾದರೆ ಹೇಗೆ ಎಂದು ವಿಚಾರಿಸುತ್ತಾರೆ. ಇನ್ನು ಕೆಲವರು ಸರಕಾರದಿಂದ ನಿವೇಶ ಜಾಗೆ ಸಿಗುವುದೋ ಹೇಗೆ ಎಂದು ವಿಚಾರಿಸುತ್ತಾರೆ. ಮತ್ತೆ ಹಲವರು ಆಶ್ರಯ ಮೊದಲಾದವುಗಳಿಂದ ಪ್ರಕೃತಿ ಮನೆಯು ವ್ಯವಸ್ಥೆ ಆಗುವುದೇ ಹೇಗೆ ಎಂದು ವಿಚಾರಿಸುತ್ತಾರೆ.

ಇನ್ನು ಕೆಲವರು ತಾವು ಕಟ್ಟಿಸಿದ ಮನೆಗೆ ಇಲ್ಲವೆ ಮನೆಗಳಿಗೆ–ಖೋಲಿ ಗಳಿಗೆ ಬಾಡಿಗೆದಾರರು ಬರುತ್ತಿಲ್ಲ ಎಂದು ಬರುತ್ತಾರೆ. ಎಂದು ವಿಚಾರಿಸು ಇದರ ವಿರುದ್ಧ ಕೆಲ ಮನಿ ಮಾಲಿಕರು ಹಲವು ವರಷಗಳಿಂದ ಕಡಿಮೆ ಬಾಡಿಗೆ ಯಲ್ಲಿ ವಾಸಿಸುವ ಬಾಡಿಗೆದಾರರನ್ನು ಹೇಗೆ ಎತ್ತಂಗಡಿ ಮಾಡಬೇಕು ಎಂದು ವಿಚಾರಿಸುತ್ತಾರೆ. ಮತ್ತೆ ಕೆಲವರು ಬಾಡಿಗೆದಾರನು ಎಂದು ಮನೆ ಬಿಡುವನೋ ಹಾಗೂ ಅವನನ್ನು ಮನೆ ಬಿಡಿಸುವ ಉಪಾಯ ರೀತಿಗಳ ಬಗೆಗೆ ವಿಚಾರಿಸು ತ್ತಾರೆ. ಅಂದರೆ ಧಮಕೀಯಿಂದಲೂ, ರಾಜೀಯಿಂದಲೂ, ಕೋರ್ಟಿನಿಂದಲೂ ಪೋಲಿಸರ ಮುಖಾಂತರವೂ ಪ್ರಭಾವಿ ವ್ಯಕ್ತಿಗಳ ಮುಖಾಂತರವೋ ಹೀಗೆ ಉಪಾಯಗಳ ಬಗೆಗೆ ವಿಚಾರಿಸುತ್ತಾರೆ. ಇನ್ನು ಕೆಲವರು ಮನೆ ಎಲ್ಲಿ ಕಟ್ಟುವಾಗಮುಂದಿನ ಬಾಗಿಲು ಯಾವ ದಿಕ್ಕಿಗೆ ದೇವರ ಮನೆ ಯಾವ ದಿಕ್ಕಿಗೆ ಅಡಿಗೆ ಮನೆ ಎಲ್ಲಿ ಯಾವ ದಿಕ್ಕಿಗೆ ಮೊದಲಾದ ವಾಸ್ತುಗಳ ಬಗೆಗೆ ವಿಚಾರಿಸುತ್ತಾರೆ.. ಹೀಗೆ ವಾಸಿಸುವ ಮನೆಯ ವಿಷಯವಾಗಿ ವಿಚಾರಿಸುವ ಪ್ರಶ್ನೆಗಳಿಗೆ ವೃತ್ತಿ ಜ್ಯೋತಿಷಿಗಳು ಉತ್ತರ ಕೊಡಬೇಕಾಗುತ್ತದೆ. ಆದುದರಿಂದ ಯಾವ ಜಾತಕನಿಗೆವಾಸಿಸುವ ಮನೆಯ ಸೌಖ್ಯ ಸಿಗುತ್ತದೆ. ಅರ್ಥಾತ ಗೃಹ ಸೌಖ್ಯ ಯಾರಿಗಿದೆ ? ಗೃಹಸೌಖ್ಯ ಯಾರಿಗಿಲ್ಲ? ಯಾವ ಜಾತಕನಿಗೆ ಮನೆಯು ಬಾಡಿಗೆದಾರರಿಂದ

ತೋಂದರೆ ಉದ್ಭವಿಸುತ್ತವೆ. ಯಾವುಜಾತಕನಿಗೆ ಬಾಡಿಗೆ ದಾರರಿಂದ ಉದ್ಭವಿಸುವದಿಲ್ಲ. ಯಾವ ಜಾತಕನಿಗೆ ಸ್ವಂತ ಮನೆ ಕಟ್ಟುವ ಇಲ್ಲವೆ ಕೊಳ್ಳುವ ಯೋಗವಿರುತ್ತದೆ. ಯಾವ ಜಾತಕನು ಆಯುಷ್ಯದ ಬಹುಭಾಗ ಬಾಡಿಗೆ ಮನೆಯಲ್ಲಿಯೇ ವಾಸಿಸಬೇಕಾಗುತ್ತದೆ. ಯಾವ ಜಾತಕನು ಜಾಗೆ ಕೊಂಡು ಪಡೆದು ಮನೆ ಕಟ್ಟಿಸಬಹುದು. ಯಾವ ಜಾತಕ ಕಟ್ಟಿದ ಮನೆಯನ್ನು ಕೊಳ್ಳಬಹುದು. ಯಾವ ಜಾತಕನಿಗೆ ಸರಕಾರದಿಂದ ನಿವೇಶನ ಪಡೆಯುವ ಯೋಗವಿದೆ. ಯಾವ ಜಾತಕನಿಗೆ ಮನೆ ಕಟ್ಟಲು ಗೃಹ ನಿರ್ಮಾಣ ಸೊಸೈಯಿಟಿಯ ಸಹಕಾರ ಸಿಗುತ್ತದೆ.ಯಾರಿಗೆ ಸಹಕಾರ ಸಿಗುವದಿಲ್ಲ ಯಾವ ಜಾತಕನಿಗೆ ಮನೆ ಕಟ್ಟಲು ಅಥವಾ ಕೊಳ್ಳಲು ಬ್ಯಾಂಕ್ಕು ಜೀವವಿಮೆ ಮೊದಲಾದ ಹಣಕಾಸಿನ ಸಂಸ್ಥೆಗಳಿಂದ ಸಹಾಯ ಸಿಗುತ್ತದೆ. ಮನೆ ಕಟ್ಟುವ ಅಥವಾ ಕೊಳ್ಳುವ ಸಂಯೋಗ ಯಾರಿಗೆ ಯಾವಾಗ ಲಭಿಸುತ್ತದೆ. ಈ ಎಲ್ಲ ಪ್ರಶ್ನೆ ಸಮಸ್ಯೆಗಳಿಗೆ ಹೇಗೆ ಪರಿಪರಿಸಬೇಕು ಎಂಬುದನ್ನು ನೋಡುವಾ

ಯಾರೊಬ್ಬರ ಗೃಹಸೌಖ್ಯದ ವಿಷಯವಾಗಿ ಪರಿಶೀಲಿಸುವಾಗ ಆರು ಸಂಗತಿಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. 1] ಗೃಹಸೌಖ್ಯದ ಪೋಷಕ ಗ್ರಹಗಳು 2] ಗೃಹಸೌಖ್ಯದ ಪೋಷಕಸ್ಥಾನಗಳು 3] ಗೃಹಸೌಖ್ಯದ ಪೋಷಕಲಗ್ನಗಳು 4] ಗೃಹಸೌಖ್ಯದ ಪೋಷಕ ರಾಶಿಗಳು 5] ಗೃಹಸೌಖ್ಯದ ಶುಭಾ–ಅಶುಭ ಯೋಗಗಳು 6) ಗ್ರಹ ಸೌಖ್ಯದ ವಿಷಯವಾಗಿ ಗೋಚರೀ ಗ್ರಹಗಳ ಪರಿಭ್ರಮಣದ ಪರಿಣಾಮ ಹಾಗೂ ಮಹರ್ದಶೆ ಅಂತರರ್ದಶೆಗಳ ಪ್ರಭಾವ ಹೀಗೆ ವಾಸಿಸುವ ಮನೆಯ ವಿಷಯವಾಗಿ ಆರು ಸಂಗತಿಗಳನ್ನು ಪರಿಶೀಲಿಸಬೇಕು.

1] **ಗೃಹಸೌಖ್ಯದ ಪೋಷಕ ಗ್ರಹಗಳು** : ಗೃಹ ಸೌಖ್ಯದ ಪೋಷಕ, ಪೂರಕ, ಕಾರಕ ಗ್ರಹವೆಂದರೆ ಚಂದ್ರನು, ಚಂದ್ರನ ತರುವಾಯ ಶುಕ್ರ, ಗುರುಗಳು ಕ್ರಮಶ : ಪೋಷಕ, ಪೂರಕ, ಕಾರಕಗಳು ಚಂದ್ರ, ಶುಕ್ರ ಗುರುಗಳು ಯಾರ ಜಾತಕದಲ್ಲಿ ಬಲಾಢ್ಯರಿರುತ್ತಾರೋ ಅವರಿಗೆ ಗೃಹಸೌಖ್ಯ ಸಿಗುತ್ತದೆ. ಬಲಾಢ್ಯನೆಂದರೆ ಈ ಮೂರು ಗ್ರಹಗಳು ಸಾನಬಲದವರೂ,

ರಾಶಿಬಲದವರೂ ಇರಬೇಕು. ಅವರಲ್ಲಿಯೂ ಚಂದ್ರ, ಶುಕ್ರರು ಬಲಾಢ್ಯರಿದ್ದ ಜಾತಕನಿಗೆ ಗೃಹಸೌಖ್ಯ ಸಂಪೂರ್ಣ ಸಿಗುತ್ತದೆ. ಅಂದರೆ ಇವರಿಗೆ ಸ್ವಂತಮನೆ ಕಟ್ಟುವ ಇಲ್ಲವೇ ಕಟ್ಟಿಸಿದ ಮನೆಕೊಳ್ಳುವ ಯೋಗವಿರುತ್ತದೆ. ಮನೆ ಅಷ್ಟೇ ಏಕೆ ಥವ್ಯಬಂಗಲೆ ಸುಸಜ್ಜಿತವಾದ ಎಲ್ಲ ಆಧುನಿಕ ಸೌಲಭ್ಯಗಳಿಂದ ಕೂಡಿದ ಮನೆ ಲಭಿಸುತ್ತದೆ. ಇದೂ ಅಲ್ಲದೆ ಇವರು ಅನೇಕ ಮನೆಗಳನ್ನು ಕಟ್ಟಿ ಬಾಡಿಗೆಯನ್ನು ಪಡೆಯುವರು. ಈ ವರ್ಗದವರು ಕಾರಣಾಂತರದಿಂದ ಬಾಡಿಗೆ ಮನೆಗೆ ವಾಸಿಸುವ ಪ್ರಸಂಗ ಬಂದವರೂ ಕೂಡ ಮಾಲಕರೊಂದಿಗೆ ಸುಮಧುರ ಸಂಬಂಧ ಇರುತ್ತದೆ. ಅಲ್ಲದೆ ಆಧುನಿಕ ಎಲ್ಲ ಸೌಲಭ್ಯಗಳಿಂದ ಮನೆ ಬಂಗ್ಲೆಯಲ್ಲಿಯೇ ಇರುವ ಅವಕಾಶ ದೊರೆಯುತ್ತದೆ.

2] **ಗೃಹಸೌಖ್ಯದ ಪೋಷಕಸ್ಥಾನ :** ಗೃಹಸೌಖ್ಯದ ಪೋಷಕ ಪೂರಕ, ಕಾರಕಸ್ಥಾನವೆಂದರೆ ಚತುರ್ಥ ಸ್ಥಾನವು ಚತುರ್ಥೇಶ ಹಾಗೂ ಚತುರ್ಥ ಸ್ಥಾನದಲ್ಲಿರುವ ಗ್ರಹ ಬಲಾಢ್ಯರಿರದೇ ಯಾರಿಗೂ ಗೃಹಸೌಖ್ಯ ದೊರೆಯಲಾರದು. ಚತುರ್ಥದ ನಂತರ ದಶಮ, ಭಾಗ್ಯ ಸ್ಥಾನಗಳನ್ನು ಪರಿಶೀಲಿಸಬೇಕು ಏಕೆಂದರೆ ದಶಮವು ಚತುರ್ಥದ ಸಪ್ತಮದಲ್ಲಿರುವುದರಿಂದ ದಶಮಸ್ಥಾನದಲ್ಲಿರುವ ಯಾವುದೇ ಗ್ರಹಗಳ ನೇರ ದೃಷ್ಟಿ ಬೀಳುತ್ತದೆ. ಇದರಂತೆ ಯಾವುದೊಂದು ವಿಷಯಕ್ಕೆ ಜನ್ಮಾರಭ್ಯ ಪಡೆದುಕೊಂಡಿರಬೇಕಾಗುತ್ತದೆ ಅರ್ಥಾತ ಭೋಗಿಸುವ ಭಾಗ್ಯವಿರಬೇಕು. ಈ ಭಾಗ್ಯ ಸ್ಥಾನದಲ್ಲಿರುವ ಗ್ರಹ ಹಾಗೂ ಭಾಗ್ಯೇಶ ಬಲಾಢ್ಯನಿರದೇ ಪೂರಕ ನಿರದೆ ಯಾವುದೇ ವಿಷಯದ ಸೌಖ್ಯ ಭೋಗಿಸಲಾರರು. ಆದುದರಿಂದ ಚತುರ್ಥ ಸ್ಥಾನದ ನಂತರ ದಶಮ ಹಾಗೂ ಭಾಗ್ಯಸ್ಥಾನ ಹಾಗೂ ಈ ಸ್ಥಾನಾಧೀಶರ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ.

3] **ಗೃಹ ಸೌಖ್ಯದ ಪೋಷಕ ಲಗ್ನಗಳು :** ನಿರ್ದಿಷ್ಟ ಲಗ್ನದವರೇ ಗೃಹಸೌಖ್ಯ ಪಡೆದುಕೊಂಡು ಬಂದಿರುತ್ತಾರೆ ಎಂದು ಹೇಳಲುಬಾರದು ಏಕೆಂದರೆ ಇಲ್ಲಿ ಲಗ್ನಗಿಂತ, ಸ್ಥಾನಾಧೀಶರ ಹಾಗೂ ಪೋಷಕ ಗ್ರಹಗಳ ಬಲಾಬಲದ ಮೇಲೇ ಗೃಹಸೌಖ್ಯವಿರುತ್ತದೆ.ಆದಾಗ್ಯೂ ಮೇಷ, ಕರ್ಕ,ಕನ್ಯಾ, ಧನು, ಕುಂಭ ಈ ಐದು ಲಗ್ನಗಳು ಗೃಹಸೌಖ್ಯದ ಪೋಷಕ ಲಗ್ನಗಳಿರು

ಪುದೆನೋ ನಿಜ ಆದರೆ ಈ ಲಗ್ನಗಳ ಗೃಹಸೌಖ್ಯ ಕೊಡುವ ಗ್ರಹಗಳು ಬಲಾಢ್ಯರಿರಬೇಕು. ಅಂದರೆ ಮೇಷ ಲಗ್ನವಿದ್ದು ಚಂದ್ರನು ಬಲಾಢ್ಯನಿರಬೇಕು. ಕರ್ಕ ಹಾಗೂ ಕುಂಭಲಗ್ನಗಳಿದ್ದು, ಶುಕ್ರನು ಬಲಾಢ್ಯನಿರಬೇಕು. ಕನ್ಯಾ ಹಾಗೂ ಧನು ಲಗ್ನಗಳಿದ್ದು, ಗುರುವು ಬಲಾಢ್ಯನಿರಬೇಕು. ಅಂದರೆ ಮಾತ್ರ ಗೃಹಸೌಖ್ಯ ಲಭಿಸುತ್ತದೆ.

**4] ಗೃಹಸೌಖ್ಯದ ಪೋಷಕ ರಾಶಿಗಳು :** ನಿರ್ದಿಷ್ಟ ರಾಶಿಯವರಿಗೆ ಗೃಹಸೌಖ್ಯ ದೊರೆಯುತ್ತದೆಂದು ಹೇಳಲುಬಾರದು ಆದಾಗ್ಯೂ ಸ್ತ್ರೀ ರಾಶಿಯಲ್ಲಿ ಚಂದ್ರನಿರುವ ಜಾತಕದವರಿಗೂ ಜಲಚರ ಹಾಗೂ ಭೂರಾಶಿಯಲ್ಲಿ ಚಂದ್ರನಿರುವ ಜಾತಕದವರಿಗೂ ಅನೇಕ ಗ್ರಹಗಳು ಸ್ತ್ರೀರಾಶಿಯಲ್ಲಿರುವ ಜಾತಕದಕವರಿಗೆ ಗೃಹಸೌಖ್ಯ ದೊರೆಯುತ್ತದೆ. ಕಾರಣ ಈ ಜಾತಕದವರು ತಾಳ್ಮೆ, ಸಹನಶೀಲತೆ, ಹೊಂದಿಕೊಳ್ಳುವ ಸ್ವಭಾವದವರಿದ್ದು, ಎಂಥ ಕಠೋರ ಸ್ವಭಾವದ ಮನೆ ಮಾಲಕರು ದೊರೆತರೂ ಕೂಡ ಇವರು ಹೊಂದಿಕೊಂಡಿರುತ್ತಾರೆ. ಅಲ್ಲದೇವುಷ್ಟ ಉಪದ್ರಕಾರಿ ಬಾಡಿಗೆದಾರರು ಸಿಕ್ಕರೂ ಕೂಡ ಇವರು ಹೊಂದಿಕೊಂಡಿರುತ್ತಾರೆ.

ಆದರೆ ಪುರುಷ ರಾಶಿಯಲ್ಲಿ ಚಂದ್ರನಿರುವ ಜಾತಕದವರು ಅಗ್ನಿ ಹಾಗೂ ವಾಯು ರಾಶಿಯಲ್ಲಿ ಚಂದ್ರನಿರುವ ಜಾತಕದವರು ಅನೇಕ ಗ್ರಹಗಳು ಪುರುಷ ರಾಶಿಯಲ್ಲಿರುವ ಜಾತಕದವರು ಈ ಮೂರು ವರ್ಗದ ಜಾತಕದವರಿಗೆ ಗೃಹಸೌಖ್ಯ ದೊರೆಯುವುದಿಲ್ಲ. ಇವರು ಬಾಡಿಗೆದಾರರಾದರೆ ಮನೆಯ ಮಾಲಕರೊಂದಿಗೆ ದಿನನಿತ್ಯ ಘರ್ಷಣೆ ಹಾಗೂ ಇವರೇ ಮನೆಗಳ ಮಾಲಕರಾದರೆ ಪ್ರತಿನಿತ್ಯ ಬಾಡಿಗೆದಾರರನ್ನು ವಿನಾಕಾರಣ ಸತಾಯಿಸುತ್ತಾರೆ.

**5] ಗೃಹ ಸೌಖ್ಯದ ಶುಭಾ ಅಶುಭ ಯೋಗಗಳು : 1)** ಚಂದ್ರ, ಶುಕ್ರ, ಗುರು ಈ ಮೂರೂ ಗ್ರಹಗಳಲ್ಲಿ ಯಾವುದೊಂದು ಗ್ರಹ ಬಲಾಢ್ಯನಾಗಿ ಚತುರ್ಥದಲ್ಲಿದ್ದ ಜಾತಕನಿಗೆ ಗೃಹಸೌಖ್ಯ ದೊರೆಯುತ್ತದೆ. ಇಂಥ ಜಾತಕದವರು ತಮ್ಮದೆ ಆದ ಮನೆಯನ್ನು ಪಡೆದಿರುತ್ತಾರೆ.

2) ಶನಿ, ಮಂಗಳ, ರವಿ, ರಾಹು, ಈ ನಾಲ್ಕು ಗ್ರಹಗಳಲ್ಲಿ ಯಾವುದೊಂದು ಗ್ರಹ ಚತುರ್ಥದಲ್ಲಿದ್ದರೆ ಗೃಹಸೌಖ್ಯಕ್ಕೆ ತೊಂದರೆ.

3) ಶನಿ-ಮಂಗಳ, ಶನಿ-ಚಂದ್ರ, ಶನಿ-ರವಿ, ರಾಹು-ಚಂದ್ರ ರವಿ-ಕೇತು ಈ ಗ್ರಹಗಳ ಪ್ರತಿ ಯೋಗವು ಚತುರ್ಥ-ದಶಮ, ಲಗ್ನ-ಸಪ್ತಮ ಈ ಸ್ಥಾನಗಳಲ್ಲಿದ್ದ ಜಾತಕದವರಿಗೆ ಗೃಹಸೌಖ್ಯ ದೊರೆಯಲಾರದು. ಇಂಥ ಜಾತಕದವರು ಮನೆ ಮಾಲಿಕರಾಗಿದ್ದರೆ ಬಾಡಿಗೆದಾರರ ಉಪಟಳವನ್ನು ಇವರೇ ಬಾಡಿಗೆದಾರರಾಗಿದ್ದರೆ ಮನೆಯ ಮಾಲಕರ ಉಪಟಳವನ್ನು ಎದುರಿಸ ಬೇಕಾಗುತ್ತದೆ.

4) ಶನಿ-ಮಂಗಳ, ಶನಿ-ಚಂದ್ರ, ಶನಿ-ರವಿ, ರವಿ-ಕೇತು, ಚಂದ್ರ-ರಾಹು ಈ ಗ್ರಹಗಳ ಯುತಿಯೋಗವು ಚತುರ್ಥ, ದಶಮ, ಲಗ್ನಭಾಗ್ಯದಲ್ಲಿದ್ದ ಜಾತಕ ದವರಿಗೆ ಗೃಹಸೌಖ್ಯ ದೊರೆಯಲಾರದು. ಇವರು ಮನೆಯ ಮಾಲಕರಾದರೆ ಬಾಡಿಗೆದಾರರ ಉಪಟಳವನ್ನು ಇವರು ಬಾಡಿಗೆದಾರರಾದರೆ ಮನೆಯ ಮಾಲಕರ ಉಪಟಳವನ್ನು ಎದುರಿಸಬೇಕಾಗುತ್ತದೆ.

5) ಶನಿ, ರವಿ, ಮಂಗಳ, ರಾಹು, ಈ ನಾಲ್ಕು ಗ್ರಹಗಳಲ್ಲಿ ಯಾವುದೇ ಮೂರು ಗ್ರಹಗಳು ಚತುರ್ಥದಲ್ಲಿದ್ದ ಜಾತಕರಿಗೆ ಗೃಹಸೌಖ್ಯ ವೆಂಬುದು ಕನಸಿನ ಮಾತಾಗಿರುತ್ತದೆ. ಈ ವರ್ಗದವರು ಸ್ವಂತಮನೆ ಇದ್ದರೂ ಬಾಡಿಗೆ ಮನೆಯಲ್ಲಿಯೇ ಅನೇಕ ವರ್ಷಗಳವರೆಗೆ ಇರಬೇಕಾದ ಸನ್ನಿವೇಶಗಳು ಬರುತ್ತವೆ.

6) ಚತುರ್ಥೇಶ, ಚಂದ್ರ, ಶುಕ್ರ ಗುರು ಈ ನಾಲ್ಕು ಗ್ರಹಗಳು ಬಲಾಢ್ಯರಿದ್ದ ಜಾತಕರಿಗೆ ಗೃಹಸೌಖ್ಯ ಸಂಪೂರ್ಣಸಿಗುತ್ತದೆ. ಇವರು ಅನೇಕ ಮನೆ [ಚಾಳು]ಗಳನ್ನು ಕಟ್ಟಿ ಬಾಡಿಗೆಯಿಂದ ಉಪಜೀವಿಸುತ್ತಾರೆ ಹಾಗೂ ಇವರಿಗೆ ಒಳ್ಳೆಯ ಬಾಡಿಗೆದಾರರು ಸಿಗುತ್ತಾರೆ.

7) ಯಾರ ಜಾತಕದಲ್ಲಿ ಚತುರ್ಥೇಶ ಹಾಗೂ ಶುಕ್ರ ಬಲಾಢ್ಯರಿದ್ದು, ಚಂದ್ರನು ಮಿಥುನ, ತುಲಾ ಕುಂಭ ಕರ್ಕ, ಮೀನ ಈ ಯಾವುದೊಂದು ರಾಶಿ

ಯಲ್ಲಿದ್ದ ಜಾತಕರು ಕಟ್ಟಿದ ಮನೆಗಿಂತ ಜಾಗೆತೆಗೆದುಕೊಂಡು ಮನೆಕಟ್ಟುವುದು ಹಿತಕರವು. ಏಕೆಂದರೆ ಈ ವರ್ಗದವರು ಎಂಥ ಸುಸಜ್ಜಿತ ಸೌಕರ್ಯಪೂರ್ಣವಿರುವ ಕಟ್ಟಿದ ಮನೆ ಕೊಂಡರೂ ಕೂಡ ಇವರು ಸುಖಿಗಳಿರುವುದಿಲ್ಲ. ಅದು ಇಲ್ಲ, ಇದುಇಲ್ಲ, ಇದು ಇರಬೇಕಾಗಿತ್ತು, ಅದುಬೇಡಾಗಿತ್ತು ಹೀಗೆಲ್ಲ ಬೇಕು-ಬೇಡಗಳಿಗಾಗಿ ಅಸುಖಿಗಳಾಗಿರುತ್ತಾರೆ.

8] ಚತುರ್ಥೇಶ, ಚಂದ್ರ, ದುರ್ಬಲರಿದ್ದು ಶನಿ, ಮಂಗಳ ರಾಹುಗಳಲ್ಲಿ ಯಾರಿಬ್ಬರು ಚತುರ್ಥದಲ್ಲಿದ್ದ ಜಾತಕರು ಕಟ್ಟಿದ ಮನೆಯನ್ನೇ ಕೊಳ್ಳುವುದು ಹಿತಕರ ಏಕೆಂದರೆ ಇವರಿಗೆ ಗೃಹಸೌಖ್ಯವಿರುವುದಿಲ್ಲ. ಜಾಗ ತೆಗೆದುಕೊಂಡು ಮನೆ ಕಟ್ಟಲು ಅನೇಕ ತೊಂದರೆಗಳನ್ನು ಎದುರಿಸಬೇಕಾಗುತ್ತದೆ.

9) ಚಂದ್ರ, ಶುಕ್ರ, ಚತುರ್ಥೇಶ, ರವಿ ಈ ನಾಲ್ಕು ಗೃಹಗಳು ಬಲಾಢ್ಯರಿದ್ದ ಜಾತಕನಿಗೆ ಸರಕಾರದಿಂದಾಗಲೀ ಗೃಹನಿರ್ಮಾಣ ಸಹಕಾರಿ ಸೊಸೈಟಿಯಿಂದಾಗಲೀ ಕಟ್ಟಿದ ಮನೆ ಸಿಗುತ್ತದೆ ಇಲ್ಲವೆ ಮನೆ ಕಟ್ಟಲು ಜಾಗೆಯು ಸಿಗುತ್ತದೆ.

10] ರವಿ, ಬುಧ, ಚಂದ್ರ ಶುಕ್ರ ಚತುರ್ಥೇಶರು ಬಲಾಢ್ಯರಿದ್ದ ಜಾತಕನಿಗೆ ಬ್ಯಾಂಕು, ಜೀವವಿಮಾ ಮೊದಲಾದ ಮನೆಕಟ್ಟಲು ಸಾಲಕೊಡುವ ಸಂಸ್ಥೆಗಳಿಂದ ಸಾಲ ಸಿಗುತ್ತದೆ.

11) ಚತುರ್ಥೇಶ ಹಾಗೂ ಚಂದ್ರ ನಿರ್ಬಲರಿದ್ದು ಶನಿ-ಮಂಗಳ, ಶನಿ–ಚಂದ್ರರ ಶನಿ–ರವಿಯರ ಯುತಿಯೋಗ ಪ್ರತಿಯೋಗ ಯಾವುದೇ ಸ್ಥಾನದಲ್ಲಿದ್ದರೂ ಕೂಡ ಗೃಹಸೌಖ್ಯ ಸಿಗುವುದಿಲ್ಲ.

12] ಚಂದ್ರ, ಶುಕ್ರ, ಗುರು, ಚತುರ್ಥೇಶರು ಬಲಾಢ್ಯರು ಹಾಗೂ ಚತುರ್ಥದಲ್ಲಿ ಬಲಾಢ್ಯ ಗ್ರಹ ಈ ಐದು ಸಂಗತಿಗಳಲ್ಲಿ ಯಾವುದೇ ಮೂರು ಸಂಗತಿಗಳು ಪೋಷಕರಿದ್ದ ಜಾತಕನು ಅಪಾರ್ಟಮೆಂಟಿನಲ್ಲಿ ಮನೆಕೊಳ್ಳುವುದರಿಂದ ಗೃಹಸೌಖ್ಯ ಸಿಗುತ್ತವೆ.

13) ಚತುರ್ಥೇಶ, ಚಂದ್ರ, ಶುಕ್ರ, ಗುರು ಈ ನಾಲ್ಕು ಗ್ರಹಗಳಲ್ಲಿ ಯಾವುದೇ ಎರಡು ಗ್ರಹಗಳು ಪೂರಕವಿದ್ದು ಲಾಭೇಶ ಪಂಚಮೇಶರಲ್ಲಿ ಯಾರೊಬ್ಬರು ಪೋಷಕರಿದ್ದ ಜಾತಕನು ಭೋಗ್ಯ(ವತ್ತಿ), ಮನೆಯ ವ್ಯವಹಾರದಲ್ಲಿ ಯಶ ಸಿಗುತ್ತದೆ ಇಲ್ಲವೆ ಅನೇಕ ವರುಷಗಳವರೆಗೆ ಬಾಡಿಗೆ ಮನೆಯಲ್ಲಿದ್ದು ಆ ಮನೆಯ ಮಾಲಕರು ಇವರಿಗೆ ಖರೀದಿ ಕೊಡುತ್ತಾರೆ.

14) ಯಾರ ಜಾತಕದಲ್ಲಿ ಚತುರ್ಥೇಶ ಹಾಗೂ ಚಂದ್ರರು ದುರ್ಬಲ ರಿದ್ದು, ಚತುರ್ಥದಲ್ಲಿ ಶನಿ, ಮಂಗಳ ರಾಹು ಈ ಮೂರು ಗ್ರಹಗಳಲ್ಲಿ ಯಾವುದೇ ಎರಡು ಗ್ರಹಗಳು ಚತುರ್ಥದಲ್ಲಿದ್ದ ಜಾತಕನು ಒತ್ತಿ (ಭೋಗ್ಯ) ಮನೆ ಹಿಡಿಯುವುದಾಗಲೀ ಅಥವಾ ಅನೇಕ ವರುಷಗಳವರೆಗೆ ಬಾಡಿಗೆ ಇದ್ದ ಮನೆಯ ಮಾಲಕರಿಂದ ಖರೀದಿಗಾಗಿ ಮುಂಗಡ ಹಣ ಕೊಡುವುದರಿಂದ ಹಾನಿಮಾಡಿಕೊಳ್ಳುತ್ತಾರೆ.

## 6] ಗೃಹಸೌಖ್ಯದ ವಿಷಯವಾಗಿ ಗೋಚರೀ ಗ್ರಹಗಳ ಪರೀಭ್ರಮಣದ ಪರಿಣಾಮ ಹಾಗೂ ಮಹರ್ದಶೆ ಅಂತರರ್ದಶೆಗಳ ಪ್ರಭಾವದ ಪರಿಣಾಮ

ಯಾರೊಬ್ಬರ ಆರ್ಥಿಕ ವಿಷಯವಾಗಿ ಅನೇಕ ಗೋಚರಿ ಗ್ರಹಗಳ ಪರಿಭ್ರಮಣದ ಶುಭ-ಅಶುಭ ಫಲಗಳನ್ನು ಪರಿಶೀಲಿಸಬೇಕಾಗುತ್ತದೆ. ಆದರೆ ಗ್ರಹಸೌಖ್ಯದ ವಿಷಯವಾಗಿ ಗುರು, ಶನಿ, ರವಿ, ಕ್ರಮಶಃ ಈ ಮೂರೆ ಮೂರು ಗ್ರಹಗಳ ಶುಭಾ-ಅಶುಭ ಫಲ ಗಳನ್ನು ಮಾತ್ರ ಪರಿಶೀಲಿಸಬೇಕಾ ಗುತ್ತಿದ್ದು ಅವುಗಳ ವಿವರಣೆ ಹೀಗಿದೆ.

1] **ಗುರುವಿನ ಗೋಚರಿ ಫಲ :** ಗುರುವು ಗೋಚರೀಯಿಂದ 2-5-7-9-11ನೇಯ ಶುಭ ಫಲದಾಯಕನಾಗಿ ಒಂದಾಗಜೀವನದ ಎಲ್ಲದೃಷ್ಟಿ ಯಿಂದ ಶುಭ ಫಲವನ್ನು ಕೊಡುತ್ತಾನೆ. ಅದರಲ್ಲಿಯೂ ಗೃಹಸೌಖ್ಯದ ವಿಷಯವಾಗ ಬರೆಯಬೇಕೆಂದರೆ ಜಾಗೆಕೊಳ್ಳುವಿಕೆ ಇಲ್ಲವೆ ಜಾಗೆ ಲಭಿಸುವಿಕೆ, ಮನೆಕಟ್ಟುವಿಕೆ ಇಲ್ಲವೆ ಕಟ್ಟಿದ ಮನೆಕೊಳ್ಳುವಿಕೆ ಇಲ್ಲವೆ ಅಪಾರ್ಟಮೆಂಟನಲ್ಲಿ

ಮನೆಕೊಳ್ಳುವಿಕೆ, ದೊರಕುವಿಕೆ. ಜೀವವಿಮೆ, ಬ್ಯಾಂಕ ಮೊದಲಾದ ಸಂಸ್ಥೆಗಳಿಂದಲೂ ಆಪ್ತೇಷ್ಟರಿಂದಲೂ ಮಿತ್ರವರ್ಗದವರಿಂದಲೂ ಸರಾಫರಿಂದಲೂ ಆರ್ಥಿಕ ಅನುಕೂಲವಾಗುವಿಕೆ. ಗೃಹ ನಿರ್ಮಾಣ ಸಹಕಾರಿ ಸೊಸೈಯಿಟಿ ಇಲ್ಲವೇ ಸಂಸ್ಥೆಗಳಿಂದ ಜಾಗೆ ಮನೆ ಲಭಿಸುವಿಕೆ. ಕಟ್ಟಿದ ಮನೆಗೆ ಉತ್ತಮ ಬಾಡಿಗೆದಾರರು ಲಭಿಸುವಿಕೆ ಈಗಾಗಲೇಬಾಡಿಗೆ ಇದ್ದವರು ಮಾಲೀಕರೊಂದಿಗೆ ಮಧುರ ಸಂಬಂಧ ಬರುವಿಕೆ, ಈ ಎಲ್ಲ ಶುಭ ಸಂಗತಿಗಳು ಗುರುವು ಗೋಚರೀಯಿಂದ ಶುಭನಾಗಿ ಬಂದಾಗ ದೊರೆಯುತ್ತವೆ.

ಗುರುವು ಗೋಚರೀಯಿಂದ 4-6-8-12ನೇಯ ಅಶುಭ ಫಲದಾಯಕನಾಗಿ ಬಂದಾಗ ಬಾಡಿಗೆದಾರರಿಗೆ ಮನೆಯ ಮಾಲಿಕರಿಂದಕಿರುಕಳ, ಮನೆ-ಬಾಡಿಗೆ ಏರಿಸುವಿಕೆ, ಸೌಲಭ್ಯದ ಕಡಿತ ಮಾಲಕರೊಂದಿಗೆ ಮನಸ್ತಾಪವಾಗಿ ಕೋರ್ಟಿನಕಟ್ಟೆ ಹತ್ತುವಿಕೆ ಫೌಜದಾರಿ ಮೊಕದ್ದಮೆ ಎದುರಿಸುವಿಕೆ ಅಲ್ಲದೇ ನೆರೆಹೊರೆಯವರಿಂದಲೂ ಭಾಗಾದಿಗಳಿಂದಲೂ ಕಿರುಕಳ ಎದುರಿಸಬೇಕಾಗುತ್ತದೆ. ಇದರಂತೆ ಮೇಲೆ ಬರೆದ ಅಶುಭ ಫಲದಾಯಕ ಗುರುವು ಮನೆಯ ಮಾಲಕರಿಗೆ ಬಂದಾಗ ಬಾಡಿಗೆದಾರಿಂದ ತೊಂದರೆ ಸಮಯಕ್ಕೆ ಸರಿಯಾಗಿ ಬಾಡಿಗೆ ಕೊಡದಿರುವಿಕೆ ಇತ್ತ ಬಾಡಿಗೆಯು ಇಲ್ಲಾ ಅತ್ತ ಮನೆಯು ಬಿಡುವುದಿಲ್ಲ ಹೀಗಾಗಿ ಕೋರ್ಟಿನ ಕಟ್ಟೆ ಹತ್ತುವ ಪ್ರಸಂಗ, ಇದಲ್ಲದೇ ಮೇಲೆ ಬರೆದ ಶುಭ ಫಲದಾಯಕ ಗುರು ಬಂದಾಗ ಜಾಗೆ ಕೊಳ್ಳಲು ತೊಂದರೆ ಮನೆ ಕೊಳ್ಳಲು ಅಥವಾ ಕಟ್ಟಲು ಆರ್ಥಿಕ ತಾಪತ್ರಯ ಕಟ್ಟಬೇಕೆಂದಿರುವಕಟ್ಟಡವು ಆರ್ಥಿಕ ಮುಗ್ಗಟ್ಟಿನಿಂದಲೂ ಆಳುಗಳ ಸಮಸ್ಯೆಗಳಿಂದಲೂ ಕಟ್ಟಡಕ್ಕೆ ಬೇಕಾಗುವ ಸಾಮಗ್ರಿಗಳ ಅಭಾವದಿಂದಲೂ ಪರವಾನಿಗೆ ಅಧಿಕಾರಿಗಳ ಅಸಹಕಾರಗಳಿಂದಲೂ ವ್ಯಾಜ್ಯದ ಮೂಲಕವೂ ಕಟ್ಟಡ ಅರ್ಧಕ್ಕೆ ನಿಲ್ಲುವ ಸಂಭವವಿದೆ. ಅಲ್ಲದೇ ಮನೆಯ ಮಾಲಕರಿಗೆ ಬಾಡಿಗೆದಾರ ಬಾರದೇ ಅನೇಕ ತಿಂಗಳವರೆಗೆ ಮನೆ ಖಾಲಿ ಇಡಬೇಕಾಗುತ್ತದೆ. ಗುರುವು ಗೋಚರೀಯಿಂದ 1–3–10ನೆಯವನಾಗಿ ಬಂದಾಗ ಗೃಹಸೌಖ್ಯದ ಯಾವ ಏರಿಳಿತವಿರದೇ ಯಥಾ ಸ್ಥಿತಿ ಮುಂದುವರೆಯುತ್ತದೆ.

**2] ಶನಿಯ ಗೋಚರಿ ಫಲ :** ಶನಿಯು ಗೋಚರಿಯಿಂದ **3-6-10-11**ನೇಯ ಶುಭ ಫಲದಾಯಕನಾಗಿ ಬಂದಾಗ ಜೀವನದ ಎಲ್ಲ ದೃಷ್ಟಿಯಿಂದ ಶುಭ ಫಲವನ್ನು ಕೊಡುತ್ತಾನೆ. ಅದರಲ್ಲಿಯೂ ಗೃಹಸೌಖ್ಯದ ವಿಷಯವಾಗಿ ಹೇಳಬೇಕೆಂದರೆ ಜಾಗೆ ಕೊಳ್ಳಬೇಕೆಂಬ ಇಚ್ಛೆಯುಳ್ಳವರಿಗೆ ಜಾಗೆ, ನಿವೇಶನ ಕೊಳ್ಳುವಿಕೆ ಕಟ್ಟಿದ ಮನೆ ಕಟ್ಟುವಿಕೆ ಇಲ್ಲವೆ ಕೊಳ್ಳುವಿಕೆ ಅಪಾರ್ಟಮೆಂಟಿನಲ್ಲಿ ಮನೆ ಕೊಳ್ಳುವಿಕೆ ಸರಕಾರದಿಂದ ಜಾಗೆ ಇಲ್ಲವೆ ಕಟ್ಟಿದ ಮನೆ ಪಡೆಯುವಿಕೆ, ಕಟ್ಟಿದ ಮನೆಗೆ ಉತ್ತಮ ಬಾಡಿಗೆದಾರರು ಲಭಿಸುವಿಕೆ ಮನೆಗೆ ಹೆಚ್ಚಿನ ಬಾಡಿಗೆ ಪಡೆಯುವಿಕೆ ಈಗಾಗಲೇ ಬಾಡಿಗೆದಾರರಿದ್ದ ಮನೆ ಮಾಲಕರೊಂದಿಗೆ ಉತ್ತಮ ಸಂಬಂಧ ಕುದುರುವಿಕೆ ಸೌಲಭ್ಯ ಪಡೆಯುವಿಕೆ. ಈ ಎಲ್ಲ ಗೃಹಸೌಖ್ಯಕ್ಕೆ ಸಂಬಂಧಿಸಿದ ಶುಭ ಘಟನೆಗಳು ಜರುಗುವವು.

ಇದರಂತೆ ಶನಿಯು ಗೋಚರಿಯಿಂದ 1-2-4-5_8ನೇ ಅಶುಭ ಫಲದಾಯಕನಾಗಿ ಬಂದಾಗ ಜೀವನದ ಎಲ್ಲ ದೃಷ್ಟಿಯಿಂದ ತಾಪದಾಯಕವಿರುತ್ತದೆ. ಗೃಹಸೌಖ್ಯದ ಬಗೆಗೆ ಬರೆಯಬೇಕೆಂದರೆ ಬಾಡಿಗೆದಾರರಿಗೆ ಮನೆಯ ಮಾಲಕರೊಂದಿಗೆ ಕಾಟ, ಕಿರುಕಳ ಇದರಂತೆ ಮನೆಯ ಮಾಲಕರಿಗೆ ಬಾಡಿಗೆದಾರರಿಂದ ಅಸಹಕಾರ ಕೋರ್ಟಿನ ಕಟ್ಟೆ ಹತ್ತುವ ಮೂಲಕ ಫೌಜದಾರಿ ಮೊಕ್ಕದ್ದಮೆ ಎದುರಿಸುವ ಮೂಲಕವೂ ಸೌಲಭ್ಯಗಳ ಕಡಿತದ ಮೂಲಕವೂ ತೊಂದರೆಯನ್ನು ಎದುರಿಸಬೇಕಾಗುತ್ತದೆ. ಅಲ್ಲದೆ ಜಾಗೆ ಕೊಳ್ಳುವುದಕ್ಕೆ ವಿಘ್ನ ಮನೆ ಕಟ್ಟಬೇಕೆನ್ನುವವರಿಗೆ ಆರ್ಥಿಕ ಮುಗ್ಗಟ್ಟಿನಿಂದಲೂ ಆಳುಗಳ ಸಮಸ್ಯೆಗಳಿಂದಲೂ ಕಟ್ಟಡಕ್ಕೆ ಬೇಕಾಗುವ ಸಾಮಗ್ರೀಗಳ ಕೊರತೆಯಿಂದಲೂ ತೊಂದರೆ ಆಗುತ್ತದೆ. ಕೆಲ ಅವಧಿಯವರೆಗೆ ಕಟ್ಟಡವನ್ನು ಅರ್ಧಕ್ಕೆ ನಿಲ್ಲಿಸಬೇಕಾಗಬಹುದು. ನೆರೆಹೊರೆಯವರಿಂದಲೂ ಭಾಗಾದಿಗಳಿಂದಲೂ, ಕಿರುಕಳವನ್ನು ಎದುರಿಸಬೇಕಾಗುತ್ತಾದೆ. ಮನೆಯ ಮಾಲಕರಿಗೆ ಬಾಡಿಗೆದಾರರು ಬಾರದೇ ಅನೇಕ ತಿಂಗಳವರೆಗೆ ಮನೆ ಖಾಲಿ ಇಡಬೇಕಾಗುತ್ತದೆ. ಇನ್ನು ಶನಿಯು ಗೋಚರಿಯಿಂದ 7ನೇ ಹಾಗೂ 9ನೇಯವನಾಗಿ ಬಂದಾಗ ಯಾವ ಶುಭಾ-ಅಶುಭ ಫಲ ಕೊಡುವುದಿಲ್ಲ ಯಥಾ ಸ್ಥಿತಿ ಮುಂದುವರೆಯುತ್ತದೆ.

**3] ರವಿಯ ಗೋಚರೀ ಫಲ :** ರವಿಯು ಗೋಚರೀಯಿಂದ 3–6–10-11ನೇಯ ಶುಭ ಫಲದಾಯಕನಾಗಿ ಬಂದಾಗ ಜೀವನದ ಎಲ್ಲ ದೃಷ್ಟಿಯಿಂದ ಶುಭ ಫಲ ಕೊಡುತ್ತಾನೆ.ಆ ಗೃಹಸೌಖ್ಯದ ವಿಷಯವಾಗಿ ಹೇಳ ಬೇಕೆಂದರೆ ಸರಕಾರಿ ಅಧಿಕಾರಿಗಳಿಂದ ಸಹಾಯ ಸಿಗುತ್ತದೆ. ಅಲ್ಲದೆ ಕಟ್ಟಡಕ್ಕಾಗಿ ನಿವೇಶನಕ್ಕೆ ಜಾಗೆ ದೊರಕಿಸಲು ಅದಕ್ಕೆ ಬೇಕಾದ ಪರವಾನಿಗೆ ಮೊದಲಾವುಗಳು ಸುಲಭವಾಗಿ ದೊರೆಯುತ್ತವೆ ಅಲ್ಲದೆ ಜೀವ ವಿಮೆ, ಬ್ಯಾಂಕ ಮೊದಲಾದ ಗೃಹ ನಿರ್ಮಾಣಕ್ಕೆ ಸಾಲ ಕೊಡುವ ಸಂಸ್ಥೆಗಳಿಂದ ಸುಲಭವಾಗಿ ಸಾಲ ಸಿಗುತ್ತದೆ. ಇದೂ ಅಲ್ಲದೇ ಜಾಗೆ ಹಾಗೂ ಕಟ್ಟಿದ ಸಂಬಂಧ ತಕರಾರು ವಗೈರವಿದ್ದರೆ ಅವು ಕೂಡ ಸುಲಭವಾಗಿ ಬಗೆ ಹರಿಯುತ್ತವೆ. ಎಲ್ಲ ಕ್ಕಿಂತ ಮಹತ್ವದ ಸಂಗತಿಯೆಂದರೆ ಗೋಚರೀಯಿಂದ ರವಿಯು ಶುಭನಾಗಿ ಬಂದಾಗ ಸರಕಾರಿ ನಿವೇಶನ ಸಹಕಾರಿ ಗೃಹನಿರ್ಮಾಣ ಸೊಸೈಟಿಗಳಿಂದ ನಿವೇಶನ ಇಲ್ಲವೆ ಕಟ್ಟಿದಮನೆ ಸಿಗುತ್ತದೆ. ಅಲ್ಲದೆ ಆಶ್ರಯ ಮೊದಲಾದ ಸರಕಾರಿ ಸ್ವಾಮ್ಯದ ಸಂಸ್ಥೆಗಳಿಂದ ಜಾಗೆ ಇಲ್ಲವೇ ಮನೆ ಪುಕ್ಕಟೆ ದೊರೆಯುತ್ತದೆ. ಆದರೆ ಗೋಚರಿಯಿಂದ1–2–4–5–8–12ನೇ ಅಶುಭ ಫಲದಾಯಕ ರವಿ ಬಂದಾಗ ಕಟ್ಟಡಕ್ಕಾಗಿ ಜಾಗೆ ಸಿಗಲು ತೊಂದರೆ ಮನೆ ಕಟ್ಟಲು ಪರವಾನಿಗೆ ಸಿಗುವುದು ಕಠಿಣ ಮನೆ ಇಲ್ಲವೆ ಜಾಗೆಗೆ ಸಂಬಂಧಿಸಿದ ದಾಯಾದಿಗಳಿಂದಲೂನೆರೆಹೊರೆಯವರಿಂದಲೂ ಅಸಹಕಾರ ಬ್ಯಾಂಕು, ಜೀವವಿಮೆ, ಮೊದಲಾದ ಸಾಲ ಕೊಡುವ ಸಂಸ್ಥೆ ಗಳಿಂದ ಸಕಾಲಕ್ಕೆ ಸಾಲ ಸಿಗದಿರುವಿಕೆ ಸಹಕಾರಿಗೃಹನಿರ್ಮಾಣ ಸೊಸೈಟಿಯ ಪದಾಧಿಕಾರಿಗಳಿಂದ ಕಿರುಕಳ ಕಟ್ಟಡಕ್ಕೆ ಬೇಕಾಗುವ ಸಾಮಗ್ರಿಗಳ ಕೊರತೆ ಕಟ್ಟಡ ಕಟ್ಟುವ ಆಳುಗಳಿಂದ ತೊಂದರೆ ಇವೇ ಮೊದಲಾದ ತೊಂದರೆಗಳನ್ನು ಎದುರಿಸಬೇಕಾಗುತ್ತದೆ. ಆದರೆ ಗೋಚರಿ 7ನೇ ಹಾಗೂ 9ನೇ ರವಿ ಬಂದಾಗ ಶುಭಾ-ಅಶುಭಗಳ ಮಿಶ್ರ ಫಲ ದೊರೆಯುತ್ತದೆ ಇಲ್ಲವೇ ಯಥಾಸ್ಥಿತಿ ಮುಂದುವರೆಯುತ್ತದೆ.

**ದಶಾಪದ್ಧತಿಯಿಂದ ಗೃಹ ಸೌಖ್ಯದ ವಿಚಾರ :** ಯಾರೊಬ್ಬರ ಗೃಹಸೌಖ್ಯದ ದೃಷ್ಟಿಯಿಂದ ಯಾವ ಗ್ರಹಗಳ ಮಹರ್ದಶೆ, ಅಂತರ್ದಶೆಗಳು

ಶುಭ ಫಲವನ್ನು ಕೊಡುತ್ತವೆ. ಯಾವ ಗ್ರಹಗಳ ಮಹರ್ದಶೆ ಅಂತರ್ದಶೆಗಳು ಅಶುಭ ಫಲ ಕೊಡುತ್ತವೆ. ಇವುಗಳ ವಿವರಣೆ ಈ ಕೆಳಗಿನಂತೆ ವಿವರಿಸಲಾಗಿದೆ.

1] ಜಾತಕನ ಜಾತಕದಲ್ಲಿಯ ಯಾವ ಗ್ರಹಗಳು ಬಲಾಢ್ಯರಿರುವವೋ ಆ ಗ್ರಹಗಳ ಮಹರ್ದಶೆ. ಅಂತರರ್ದಶೆಗಳು ಶುಭ ಫಲವನ್ನು ಕೊಡುತ್ತವೆ. ಯಾವ ಗ್ರಹಗಳು ದುರ್ಬಲ, ನಿರ್ಬಲ ಇರುತ್ತವೆಯೋ ಆ ಗ್ರಹಗಳ ಮಹರ್ದಶೆ ಅಂತರರ್ದಶೆಗಳು ಅಶುಭ ಫಲಗಳನ್ನು ಕೊಡುತ್ತವೆ.

2] ಮಹರ್ದಶೆ ಅಂತರರ್ದಶೆಗಳು ಒಂದೇ ಗ್ರಹದ ಕಾಲದಲ್ಲಿ ನಡೆಯುತ್ತಿದ್ದರೆ. ಆ ಗ್ರಹದ ಬಲಾಬಲದ ಮೇಲೆ ಶುಭಾ–ಅಶುಭ ಫಲಗಳು ದೊರೆಯುತ್ತವೆ. ಬಲಾಢ್ಯ ಗ್ರಹದ ಮಹರ್ದಶೆಯಲ್ಲಿ ಅವರದೇ ಅಂತರರ್ದಶೆಯು ಶುಭ ಫಲವನ್ನು ಕೊಡುತ್ತವೆ. ಇದರಂತೆ ದುರ್ಬಲ ನಿರ್ಬಲ ಗ್ರಹದ ಮಹರ್ದಶೆಯಲ್ಲಿ ಅವರದೇ ಅಂತರರ್ದಶೆಯು ಫಲವೂ ಅಶುಭವಿರುತ್ತದೆ.

3] ಬಲಾಢ್ಯ ಗ್ರಹದ ಮಹರ್ದಶೆಯಲ್ಲಿ ಬಲಾಢ್ಯ ಮಿತ್ರ ಗ್ರಹದ ಅಂತರರ್ದಶೆಯ ಫಲವು ಶುಭವಿರುತ್ತದೆ. ಬಲಾಢ್ಯ ಗ್ರಹದ ಮಹರ್ದಶೆಯಲ್ಲಿ ದುರ್ಬಲ. ನಿರ್ಬಲ ಮಿತ್ರದ ಗ್ರಹದ ಅಂತರದಶೆಯ ಫಲವು ಅಶುಭವಿರುತ್ತದೆ. ಇದರಂತೆ ದುರ್ಬಲ. ನಿರ್ಬಲ ಗ್ರಹದ ಮಹರ್ದಶೆಯಲ್ಲಿ ಬಲಾಢ್ಯ ಮಿತ್ರಗ್ರಹದ ಅಂತರರ್ದಶೆಯ ಫಲವೂ ಮಿಶ್ರವಿರುತ್ತದೆ.

4] ಬಲಾಢ್ಯ ಗ್ರಹದ ಮಹರ್ದಶೆಯಲ್ಲಿ ಬಲಾಢ್ಯ ಶತ್ರು ಗ್ರಹ ಫಲವು ಶುಭಾ ಅಶುಭದ ಮಿಶ್ರ ಫಲವಿರುತ್ತದೆ.

5] ದುರ್ಬಲ ನಿರ್ಬಲ ಗ್ರಹದ ಮಹರ್ದಶೆಯಲ್ಲಿ ದುರ್ಬಲ. ನಿರ್ಬಲ ಶತ್ರು ಗ್ರಹದ ಅಂತರರ್ದಶೆ ತೀರ ಅಶುಭವಿರುತ್ತದೆ.

6] ಬಲಾಢ್ಯ ಚತುರ್ಥೇಶನ ಮಹರ್ದಶೆಯಲ್ಲಿ ಇಲ್ಲವೆ ಬಲಾಢ್ಯ ಗ್ರಹವು ಚತುರ್ಥದಲ್ಲಿದ್ದು, ಆ ಗ್ರಹದ ಮಹರ್ದಶೆಯಲ್ಲಿ ಶುಭ ಫಲಗಳು

ದೊರೆಯುತ್ತವೆ. ಇದರಂತೆ ಬಲಾಢ್ಯ, ಚತುರ್ಥೇಶನ ಮಹರ್ದಶೆಯಲ್ಲಿ ಅವನದೇ ಅಂತರರ್ದಶೆಯ ಫಲವು ಶುಭವಿರುತ್ತದೆ. ಇದರಂತೆ ಬಲಾಢ್ಯ ಗ್ರಹವು ಚತುರ್ಥದಲ್ಲಿದ್ದು ಅದರದೇ ಅಂತರರ್ದಶೆಯ ಫಲವುಶುಭವಿರುತ್ತದೆ.

7] ಜಾತಕದಲ್ಲಿ ಚಂದ್ರ, ಶುಕ್ರ, ಗುರುಗಳು ಬಲಾಢ್ಯರಿದ್ದು, ಅವರ ಮಹರ್ದಶೆ, ಅಂತರರ್ದಶೆಯಲ್ಲಿ ಗೃಹಸೌಖ್ಯ ಸಂಪೂರ್ಣ ಸಿಗುತ್ತದೆ ಅರ್ಥಾತ ಮನೆ ಕಟ್ಟಲು, ಕೊಳ್ಳಲು ಉತ್ತಮ ಬಾಡಿಗೆ ಮನೆ ಸಿಗುವುದು ಪತ್ನೀ ಮನೆ ಸಿಗುವುದು ಇಲ್ಲವೆ ಬಹಳ ವರುಷಗಳವರಿಗೆ ಬಾಡಿಗೆ ಮನೆಯಲ್ಲಿದ್ದು ಆ ಮನೆಯ ಮಾಲಕರೆ ಖರೀದಿ ಕೊಡುವರು. ಕಡಿಮೆ ಬಾಡಿಗೆಯಲ್ಲಿ ವಾಸಿಸುವ ಬಾಡಿಗೆದಾರ ಇಲ್ಲವೇ ತಾಪದಾಯಕ ಬಾಡಿಗೆದಾರ ಮನೆ ಖಾಲಿ ಮಾಡುವುದು ಇದರಂತೆ ತಾಪದಾಯಕ ಮನೆ ಮಾಲಕ ಮೆತ್ತಗಾಗುವರು.

8] ದುರ್ಬಲ ಪಾಪಗ್ರಹಗಳ ಮಹರ್ದಶೆ ಅಂತರರ್ದಶೆಗಳು ಗೃಹಸೌಖ್ಯಕ್ಕೆ ಪ್ರತಿಕೂಲವು ಅದರಲ್ಲಿಯೂ ಮಂಗಳ, ರಾಹು, ಶನಿ, ರವಿ, ಕ್ರಮಶಃ ತಾಪದಾಯಕವಿರುತ್ತವೆ.

9] ಬಲಾಢ್ಯ ಭಾಗ್ಯೇಶನ ಹಾಗೂ ದಶಮಸ್ಥಾನದಲ್ಲಿರುವ ಬಲಾಢ್ಯ ಗ್ರಹದ ಮಹರ್ದಶೆ ಅಂತರರ್ದಶೆಯಲ್ಲಿ ಸಂಪೂರ್ಣ ಗೃಹಸೌಖ್ಯ ಸಿಗುತ್ತದೆ ಏಳನೇ ನಂಬರಿನಲ್ಲಿ ಬರೆದಂತೆ..

10] ಪಾಪ ಗ್ರಹಗಳು ದುರ್ಬಲ, ನಿರ್ಬಲರಿದ್ದು ಅವರ ಮಹರ್ದಶೆ ಅಂತರರ್ದಶೆಯಲ್ಲಿ ಗೃಹಸೌಖ್ಯಕ್ಕೆ ಹಾನಿಕಾರಕವು. ಹೀಗೆ ಗೃಹಸೌಖ್ಯದ ದೃಷ್ಟಿಯಿಂದ ಮಹರ್ದಶೆ ಅಂತರರ್ದಶೆಗಳ ಫಲಗಳ ಅರ್ಥ ವಿವರಣೆ ಮಾಡಬೇಕು.

ಯಾರೊಬ್ಬರ ಗೃಹಸೌಖ್ಯದ ವಿಷಯವಾಗಿ ಪ್ರಮುಖವಾಗಿ ಆರು ಸಂಗತಿಗಳನ್ನು ಏಕೆ ಹಾಗೂ ಹೇಗೆ ಪರಿಶೀಲಿಸಬೇಕೆಂಬುದನ್ನು ವಿವರಿಸಿದ್ದಾಯಿತು. ಇನ್ನು ಗೃಹಸೌಖ್ಯದ ವಿಷಯವಾಗಿ ಯಾವ ಯಾವ ಮುಂಜಾಗ್ರತೆ

ಕ್ರಮಗಳನ್ನು ಕೈಕೊಳ್ಳಬೇಕು. ಯಾವ ಯಾವ ಪರಿಹಾರ ಕ್ರಮಗಳನ್ನು ಕೈಕೊಳ್ಳಬೇಕೆಂಬುವನ್ನು ಪರಿಶೀಲಿಸುವಾ.

### 1) ಗೃಹಸೌಖ್ಯದ ವಿಷಯವಾಗಿ ಮುಂಜಾಗ್ರತೆ ಕ್ರಮಗಳು

ಯಾರೊಬ್ಬ ಜಾತಕನ ಗೃಹಸೌಖ್ಯದ ವಿಷಯವಾಗಿ ಯಾವ ಯಾವ ಮುಂಜಾಗ್ರತೆ ಕ್ರಮಗಳನ್ನು ಕೈಕೊಳ್ಳಬೇಕು ಎಂಬುದರ ಪೂರ್ವದಲ್ಲಿ ಮೊದಲು ಅವರ ಜಾತಕವನ್ನು ಸೂಕ್ಷ್ಮವಾಗಿ ಪರಿಶೀಲಿಸಬೇಕು ಸೂಕ್ಷ್ಮವಾಗಿ ಅಂದರೆ ಲಗ್ನ ಸರಿಯಾಗಿದೆಯೇ ಹೇಗೆ? ಅಥವಾ ಸಂಧಿಗ್ಧವಿದೆಯೇ ಹೇಗೆ ? ಚಂದ್ರನು ಯಾವ ರಾಶಿಯಲ್ಲಿರುತ್ತಾನೆ ಎಷ್ಟು ಅಂಶದವನಾಗಿರುತ್ತಾನೆ ಗೃಹಸೌಖ್ಯದ ಪೋಷಕ, ಪೂರಕ, ಕಾರಕ ಗ್ರಹಗಳಬಲಾಬಲ ಹೇಗೆ? ಇದರಂತೆ ಗೃಹಸೌಖ್ಯದ ಮಾರಕ ಪ್ರತಿಕೂಲ ಗ್ರಹಗಳಬಲಾಬಲ ಹೇಗೆ ಎಂಬುದನ್ನು 126ರಿಂದ136 ಪುಟವವರೆಗೆ ವಿವರಿಸಿದ ಆರು ಸಂಗತಿಗಳಲ್ಲಿ ಯಾವ ಯಾವ ಸಂಗತಿಗಳು ಪೂರಕವಿರುತ್ತವೆ. ಯಾವ ಸಂಗತಿಗಳು ಮಾರಕವಿರುತ್ತವೆ ಎಂಬುದನ್ನು ಖಚಿತಪಡಿಸಿಕೊಂಡು ಆ ಬಳಿಕ ಮುಂಜಾಗ್ರತೆ ಕ್ರಮಗಳ ಬಗೆಗೆ ವಿಚಾರಿಸಬೇಕು. ಅವುಗಳ ವಿವರಣೆ ಈ ಕೆಳಗಿನಂತಿದೆ.

1) ಶುಭ ಗ್ರಹಗಳು ಗೃಹಸೌಖ್ಯದ ಪೋಷಕ ಗ್ರಹಗಳಿದ್ದರೆ ಪಾಪ ಗ್ರಹಗಳು ಗೃಹಸೌಖ್ಯದ ಮಾರಕ ಗ್ರಹಗಳು ಶುಭ ಗ್ರಹಗಳಲ್ಲಿ ಚಂದ್ರ, ಶುಕ್ರ ಗುರುಗಳು ಕ್ರಮಶಃ ಪೋಷಕ ಗ್ರಹಗಳಾದರೆ ಮಂಗಳ, ರಾಹು, ಶನಿ, ರವಿ ಯರು ಕ್ರಮಶಃ ಮಾರಕ ಗ್ರಹಗಳು ಅವರಲ್ಲಿಯೂ ಚಂದ್ರನು ಗೃಹಸೌಖ್ಯದ ಹೆಚ್ಚು ಪೋಷಕ ಗ್ರಹವಿದ್ದರೆ ಕುಜನು ಹೆಚ್ಚು ಮಾರಕ ಗ್ರಹವು.
ಆದುದರಿಂದ ಯಾರ ಜಾತಕದಲ್ಲಿ ಪಾಪಗ್ರಹಗಳು ಚತುರ್ಥ ಸ್ಥಾನದಲ್ಲಿರುವರೋ ಅಂಥ ಜಾತಕರು ಬಾಡಿಗೆ ಮನೆಯಲ್ಲಿದ್ದರೆ ಮಾಲಕರೊಂದಿಗೆ ಹೊಂದಾಣಿಕೆ ಮಾಡಿಕೊಂಡು ಹೋಗಬೇಕು ಹಾಗೂ ದಾಯಾದಿಗಳೊಂದಿಗೂ ನೆರೆಹೊರೆಯವರೊಂದಿಗೂ ಹೊಂದಾಣಿಕೆ ಮನೋವೃತ್ತಿ ಇರಬೇಕು ಕೋರ್ಟಿನ ಕಟ್ಟೆ ಹತ್ತುವುದಾಗಲೀ ಫೌಜದಾರ ಮೊಕದ್ದಮ್ಮೆ ಎದುರಿಸುವುದರಿಂದಲೂ ಹಾನಿಯಾಗುತ್ತದೆ.

2) ಯಾರ ಜಾತಕದಲ್ಲಿ ಶನಿ–ಮಂಗಳ, ಶನಿ–ಚಂದ್ರ ಶನಿ–ರವಿ ರಾಹು–ಚಂದ್ರ ಇವರ ಪ್ರತಿಯೊಂದು ಯುತಿಯೋಗವು ಲಗ್ನ, ಚತುರ್ಥ

ದಶಮ, ಭಾಗ್ಯದಲ್ಲಿರುವವು ಇಂಥವರು ಮನೆಕಟ್ಟುವ ಗೋಜಿಗೆ ಹೋಗದೆ ಕಟ್ಟಿದ ಮನೆಯನ್ನೇ ಕೊಳ್ಳಬೇಕು ಆದರೆ ಒಂದು ಸಂಗತಿ ಲಕ್ಷದಲ್ಲಿಡಬೇಕು ಮನೆ ಖರೀದಿಸುವ ಪೂರ್ವದಲ್ಲಿ ಮಾರಾಟ ಮಾಡುವ ಕಟ್ಟಡದ ಮನೆಯ ವಿಷಯಕ್ಕೆ ಸಂಬಂಧಿಸಿದ ಕಾಗದಪತ್ರಗಳನ್ನು ಕಾಯಿದೆ ಅಂಶವನ್ನು ಚೆನ್ನಾಗಿ ಪರಿಶೀಲಿಸಿ ವಕೀಲರ ಸಲಹೆ ಪಡೆದುಕೊಂಡು ಖರೀದಿಸಬೇಕು.

3) ಯಾರ ಜಾತಕದಲ್ಲಿ ಚಂದ್ರ, ಶುಕ್ರ, ಹಾಗೂ ಚತುರ್ಥೇಶರು ಬಲಾಢ್ಯರಿರುವರೋ ಅಂಥವರು ಜಾಗೆ ತೆಗೆದುಕೊಂಡು ಸ್ವಥಃ ಮನೆಯನ್ನು ಕಟ್ಟಬೇಕು.

4) ಚತುರ್ಥದಲ್ಲಿ ಬಲಾಢ್ಯ ಗ್ರಹ, ಚತುರ್ಥೇಶ ಬಲಾಢ್ಯ ಹಾಗೂ ಚಂದ್ರ ಶುಕ್ರರು ಬಲಾಢ್ಯರು ಹೀಗೆ ನಾಲ್ಕು ಸಂಗತಿಗಳು ಬಲಾಢ್ಯರಿರುವ ಜಾತಕರು ಸ್ವಥಮನೆ ಕಟ್ಟುವರಲ್ಲದೇ ಬಾಡಿಗೆ ಸಲುವಾಗಿ ಮನೆ ಅಂಗಡಿ ಖೋಲಿ ಲಾಜಿಂಗ ಈ ಮೊದಲಾದ ಕಟ್ಟಡ ಕಟ್ಟಿ ಬಾಡಿಗೆಯಿಂದ ಉಪಜೀವಿಸುತ್ತಾರೆ.

5) ಯಾರ ಜಾತಕದಲ್ಲಿ ಮಂಗಳ, ಶನಿ, ರಾಹು, ರವಿ ಈ ನಾಲ್ಕು ಗ್ರಹಗಳಲ್ಲಿ ಯಾವುದೇ ಮೂರು ಗ್ರಹಗಳು ಚತುರ್ಥದಲ್ಲಿದ್ದು, ಚತುರ್ಥೇಶನು ದುರ್ಬಲನಿದ್ದು ನಿರ್ಬಲ ಜಾತಕನು ಆಯುಷ್ಯದ ಬಹುಭಾಗ ಬಾಡಿಗೆಯ ಮನೆಯಲ್ಲಿಯೇ ವಾಸಿಸುವನು ಸ್ವಂತ ಮನೆ ಕಟ್ಟಲು ಅನೇಕ ತೊಂದರೆಗಳನ್ನು ಎದುರಿಸಬೇಕಾಗುತ್ತದೆ. ಆದುದರಿಂದ ಬಾಡಿಗೆಯ ಮನೆಯಲ್ಲಿಯೇ ಇರುವುದು ವಾಸಿ.

6) ಚತುರ್ಥೇಶ, ಭಾಗ್ಯೇಶ, ಚಂದ್ರ, ಶುಕ್ರ, ರವಿ ಈ ಐದು ಗ್ರಹಗಳು ಬಲಾಢ್ಯರಿದ್ದ ಜಾತಕನಿಗೆ ಸರಕಾರದಿಂದ ನಿವೇಶನವಾಗಲಿ ಕಟ್ಟಿದ ಮನೆಯಾಗಲೀ ಸಿಗುತ್ತದೆ ಅದಕ್ಕಾಗಿ ಪ್ರಯತ್ನಿಸುವುದೇ ಲೇಸು ಹಿತಕರವು.

7) ರವಿ, ಬುಧ, ಚಂದ್ರ ಹಾಗೂ ಚತುರ್ಥೇಶ ಬಲಾಢ್ಯರಿದ್ದ ಜಾತಕನಿಗೆ ಮನೆಕಟ್ಟಲು ಬ್ಯಾಂಕ, ಜೀವವಿಮೆ ಮೊದಲಾದ ಸಂಸ್ಥೆಗಳಿಂದಾಗಲೀ ಗೃಹನಿರ್ಮಾಣ ಸಹಕಾರಿ ಸೊಸೈಟೀಗಳಿಂದಾಗಲೀ ಹಣದ ಅನುಕೂಲತೆ

ಆಗುತ್ತದೆ ಆದಕ್ಕಾಗಿ ಗೋಚರಿಯಿಂದ ಗುರು ಶನಿಯರು ಬಲಾಢ್ಯರಿರುವಾಗ ಮನೆಕಟ್ಟಲು ಪ್ರಯತ್ನಿಸಬೇಕು.

8) ಯಾರ ಜಾತಕದಲ್ಲಿ ಚತುರ್ಥೇಶ, ಚಂದ್ರ, ಶುಕ್ರ, ಗುರುಗಳು ಬಲಾಢ್ಯರಿರುವರೋ ಅವರು ಮನೆಕಟ್ಟಲು ವಾಸ್ತು ನೋಡುವ ಅವಶ್ಯಕತೆ ಇಲ್ಲ ಏಕೆಂದರೆ ಇವರು ಎಂಥ ಮನೆ ಕಟ್ಟಿದರೂ ಗೃಹಸೌಖ್ಯ ಸಿಕ್ಕಿಸಿಗುತ್ತದೆ.

9] ಯಾರ ಜಾತಕದ ಚತುರ್ಥದಲ್ಲಿ ಪಾಪ ಗ್ರಹ ಅಥವಾ ಪಾಪ ಗ್ರಹಗಳಿದ್ದು ಚತುರ್ಥೇಶ ಹಾಗೂ ಚಂದ್ರ ದುರ್ಬಲವಿರುವ ಜಾತಕರು ವಾಸ್ತು ನೋಡಿ ಮನೆಕಟ್ಟಬೇಕು. ಕನಿಷ್ಟಪಕ್ಷ ಈಶಾನ್ಯ ಉತ್ತರ ಪೂರ್ವದಲ್ಲಿ ದೇವರ ಮನೆಯನ್ನು ಆಗ್ನೇಯ ದಿಕ್ಕಿನಲ್ಲಿ ಅಡಿಗೆಮನೆಯನ್ನಾದರೂ ಕಟ್ಟಿದಲ್ಲಿ ತುಸು ಗೃಹಸೌಖ್ಯ ಸಿಗುವುದರಲ್ಲಿ ಸಹಾಯವಾಗುತ್ತದೆ.

10] ಚತುರ್ಥೇಶ ಹಾಗೂ ಚಂದ್ರ ಬಲಾಢ್ಯರಿರುವ ಜಾತಕರಿಗೆ ಬಾಡಿಗೆಮನೆ ದೊರಕಿಸುವುದರಲ್ಲಿ ತೊಂದರೆ ಆಗುವುದಿಲ್ಲವಷ್ಟೇ ಅಲ್ಲಾ ಮಾಲಕರೊಂದಿಗೆ ಸುಮಧುರ ಸಂಬಂಧವಿರುತ್ತದೆ. ಯಾರ ಜಾತಕದಲ್ಲಿ ಚತುರ್ಥೇಶ ಹಾಗೂ ಚಂದ್ರ ದುರ್ಬಲರಿರುವರೋ ಅವರಿಗೆ ಬಾಡಿಗೆ ಮನೆ ಸಿಗುವುದು ಕಠಿಣ ಅಂಥವರು ತಾವೇ ಪ್ರಯತ್ನಿಸದೇ ಬೇರೆ ಅವರ ಮುಖಾಂತರ ಪ್ರಯತ್ನಿಸಬೇಕು.

11] ಚಂದ್ರ, ಶುಕ್ರ, ಗುರು ರವಿ ಹಾಗೂ ಚತುರ್ಥೇಶರು ಈ ಐದು ಸಂಗತಿಗಳಲ್ಲಿ ಯಾವುದೇ ಮೂರು ಸಂಗತಿಗಳು ಪೂರಕವಿದ್ದ ಜಾತಕನು ಕಟ್ಟಿದ ಮನೆಯಾಗಲಿ ಅಪಾರ್ಟಮೆಂಟಿನಲ್ಲಿಯ ಮನೆಯಾಗಲೀ ಕೊಳ್ಳುವುದು ಹಿತಕರ.

12] ಚತುರ್ಥೇಶ, ಲಾಭೇಶ ಭಾಗ್ಯೇಶ ಹಾಗೂ ಬುಧ, ಚಂದ್ರ ಶುಕ್ರ ಈ ಆರು ಗ್ರಹಗಳು ಬಲಾಢ್ಯರಿದ್ದು. ಈ ಆರುಸಂಗತಿಗಳಲ್ಲಿ ಯಾವುದೇ ಮೂರು ಸಂಗತಿಗಳು ಪೂರಕವಿದ್ದ ಜಾತಕನು ಅನೇಕ ವರುಷಗಳವರೆಗೆ ಬಾಡಿಗೆ ಮನೆಯಲ್ಲಿದ್ದು ಆ ಮನೆಯನ್ನೇ ಖರೀದಿಸುವರು ಇಲ್ಲವೇ ಉತ್ತಮ

ಮನೆ ಭೋಗ್ಯ ಕ್ರಿಯೆಯಿಂದ ಮನೆ ಪಡೆಯುವ ಯೋಗವಿದೆ ಅದಕ್ಕಾಗಿ ಪ್ರಯತ್ನಿಸುವುದು ಹಿತಕರ.

## 2] ಗೃಹಸೌಖ್ಯದ ಪರಿಹಾರದ ಕ್ರಮಗಳು

ಈವರೆಗೆ ಗೃಹಸೌಖ್ಯದ ವಿಷಯವಾಗಿ ಯಾವ ಯಾವ ಮುಂಜಾಗ್ರತೆ ಕ್ರಮಗಳನ್ನು ಕೈಕೊಳ್ಳಬೇಕು ಎಂಬುದನ್ನು ವಿವರಿಸಿದ್ದಾಯಿತು. ಇನ್ನು ಗೃಹ ಸೌಖ್ಯಕ್ಕೆ ಬರುವ ತೊಂದರೆ ನಿವಾರಣೆಗಾಗಿ ಕೈಕೊಳ್ಳಬೇಕಾದ ಪರಿಹಾರ ಕ್ರಮದ ಬಗೆಗೆ ಈ ಕೆಳಗಿನಂತೆ ವಿವರಿಸಲಾಗಿದೆ.

### 1) ಉದಕಶಾಂತಿ, ನವಗ್ರಹಶಾಂತಿ, ವಾಸ್ತುಶಾಂತಿ

ಯಾರ ಜಾತಕದಲ್ಲಿ ಚತುರ್ಥದಲ್ಲಿ ಪಾಪಗ್ರಹ ಇಲ್ಲವೇ ಪಾಪಗ್ರಹಗಳಿರುವವೋ ಅಥವಾ ಯಾರ ಜಾತಕದಲ್ಲಿ ಚತುರ್ಥೇಶ ಹಾಗೂ ಚಂದ್ರ, ಶುಕ್ರರು ದುರ್ಬಲ ನಿರ್ಬಲರಿರುವರೋ ಅಂಥ ಜಾತಕರು **ಪ್ರತಿವರುಷ ನವಗ್ರಹ ಶಾಂತಿಯನ್ನಾಗಲೀ ಉದಕ ಶಾಂತಿಯನ್ನಾಗಲಿ ಕೈಕೊಳ್ಳಬೇಕು. ಹಾಗೂ ವ್ಯವಸ್ಥಿತವಾಗಿ ಗೃಹಪ್ರವೇಶದ ಪೂರ್ವದಲ್ಲಿ ವಾಸ್ತುಶಾಂತಿ ಮಾಡಿಸಬೇಕು.**

### 2] ನಾರಾಯಣ ಬಲೀ

ಕಟ್ಟಿದ ಮನೆಯನ್ನು ಯಾರು ಕೊಳ್ಳುವರೋ ಅಥವಾ ಯಾರೊಬ್ಬರು ಅಪಾರ್ಟಮೆಂಟಿನಲ್ಲಿ ಕೆಲ ವರುಷ ಕೆಲವರು ವಾಸಿಸಿ ಆ ಮನೆಯನ್ನು ಖರೀದಿ ತೆಗೆದುಕೊಂಡಿದ್ದರೆ ಅಥವಾ ಸಹಕಾರಿ ಗೃಹನಿರ್ಮಾಣದ ಸೊಸೈಯಿಟಿ ಸದಸ್ಯರು ತಮ್ಮ ಮನೆಯನ್ನು ಮಾರಲು, ಇಲ್ಲವೇ ವತ್ತಿಕೊಟ್ಟರೆ ಅಂಥ ಮನೆಯನ್ನು ಯಾರು ಕೊಳ್ಳುವರೋ ಹೀಗೆ ಮೂರು ಪ್ರಕಾರದ ಯಾವುದೊಂದು ಮನೆಕೊಂಡರೆ ಕೊಂಡ ಯಜಮಾನನು **|ನಾರಾಯಣ ಬಲೀ|** ಶಾಂತಿಯನ್ನು ಅವಶ್ಯ ಮಾಡಲೇಬೇಕು ಆ ಬಳಿಕ ವಾಸಿಸಲು ಹೋಗಬೇಕು. ಏಕೆಂದರೆ ಯಾರೊಬ್ಬರು ತಾವು ವಾಸಿಸುತ್ತಿರುವ ಮನೆಯನ್ನು ವತ್ತೀ ಹಾಕುವುದಾಗಲೀ ಮಾರಾಟ ಮಾಡುವುದಾಗಲೀ ಸಂತೋಷ ಸಮಾಧಾನದಿಂದ ವ್ಯವಹಾರ ಸ್ವಮಾತ ವುದಿಲ್ಲ ಆರ್ಥಿಕ ಅಡಚಣೆಯ ಮೂಲಕವೂ ಅಥವಾ ಇನ್ನಾವುದಾದರೂ ಬಲವಾದ ಕಾರಣದಿಂದ ವತ್ತಿ ಇಲ್ಲವೇ ಮಾರಾಟ ಮಾಡುವರೇ ವಿನಃ

ಸ್ವಸಮಾಧಾನದಿಂದ ಇರುವುದಿಲ್ಲ ಎಂಬ ಸಂಗತಿ ಲಕ್ಷದಲ್ಲಿಡಬೇಕು ಅಥವಾ ಅಪಾರ ಪರಿವಾರದವರಲ್ಲಿ ಯಾರೊಬ್ಬರಿಗಾಗಲೀ ತಮ್ಮ ಮನೆ ವೃತ್ತಿ [ಭೋಗ್ಯ] ಇಲ್ಲವೇ ಮಾರುವುದು ಅವರ ಸಮ್ಮತಿ ಇರುವುದಿಲ್ಲ.ಅಥವಾ ಅವರ ಸಮೀಪದ ಬಳಗದವರಲ್ಲಿ ಯಾರೊಬ್ಬರು ತಾವೇ ಖರೀದಿ ತೆಗೆದುಕೊಳ್ಳುವ ವಿಚಾರದವರಿದ್ದು ಕೆಲಕಾರಣಗಳ ಮೂಲಕ ವ್ಯವಹಾರವಾಗಿರುವುದಿಲ್ಲ ಅಥವಾ ಯಾರೊಬ್ಬರುಕಷ್ಟಪಟ್ಟು ಬಹಳಶ್ರಮವಹಿಸಿ ಮನೆ ಮಾಡಿ ಮನೆ ಮಾರುವುದು ಅನಿವಾರ್ಯ ಪ್ರಸಂಗ ಬಂದಾಗ ಮಾರುತ್ತಾರೆ ಇಂಥ ಮನೆಕೊಂಡರೆ ಕೊಂಡ ವ್ಯಕ್ತಿಗೆ ಗೃಹಸೌಖ್ಯ ಸಿಗುವುದಿಲ್ಲ ಕಾರಣ ಮಾರಾಟ ಮಾಡಿದ ವ್ಯಕ್ತಿ ಇಲ್ಲವೆ ಅವರ ಪರಿವಾರದ ಯಾರೊಬ್ಬರಿಗೆ ಆ ಮನೆಯು ವಿಷಯವಾಗಿ ಮೋಹ, ಆಶೆ, ಅಭಿಲಾಷೆ ಇರುತ್ತದೆ ಅದಕ್ಕಾಗಿ **ನಾರಾಯಣಬಲೀ** ಮಾಡಿಸಿದಲ್ಲಿ ಮಾತ್ರ ಗೃಹಸೌಖ್ಯ ಸಿಗುತ್ತದೆ. ಅವರಲ್ಲಿಯೂ ಪಾಪಗ್ರಹಗಳು ಚತುರ್ಥ ದಲ್ಲಿರುವ ಚತುರ್ಥೇಶ ಹಾಗೂ ಚಂದ್ರ, ಶುಕ್ರರು ನಿರ್ಬಲರಿರುವ ಜಾತಕದವ ರಂತೂ **ನಾರಾಯಣ ಬಲೀ** ಶಾಂತಿಯನ್ನು ಅವಶ್ಯ ಮಾಡಬೇಕು.

3] **ತ್ರಿಪಿಂಡಿ ಶ್ರಾದ್ಧ** : ತಮ್ಮ ಮನೆಯಲ್ಲಿ ಅಥವಾ ತಮ್ಮ ಆಪ್ತೇಷ್ಟರ ಮನೆಯಲ್ಲಿ ಯಾರೊಬ್ಬರು ದುರ್ಮರಣದಿಂದ ಗತಿಸಿದರೆ ಗತಿಸಿದವ್ಯಕ್ತಿಗೆ ಪ್ರೇತ ಯೋನಿ ಪ್ರಾಪ್ತವಾಗುತ್ತದೆ.ಅಂತ್ಯಕ್ರಿಯೆಯುಆಗಿದ್ದರೂಕೂಡಾ ಆ ವ್ಯಕ್ತಿಯ ಆಸೆ. ಆಕಾಂಕ್ಷೆಗಳು ಬಾಕಿ ಉಳಿದಿದ್ದರೆ ಆ ವ್ಯಕ್ತಿಗೆ ಸದ್ಗತಿ ಸಿಗುವುದಿಲ್ಲ. ಅದ ಕ್ಕಾಗಿ **ತ್ರಿಪಿಂಡೀ ಶ್ರಾದ್ಧವನ್ನು ಮಾಡಬೇಕು.** ದುರ್ಮರಣವೆಂದರೆ ನಾವು ಹಡಗು ಬೋಟು, ದೋಣಿ ಮೊದಲಾದವುಗಳು ಮುಳಗಿ ಸೈಕಲ, ಮೋಟರ ಸೈಕಲ್ಲ, ಸ್ಕೂಟರ,ಲೂನಾ,ಕಾರು, ಟ್ರಕ್,ಮೋಹಡ, ರೇಲ್ವೆವಿಮಾನ ಮೊದ ಲಾದ ವಾಹನಗಳಿಂದ ಅಘಾತವಾಗುವಿಕೆ, ಗಣಿ ಕಾರಖಾನೆಗಳಲ್ಲಿ ಯಂತ್ರಗಳ ಸ್ಫೋಟದಿಂದಾಗಲೀ ವಿದ್ಯುತ್‌ಉಪಕರಣಗಳಿಂದಾಗಲಿ ಮನೆ ಇಲ್ಲವೆ ಕಾರಕಾನೆ ಗಳಲ್ಲಿ ಬೆಂಕಿ ಬಿದ್ದು ದುರ್ಮರಣಕ್ಕೆ ಇಡಾಗುವಿಕೆ, ಗಿಡ, ಮರಗಳು ಬಿದ್ದು ಗೋಡೆ ಕುಸಿದು ದುರ್ಮರಣಕ್ಕೆ ಇಡಾಗುವಿಕೆ ನೇಣು ಹಾಕಿಕೊಂಡು ವಿಷ ಪ್ರಶಾನ ಮಾಡಿ, ಇಲ್ಲವೆ ಕೊಲೆ ಆಗಿ ದುರ್ಮರಣಕ್ಕೆ ಇಡಾಗುವಿಕೆ ಇಲ್ಲವೆ

ಬ್ರಹ್ಮಚಾರಿ, ಕುಮಾರಿ, ಬಾಣಂತಿಯರು ಸಾವಿಗೀಡಾಗುವಿಕೆ ಇಲ್ಲವೇ ಪ್ರಸವ ಸಮಯದಲ್ಲಿ ಸಾವಿಗೀಡಾವಿಕೆ ಅಥವಾ ಅತ್ತೆಮನೆಯಲ್ಲಿಯ ಕಾಟದಿಂದಾಗಲಿ ಸಹಿಸಿಕೊಳ್ಳದ ಹಾಗೂ ಅಪರಿಹಾರವಾಗದ ಬೇನೆಗಳಿಂದಾಗಲಿ ಅಥವಾ ಜೀವನ ದಲ್ಲಿ ಯಾವುದೊಂದು ಕಾರಣದಿಂದ ಜಿಗುಪ್ಸೆಯಾಗಿ ಆತ್ಮಹತ್ಯೆ ಮಾಡಿಕೊಂಡ ವ್ಯಕ್ತಿಗಳು ಹೀಗೆ ಮೇಲೆ ಬರೆದ ಆತ್ಮಹತ್ಯೆ ಹಾಗೂ ದುರ್ಮರಣದಿಂದ ಸಾವಿಗೀಡಾದ ವ್ಯಕ್ತಿಗಾಗಿ ತ್ರಿಪಿಂಡಿ ಶ್ರಾದ್ಧವನ್ನು ಮಾಡಬೇಕು. **ತ್ರಿಪಿಂಡಿ ಶ್ರಾದ್ಧ ಮಾಡಲಿಲ್ಲದಿದ್ದರೆ ದುರ್ಮರಣ ಇಲ್ಲವೇ ಆತ್ಮಹತ್ಯೆ ಮಾಡಿಕೊಂಡ ವ್ಯಕ್ತಿಗಳು ಪ್ರೇತಯೋನಿಯಲ್ಲಿ ಜನಿಸಿ ಮನೆಯ ಜನರಿಗೆ ತೊಂದರೆ ಕೊಡುತ್ತವೆ.** ಅಂದರೆ ಮನೆಯಲ್ಲಿಯ ಮಕ್ಕಳ ವಿದ್ಯಾಭ್ಯಾಸಕ್ಕೆ ತೊಂದರೆ ಮದುವೆಗೆಬಂದ ಮಕ್ಕಳ ವಿವಾಹಕ್ಕೆ ತೊಂದರೆ ಮನೆಯಲ್ಲಿ ಪ್ರತಿನಿತ್ಯ ಜಗಳ, ಮನಸ್ತಾಪ ಯಾರೊಬ್ಬರೂ ಉದ್ಯೋಗ ನೌಕರೀ ಮಾಡದೇ ಸಿಗದೇ ಹಾಗೆ ಅಲೆದಾಡುವಿಕೆ ಮೊದಲಾದ ತೊಂದರೆಗಳಾಗುತ್ತವೆ. ಅದಕ್ಕಾಗಿ ಆದರೂ **ತ್ರಿಪಿಂಡೀ ಶ್ರಾದ್ಧವನ್ನು** ಮಾಡಬೇಕು. ಸಾಮಾನ್ಯವಾಗಿ ಮೇಲೆ ಬರೆದ ತೊಂದರೆಗಳು ಯಾರ ಜಾತಕದ ಚತುರ್ಥಸ್ಥಾನ ದೂಷಿತವಿರುತ್ತವೆಯೋ ಅವರಿಗೆ ತಾಗುತ್ತವೆ. ಚತುರ್ಥ ಸ್ಥಾನ ದೂಷಿತವೆಂದರೆ ಚತುರ್ಥದಲ್ಲಿ ಪಾಪ ಗ್ರಹ ಇಲ್ಲವೇ ಪಾಪ ಗ್ರಹಗಳ ದಾಸ್ಯತ್ವ ಚತುರ್ಥೇಶ,ಚಂದ್ರ, ಶುಕ್ರ, ಗುರು ಗಳು ದುರ್ಬಲರಿರುತ್ತಾರೆ.

4) **ಗಣಹೋಮ** : ಯಾವ ಜಾತಕನು ಕೊಂಡ ಮನೆಯಲ್ಲಿ [ಸ್ವಥಃ ಕಟ್ಟಿಸದೇ)ವಾಸಿಸುವನೋ ಅಥವಾ ಯಾವ ಜಾತಕನ ಚತುರ್ಥಸ್ಥಾನ ದೂಷಿತವಿರುವುದೋ ಅಂಥವರು ಪ್ರತಿವರುಷ ಗಣಹೋಮ ಮಾಡಿದಲ್ಲಿ ಗೃಹಸೌಖ್ಯ ಸಿಗುತ್ತದೆ. ಚತುರ್ಥಸ್ಥಾನ ದೂಷಿತವೆಂದರೇನು ಎಂಬುದನ್ನು ಹಿಂದಿನ ಪುಟದಲ್ಲಿ ವಿವರಿಸಲಾಗಿದೆ.

1) ಗೃಹವಾಸ್ತು ಶಾಂತಿ 2] ಉದಕಶಾಂತಿ 3] ನವಗ್ರಹ ಶಾಂತಿ 4] ನಾರಾಯಣಬಲೀ 5] ತ್ರಿಪಿಂಡೀಶ್ರಾದ್ಧ 6] ಗಣ ಹೋಮ ಈ ಆರುಪರಿಹಾರದ ಕ್ರಮಗಳಲ್ಲಿ ಯಾವುದಾದರೊಂದು ಪರಿಹಾರ ಕ್ರಮಗಳನ್ನು ಕೈಕೊಂಡಲ್ಲಿ ಖಂಡಿತವಾಗಿ ಗೃಹಶಾಂತಿ ಲಭಿಸುತ್ತದೆ.

# ಪಂಚಮ ದಳ

## ವೃತ್ತಿ ಪರಿಹಾರ

**ಪರಿಹಾರ ಜ್ಯೋತಿಷ್ಯದ ಐದನೇಯ ಅಧ್ಯಾಯದಲ್ಲಿ ವೃತ್ತಿ— ಪರಿಹಾರ ಅರ್ಥಾತ ಉದ್ಯೋಗ—ಪರಿಹಾರ** ದ ಬಗೆಗೆ ಪ್ರಸ್ತಾಪಿಸುತ್ತೇನೆ, ಏಕೆಂದರೆ ಯಾರೊಬ್ಬರ ಜಾತಕನ ವಿದ್ಯಾಘಟ್ಟ ಕೀರಿತೆಂದರೆ ಉದ್ಯೋಗದ ಶಿಕಾರಿಯಾಗುತ್ತಾನೆ. ಹಾಗೆ ನೋಡಿದರೆ ಪರಿಹಾರ ಜ್ಯೋತಿಷ್ಯದ ಈ ಗ್ರಂಥದಲ್ಲಿ ಶಿಕ್ಷಣ ಪರಿಹಾರದ ನಂತರ ವೃತ್ತಿ ಪರಿಹಾರ ನಾಲ್ಕನೇಯ ಅಧ್ಯಾಯವಾಗಿ ಬರೆಯಬೇಕಾಗಿತ್ತು. ಆದರೆ ಇತ್ತೀಚಿಗೆ ವಸತಿ ಸಮಸ್ಯೆ ಭೂತಾಕಾರವಾಗಿ ಬೆಳೆದಿದ್ದರಿಂದ ವಸತಿ ಸಮಸ್ಯೆ ಪರಿಹರಿಸಲು ಸರಕಾರ ಅನೇಕ ಯೋಜನೆ ಕೈಕೊಂಡಿದೆ ಅಲ್ಲದೆ ಅನೇಕಸಹಕಾರಿ ಗೃಹ ನಿರ್ಮಾಣ ಸೊಸೈಟಿಗಳು ತಲೆಯೆತ್ತಿವೆ ಇದೂ ಅಲ್ಲದೇ ಅನೇಕ ಅಪಾರ್ಟಮೆಂಟ ಕಟ್ಟಡಗಳು ಬೆಳೆಯಹತ್ತಿವೆ. ಅದಕ್ಕನುಗುಣವಾಗಿ ವಸತಿಗೆ ಸಂಬಂಧಿಸಿದ ಪ್ರಶ್ನೆಗಳು ಅಧಿಕವಾಗಿರುವುದರಿಂದ ಗೃಹಸೌಖ್ಯ ಪರಿಹಾರ ಅಧ್ಯಾಯವನ್ನು ನಾಲ್ಕನೇ ಅಧ್ಯಾಯವಾಗಿಯೂ **ವೃತ್ತಿಪರಿಹಾರ ಅರ್ಥಾತ ಉದ್ಯೋಗ—ಪರಿಹಾರ** ಐದನೇಯಅಧ್ಯಾಯವಾಗಿಯೂ ಬರೆಯುತ್ತಿರುವೆ.

ಜೀವನ ನಡೆಸಲು ಉದ್ಯೋಗವಂತೂ ಹಿಡಿಯಲೇಬೇಕು ಹಾಗಾದರೆ ಯಾವ ಉದ್ಯೋಗ ? ಉದ್ಯೋಗದಲ್ಲಿ ಮುಖ್ಯವಾಗಿ ಎರಡು ಪ್ರಕಾರಗಳು ಒಂದು ನೌಕರಿ ಇನ್ನೊಂದು ವೃತ್ತಿ ಅಂದರೆ ಸ್ವತಂತ್ರ ವೃತ್ತಿ ಇಬ್ಬರೂ ಉದ್ಯೋಗಿಗಳೇ ಒಬ್ಬರು ಪರತಂತ್ರ ಇನ್ನೊಬ್ಬರು ಸ್ವತಂತ್ರ, ನೌಕರೀ ಯೆಂದರೆ ತನ್ನ ದುಡಿಮೆ, ಕುಶಲತೆ, ಬುದ್ಧಿ, ಶಕ್ತಿಗಳನ್ನು ಮಾರಾಟಮಾಡಿ

ನಿರ್ದಿಷ್ಟ ವೇತನ ಪಡೆದು ಜೀವನ ಸಾಗಿಸುವುದು ವೃತ್ತಿಯೆಂದರೆ ಬಂಡವಾಳ ಹೂಡಿ ಕುಶಲತೆ–ಜಾಣ್ಮೆಯನ್ನು ತೊಡಗಿಸಿ, ಸಾಹಸ, ಅಪಾಯ [ರಿಸ್ಕ] ಕೈಕೊಂಡು ಸ್ವತಂತ್ರವಾಗಿ ಉದ್ಯೋಗ, ವ್ಯಾಪಾರ, ವೃತ್ತಿ, ಕೃಷಿ ಮೊದಲಾದವುಗಳನ್ನು ಕೈಕೊಳ್ಳುವಿಕೆ ಇಲ್ಲಿ ಒಂದು ವ್ಯತ್ಯಾಸವೆಂದರೆ ಒಬ್ಬರು ನೌಕರಿ ಮಾಡಿ ತಾವು ಹಾಗೂ ತಮ್ಮ ಸಮೀಪದ ಬಂಧುಬಳಗದವರನ್ನು ಸಲಹುವಿಕೆ ಇನ್ನೊಬ್ಬರು ತಾವು ತಮ್ಮ ಬಂಧುಬಳಗದವರನ್ನು ಸಲಹುವದರೊಂದಿಗೆ ಅನೇಕ ಪರಿವಾರದವರ ಉಪಜೀವನಕ್ಕೆ ಆಧಾರಸ್ತಂಭವಾಗಿರುತ್ತಾರೆ. ಆದರೆ ಸಮಸ್ಯೆಗಳು ಯಾರನ್ನು ಬಿಟ್ಟಿಲ್ಲ. ನೌಕರದಾರರಿಗೆ ತನ್ನ ನೌಕರಿಗೆ ಸಂಬಂಧಿಸಿದ ಪ್ರಶ್ನೆ–ಸಮಸ್ಯೆಗಳಿದ್ದರೆ ಸ್ವತಂತ್ರ ಉದ್ಯೋಗಸ್ಥರಿಗೆ, ವೃತ್ತಿಯವರಿಗೆ ಆ ವೃತ್ತಿಗೆ ಸಂಬಂಧಿಸಿದ ಸಮಸ್ಯೆಗಳಿರುತ್ತವೆ. ನೌಕರರ ವರ್ಗದವರ ಸಮಸ್ಯೆಗಳಿಗಿಂತ ಸ್ವತಂತ್ರ ಉದ್ಯೋಗಸ್ಥರ ಸಮಸ್ಯೆಗಳು ಅಧಿಕವಿರುತ್ತವೆ.

ರಾಜಾ ಕಾಲಸ್ಯಕಾರಣಂ ಎಂಬಂತೆ ಸರಕಾರದ ಧೋರಣೆಗಳು ವೃತ್ತಿಜೀವನದ ಮೇಲೆ ಸಂಗಜೀವನದ ಮೇಲೆ ಸಂಸ್ಥೆಗಳ ಮೇಲೆ ಸಾಕಷ್ಟು ಪರಿಣಾಮವನ್ನುಂಟು ಮಾಡುತ್ತವೆ. ಉದಾಹರಣೆಗೆ ಸ್ವಾತಂತ್ರ್ಯ ಬಂದಂದಿರಿಂದಲು ಅಂದರೆ 1947 ರಿಂದ 1977 ರವರೆಗಿನ ಸರಕಾರದ ರಾಷ್ಟ್ರೀಕೃತ ಧೋರಣೆಯಿಂದಾಗಿ ಅನೇಕರು ರಾಷ್ಟ್ರೀಕೃತ ಉದ್ಯಮಗಳ ಸರಕಾರಿನಿಗಮ ಬೋರ್ಡುಗಳು ಹೀಗೆ ಸರಕಾರಿ ನೌಕರಿ ಗಿಟ್ಟಿಸಲು ಪಡೆಯಲು ಪೈಪೋಟಿ ಪ್ರಾರಂಭವಾದವು. (ಈ ಸರಕಾರಿ ನೌಕರಿಯ ಮೋಹ ನಮ್ಮ ದೇಶದಲ್ಲಿ ಮಾತ್ರವಿದೆ) ಅದಕ್ಕನುಗುಣವಾಗಿ ನೌಕರಿಯ ಸಂಬಂಧಿಸಿದ ಸಮಸ್ಯೆಗಳು ಹೆಚ್ಚಾದವು. ಆ ಸಮಸ್ಯೆಗಳನ್ನು ಶಾಸ್ತ್ರೀಯವಾಗಿ ಹೇಗೆ ಪರಿಹರಿಸಬೇಕೆಂಬ ಉದ್ದೇಶದಿಂದ **ಉದ್ಯೋಗ ಜ್ಯೋತಿಷ್ಯ ಭಾಗ 1 ನೌಕರಿಯ ಮಾರ್ಗ–ದರ್ಶಿ** ಎಂಬ 292 ಪುಟಗಳ ಬೃಹತ್ ಗ್ರಂಥವನ್ನು ಪ್ರಕಟಿಸಲಾಯಿತು.

1969 ರಿಂದ ಸರಕಾರದ ಧೋರಣೆಗಳಲ್ಲಿ ಬದಲಾವಣೆಯಾಯಿತು. ಕೆಲ ಬ್ಯಾಂಕುಗಳನ್ನು ರಾಷ್ಟ್ರೀಕರಣಗೊಳಿಸಲಾಯಿತು. ಅಲ್ಲದೆ ಯಾರೊಬ್ಬರು

ಸ್ವತಂತ್ರ ಉದ್ಯೋಗ ಕೈಕೊಳ್ಳಲು ಸ್ವತಂತ್ರ ವೃತ್ತಿ, ಉದ್ಯಮಗಳನ್ನು ಸ್ಥಾಪಿಸಲು ಔದ್ಯಮಿಕ ಕ್ಷೇತ್ರಗಳೆಂದು ನಿವೇಶನ ಜಾಗೆಗಳನ್ನು ಮಂಜೂರ ಮಾಡಿದರು. ಬ್ಯಾಂಕಿನಿಂದ ಸಾಲ ಹಾಗೂ ಸರಕಾರದಿಂದ ಅನೇಕ ಸೌಲಭ್ಯಗಳನ್ನು ಕಲ್ಪಿಸಿದರು. ತನ್ಮೂಲಕ ರಾಷ್ಟ್ರದಲ್ಲಿ ಅನೇಕ ಸಣ್ಣ ಹಾಗೂ ಮಧ್ಯಮ ತರಗತಿಯ ಉದ್ಯಮಗಳು ಕೈಗಾರಿಕೆಗಳು ತಲೆಯೆತ್ತಿದವು. ಇಷ್ಟೇ ಅಲ್ಲಾ. ಔದ್ಯೋಗಿಕರಣ, ವೈಜ್ಞಾನೀಕರಣ, ತಾಂತ್ರೀಕರಣ ಹಾಗೂ ನಗರೀಕರಣಗಳ ಸಂಯುಕ್ತ ಫಲವಾಗಿ ಉದ್ಯಮ ಕೈಗಾರಿಕೆ ಕ್ಷೇತ್ರಗಳಲ್ಲಿ ಉದ್ಯೋಗಗಳ ಕ್ಷೇತ್ರದಲ್ಲಿ ಒಂದು ಕ್ರಾಂತಿಯೇ ಸಂಭವಿಸಿತು. ಬಂಡವಾಳ ಶಕ್ತಿಗೆ ಹೊಸ ಚಾಲನೆ ದೊರೆತಂತಾಯಿತು. ಇದೂ ಅಲ್ಲದೆ ವಿಜ್ಞಾನ ಬೆಳೆದಂತೆಲ್ಲ ವೃತ್ತಿಯಲ್ಲಿ ವಿಶೇಷ ತಜ್ಞತೆ [ಸ್ಪೇಶಲಾಯಿಜೇಶನ್] ಜೀವನದ ಒಂದು ಗುರಿಯಾಗತೊಡಗಿತು. ಈ ರೀತಿಯಾಗಿ ವೃತ್ತಿಕ್ಷೇತ್ರ ಕ್ಲಿಷ್ಟತೆಯು ಪರಮಾವಧಿ ಮುಟ್ಟಿದಾಗ ಪ್ರತಿಯೊಬ್ಬ ಭಾರತೀಯನಿಗೂ ಅವನ ವೃತ್ತಿಯು ಯಕ್ಷಪ್ರಶ್ನೆಯಾಗತೊಡಗಿತು. ನಾನು ಯಾವ ವೃತ್ತಿಗೆ ಅರ್ಹನು? ನನಗೆ ಯಾವ ವೃತ್ತಿಯಲ್ಲಿ ಶ್ರೇಯಸ್ಸಿದೆ ? ಯಾವ ವೃತ್ತಿಯಲ್ಲಿ ಯಶಸ್ಸು ಕೀರ್ತಿ, ಹಣ ಸಂಪಾದಿಸಬಲ್ಲೆ ? ಶ್ರೀಮಂತಿಕೆಯನ್ನು ಗಳಿಸಬಲ್ಲೆ ? ನನ್ನ ಅರ್ಹತೆಗೆ ಯೋಗ್ಯತೆಗೆ, ಸ್ವಭಾವಕ್ಕೆ. ಸಾಮರ್ಥ್ಯಕ್ಕೆ, ಶಿಕ್ಷಣಕ್ಕೆ ಯಾವ ವೃತ್ತಿ ಯೋಗ್ಯ? ಯಾವುದು ಅನುಕೂಲ ಮುಂತಾದ ಪ್ರಶ್ನೆಗಳಮಾಲಿಕೆಯು ಪ್ರತಿಯೊಬ್ಬರನ್ನು ಕಾಡಹತ್ತಿತು. ಅದಕ್ಕಾಗಿ ಅನೇಕರು ಜ್ಯೋತಿಷ್ಯದ ಸಲಹೆ ಕೇಳಹತ್ತಿದರು. ಅಪರ ಪ್ರಶ್ನೆ ಸಮಸ್ಯೆಗಳ ಪರಿಹಾರಕ್ಕಾಗಿ "**ಉದ್ಯೋಗ ಜ್ಯೋತಿಷ್ಯ ಭಾಗ 2 ವೃತ್ತಿಮಾರ್ಗದರ್ಶಿ**" ಎಂಬ 288 ಪುಟಗಳ ಬೃಹತ ಗ್ರಂಥ ರಚಿಸಬೇಕಾಯಿತು. ಈ ಗ್ರಂಥದಲ್ಲಿ ಸ್ವತಂತ್ರ ಉದ್ಯೋಗಸ್ಥರ, ವೃತ್ತಿಯವರ ಪರಿಹಾರೋಪಾಯಗಳನ್ನು ಸೂಚಿಸಲಾಗಿದೆ. ಆದರೆ ಈ ಪ್ರಶ್ನೆ ಸಮಸ್ಯೆಗಳ ಪರಿಹಾರ ಇಲ್ಲಿಗೆ ಮುಗಿಯಲಿಲ್ಲ. ಹಿಂದಿನ ಪುಟದಲ್ಲಿ ಹೇಳಿದಂತೆ ರಾಜ–ಕೆಲಸ್ಯ ಕಾರಣಂ ಅಂದರೆ ಸರಕಾರದ ಧೋರಣೆಗಳು ವ್ಯಕ್ತಿ ಜೀವನದ ಮೇಲೆ ಪರಿಣಾಮ ಬೀಳುತ್ತವೆ. ಅರ್ಥಾತ ಯಾರೊಬ್ಬ ವ್ಯಕ್ತಿಯು ಕೈಕೊಳ್ಳುವ ನೌಕರಿ, ಉದ್ಯೋಗ, ವೃತ್ತಿ, ಉದ್ಯಮಗಳಮೇಲೂ ಸರಕಾರದ ಧೋರಣೆಯ

ಪರಿಣಾಮವಾಗುತ್ತದೆ. ಸರಕಾರದ ಧೋರಣೆ ಬದಲಾವಣೆಗೆ ಅನೇಕ ಕಾರಣ ಗಳಿವೆ ಕೇವಲ ರಾಜಕೀಯ ಕಾರಣ ಆಡಳಿತದ ಕಾರಣವಷ್ಟೆ ಅಲ್ಲಾ ವಿದೇಶ ಗಳಲ್ಲಿಯ ಆಡಳಿತದ ಬದಲಾವಣೆಗಳು ಕೂಡ ನಮ್ಮ ರಾಷ್ಟ್ರದಧೋರಣೆಗಳಲ್ಲಿ ಬಲಾವಣೆಗಳಿಗೆ ಕಾರಣವಾಗುತ್ತವೆ. ಉದಾಹರಣೆಗೆ ಮನ್ನಿನ ಸೋವಿಯತ ಒಕ್ಕೂಟ ದೇಶ ಒಡೆದುದರ ಪರಿಣಾಮ ಆ ರಾಷ್ಟ್ರದಲ್ಲಿಯ ಕಮ್ಯುನಿಜಂ ಪತನದ ಪ್ರಭಾವ ಅನೇಕ ರಾಷ್ಟ್ರದ ಮೇಲೆ ಆಗಿರುವಂತೆ ನಮ್ಮ ರಾಷ್ಟ್ರದ ಮೇಲೂ ಆಗಿವೆ. ರಾಷ್ಟ್ರೀಕರಣ ಧೋರಣೆ ಸಿಥಿಲತೆಗೊಂಡಿದೆ. ಇಷ್ಟೇ ಅಲ್ಲಾ 1989 ರಿಂದ1994ರ ಈ ಅವಧಿಯಲ್ಲಿಯ ಸರಕಾರದ ಆರ್ಥಿಕ ಉದಾರೀ-ಕರಣಧೋರಣೆ ಗ್ಯಾಟ ಒಪ್ಪಂದ ಹಾಗೂ ಬಹುರಾಷ್ಟ್ರೀಯ ಕಂಪನಿಗಳು ನಮ್ಮ ದೇಶದಲ್ಲಿ ತಮ್ಮ ಉಧ್ಯಮಗಳನ್ನು ಕಂಪನಿಗಳನ್ನು ಸ್ಥಾಪಿಸಬೇಕೆಂಬ ಯೋಜನೆಯಿಂದಾಗಿ ಆಗುವ ಪರಿಣಾಮವು ಇಲ್ಲಿಯ ಕಾರಖಾನೆಗಳ ಮೇಲೂ ಹಾಗೂ ಅಲ್ಲಿ ಕೆಲಸ ಮಾಡುತ್ತಿರುವ ವ್ಯಕ್ತಿಗಳ ಮೇಲೂ ಉತ್ಪಾದನಾ ವಸ್ತುಗಳ ಧಾರಣೆಯಮಾಲೆಯೂ ಸಾಕಷ್ಟು ಪರಿಣಾಮವನ್ನುಂಟುಮಾಡುತ್ತದೆ. ತನಮೂಲಕ ಉಧ್ಭವಿಸುವ ಸಮಸ್ಯೆಗಳಿಗೂ ಉತ್ತರಿಸಬೇಕಾಗುತ್ತದೆ. ಹೀಗೆ ಕಾಲ ಕಾಲಕ್ಕೆ ಉಧ್ಭವಿಸುವ ನೌಕರಿ, ಸ್ವಂತಉದ್ಯೋಗ,ಪ್ರವೃತ್ತಿಗಳಿಗೆ ಸಂಬಂಧಿಸಿದ ಪ್ರಶ್ನೆ-ಸಮಸ್ಯೆಗಳಿಗೆ ವೃತ್ತಿಜ್ಯೋತಿಷ್ಯಗಳು ಉತ್ತರಕೊಡಬೇಕಾ ಗುತ್ತದೆ. ಆದುದರಿಂದ ಅವರ ಪ್ರಶ್ನೆ–ಸಮಸ್ಯೆಗಳು ಏನಿರುತ್ತವೆ ಎಂಬುದನ್ನು ಮೊದಲು ವಿವರಿಸಿ ಆ ಬಳಿಕ ಅವುಗಳಿಗೆ ಮುಂಜಾಗ್ರತೆ ಹಾಗೂ ಪರಿಹಾರದ ಕ್ರಮಗಳ ಬಗೆಗೆ ಪರಿಶೀಲಿಸೋಣ.

ಅನೇಕರು ಹೆಚ್ಚಾಗಿ ಕೇಳುವ ಪ್ರಶ್ನೆಗಳೆಂದರೆ ತಮಗೆ ನೌಕರಿ ಎಂದು ಸಿಗುತ್ತದೆ ? ಯಾವ ಖಾತೆಯಲ್ಲಿ ಪ್ರಯತ್ನಿಸಬೇಕು ? ಎಂದು ಖಾತೆಯ ಬಗೆಗೆ ಹಾಗೂ ನೌಕರಿ ದೊರೆಯುವ ಕಾಲ ಮಿತಿಯ ಬಗೆಗೆ ವಿಚಾರಿಸುತ್ತಾರೆ.

ಇನ್ನು ಕೆಲವರು ನಿರ್ದಿಷ್ಟಖಾತೆ, ನಿರ್ದಿಷ್ಟಹುದ್ದೆ, ನಿರ್ದಿಷ್ಟ ಸ್ಥಳ, ನಿರ್ದಿಷ್ಟ ಸಂಬಳ, ನಿರ್ದಿಷ್ಟ ಸೌಲಭ್ಯಗಳ ಬಗೆಗೆ ವಿಚಾರಿಸುತ್ತಾರೆ, ಮತ್ತೆ ಕೆಲವರು ಅವು ಮಾಡುತ್ತಿರುವ ಖಾತೆ, ಸಂಸ್ಥೆ ಕಾರಖಾನೆಗಳು ಬಿಟ್ಟು ಬೇರೆ

ಕಡೆಗೆ ನವಕರಿಸಿಗುವ ಯೋಗದ ಬಗೆಗೆ ವಿಚಾರಿಸುತ್ತಾರೆ. ಸರಕಾರದ ಧೊರಣೆಗಳು ಬದಲಾದ ಹಾಗೆ ನವಕರ ವರ್ಗದವರ ಸ್ವತಂತ್ರ ಉದ್ಯೋಗ ಸ್ಥರ ಪ್ರಶ್ನೆ ಸಮಸ್ಯೆಗಳು ಹೊಸದಾಗಿ ಹುಟ್ಟಿಕೊಳ್ಳುತ್ತವೆ. ಎಂಬುದಕ್ಕೆ ಎರಡು ಉದಾಹರಣೆಗೆಗಳು ಈ ಹಿಂದೆ ಯಾರೊಬ್ಬರ ಸರಕಾರಿ ನವಕರನು ತನ್ನ ಸೇವಾ ಆವಧಿ ಮುಗಿಯುವ ವರೆಗೆ ಅಂದರೆ 30 ವರುಷದ ನೌಕರಿ ಸಲ್ಲಿಸದ ಅವಧಿ ಇಲ್ಲವೆ 60ರ ವಯಸ್ಸಿಗೆ ನಿವೃತ್ತಿ ಆಗಬಹುದಾಗಿತ್ತು ಅದನ್ನು ತಗ್ಗಿಸಿ ೫೮ ವರುಷ ೫೫ ವಯಸ್ಸಿಗೆ ನಿವೃತ್ತಿ ಯಾಗಬಹುದಾಗಿದೆ. ಆದರೆ ಯಾರೊಬ್ಬ ನವಕರನು ತನ್ನ ಸೇವಾ ಅವದಿ 25 ವರುಷ ಆದ ಬಳಿಕ ಸ್ವಯಂ ನಿವತ್ತಿ ಆಗಲು ಅವಕಾಶ ಕಲ್ಪಿಸಲಾಗದೆ ಇತ್ತೀಚೆಗೆ ಅದನ್ನು 20 ವರುಷಕ್ಕೆ ತಗ್ಗಿಸಿದ್ದಾರೆ. ಹೀಗಾಗಿ 20 ವರುಷ ನೌಕರಿ ಮಾಡಿದ ನೌಕರವರ್ಗದವರು ಸ್ವಯಂ ನಿವೃತ್ತಿ ಹೊಂದಿ ನಿವೃತ್ತಿಯಿಂದ ಬಂದ ಪ್ರವಿಂಡೆಂಟಫಂಡ,ಗ್ರೆಜ್ಯುಟಿ ಗಳಿಂದ ಬೇರೆ ಸ್ವತಂತ್ರ ಉದ್ಯೋಗ ಮಾಡಿದರೆ ಹೇಗೆ, ಎಂಬ ಪ್ರಶ್ನೆಗಳನ್ನು ವಿಚಾರಿಸ ಹತ್ತಿದ್ದರೆ ಇದರಂತೆ ಯಾರೊಬ್ಬ ನೌಕರನು ನೌಕರಿಯಲ್ಲಿರು ವಾಗಲೇ ಮೃತಪಟ್ಟರೆ ಅನುಕಂಪದ ಆಧಾರದ ಮೇಲೆ ಅವರ ಮಕ್ಕಳಿಗೆ ಅಪರಯಾತೆ,ಸಂಸ್ಥೆ ಗಳಲ್ಲಿ ನೌಕರಿಕೊಡುವ ಧೋರಣೆ ಇದೆ. ಅದಕ್ಕೆ ಸಂಭಂಧಿ ಸಿದ ಪ್ರಶ್ನೆಗಳು ಹೊಸದಾಗಿ ಹುಟ್ಟಿಕೊಂಡಿವೆ. ಅನುಕಂಪದ ಆಧಾರದಮೇಲೆ ಈ ಮಗನಿಗೆ ಆ ಮಗಳಿಗೆ ನೌಕರಿಯ ಬಗೆಗೆ ಪ್ರಯತ್ನಿಸಬೇಕು ಯಾರು ನಮ್ಮನ್ನು ಕಾಪಾಡುವರು ಎಂಬ ಪ್ರಶ್ನೆ ವಿಚಾರಿಸಹತ್ತಿದ್ದಾರೆ. ಇನ್ನು ಕೆಲ ವರು ನಿವೃತ್ತಿ ವೇತನ ಎಂದು ಬರುತ್ತದೆ ಬಾಕಿ ಎಂದು ಬರುತ್ತದೆ. ಹೊಸ ದಾದ ಪ್ರಶ್ನೆಗಳಿಗೂ ಉತ್ತರಿಸಬೇಕಾಗಿದೆ. ಮತ್ತೆಕೆಲವರು ಬದಲಿ ಬಗೆಗೆ ವಿಚಾರಿಸುತ್ತಾರೆ, ಮೇಲೆ ಬರೆದ ಈ ಕೆಲ ಪ್ರಶ್ನೆ ಸಮಸ್ಯೆಗಳಿಗೆ ನಾವು ಈಗಾಗಲೇ ಬರೆದು ಪ್ರಕಟಿಸಿದ **ಉದ್ಯೋಗ ಜ್ಯೋತಿಷ್ಯದ ಭಾಗ 1 ನೌಕರಿಯ ಮಾರ್ಗದರ್ಶಿ** ಎಂಬ ಗ್ರಂಥದಲ್ಲಿ ವಿವರ ವಿವರವಾಗಿ ವಿವರಿಸ ಲಾಗಿದ್ದರಿಂದ ಈ ಗ್ರಂಥದ ಈ ಅಧ್ಯಾಯದಲ್ಲಿ ಕೆಲ ಪ್ರಶ್ನೆಗಳಿಗೆ ಮಾತ್ರ ಉತ್ತರಿಸಲಾಗಿದೆ.

ಇನ್ನು ಕೆಲವರು ನೌಕರಿ ಮಾಡಬೇಕೋ ? ಸ್ವತಂತ್ರ ಉದ್ಯೋಗ,

ವೃತ್ತಿ ಕೈಕೊಳ್ಳಬೇಕೊ ? ಎಂದು ವಿಚಾರಿಸಿದರೆ ಮತ್ತೆ ಕೆಲವರು ಆ ವೃತ್ತಿ ಹೇಗೆ ಈ ವೃತ್ತಿ ಹೇಗೆ ಎಂದು ವಿವಿಧ ಸ್ವತಂತ್ರ ಉದ್ಯೋಗ, ಉದ್ಯಮ, ವೃತ್ತಿಗಳ ಬಗೆಗೆ ವಿಚಾರಿಸುತ್ತಾರೆ. ಇನ್ನು ಕೆಲವರು ಆ ವ್ಯಾಪಾರ ಹೇಗೆ ಈ ವ್ಯಾಪಾರ ಹೇಗೆ ಕೃಷಿ ವೃತ್ತಿ ಕೈಕೊಂಡರೆ ಹೇಗೆ ? ಆ ಅಂಗಡಿ ಹೇಗೆ ? ಈ ವಸ್ತುಗಳ ಸರಕುಗಳ ವ್ಯಾಪಾರ ಹೇಗೆ ಎಂದು ವಿಚಾರಿಸುತ್ತಾರೆ ಅಲ್ಲದೆ ಆ ಬೆಳೆ ಹೇಗಾಗುತ್ತದೆ ಈ ಬೆಳೆ ಹೇಗಾಗುತ್ತದೆ ಈ ಬೆಳೆಗೆ ಧಾರಣೆ ಹೇಗೆ? ತೇಜಿ ಮಂದಿಗಳ ಬಗೆಗೂವಿಚಾರಿಸುತ್ತಾರೆ. ಇದಲ್ಲದೇ ಕಾರ್ಮಿಕರ ಸಂಬಂಧಿಸಿದಪ್ರಶ್ನೆ, ಜಾಗೆಯ ಪ್ರಶ್ನೆ, ಯಂತ್ರ ಮಶಿನರಿಗಳ ಪ್ರಶ್ನೆ ಬಂಡವಾಳದ ಪ್ರಶ್ನೆ, ಸರಕಾರದ ನಿರ್ಬಂಧನೆಯ ಪ್ರಶ್ನೆ, ಪರ್ಮಿಟ-ಲೈಸೆನ್ಸಗಳ ಪ್ರಶ್ನೆ ಹಣಕಾಸು ಒದಗಿಸುವ ಸಂಸ್ಥೆಗಳ ಪ್ರಶ್ನೆ ಕಚ್ಚಾ ಸಾಮಗ್ರಿಗಳ ಸಮಸ್ಯೆ, ವ್ಯಾಜ್ಯದ ಪ್ರಶ್ನೆ, ಉತ್ಪಾದನಾ ಸಮಸ್ಯೆ, ಮಾರಾಟದ ಸಮಸ್ಯೆ, ಪಾಲುಗಾರರ ಸಮಸ್ಯೆ, ಕಳವು ತುಡುಗುಗಳಪ್ರಶ್ನೆ, ವಿವಿಧಕರಗಳಿಗೆಸಂಬಂಧಿಸಿದ ಪ್ರಶ್ನೆ ಹೀಗೆಲ್ಲ ಸ್ವತಂತ್ರ ಉದ್ಯೋಗಸ್ಥರಿಗೂ ವೃತ್ತಿಯವರಿಗೂ ಬರುವ ಈ ಎಲ್ಲ ಪ್ರಶ್ನೆ ಸಮಸ್ಯೆಗಳಿಗೆ ಈಗ ನಾವು ಈಗಾಗಲೆ ಬರೆದು ಪ್ರಕಟಿಸಿದ **ಉದ್ಯೋಗ ಜ್ಯೋತಿಷ್ಯ ಭಾಗ 2 ವೃತ್ತಿ ಮಾರ್ಗದರ್ಶಿ** ಎಂಬಗ್ರಂಥದಲ್ಲಿ ವಿವರಿಸಲಾಗಿದ್ದು ಈ ಅಧ್ಯಾಯದಲ್ಲಿ ಇಲ್ಲಿ ವಿವರಿಸುವುದು ಅನಗತ್ಯ.

ಈ ಹಿಂದಿನ ಪುಟದಲ್ಲಿ ವಿವರಿಸಿದಂತೆ ಸರಕಾರದ ಧೋರಣೆಗಳು ವ್ಯಕ್ತಿ ಜೀವನದ ಮೇಲೆ ಸಂಸ್ಥೆಗಳ ಮೇಲೆ ಪರಿಣಾಮವಾಗುತ್ತದೆ. ಹೇಗೆ ಎಂಬುದನ್ನು ಕೆಲ ಜನರು ಪ್ರಶ್ನಿಸುವ ಪ್ರಶ್ನೆಗಳನ್ನು ಓದಿದರೆ ಗೊತ್ತಾಗುತ್ತದೆ. ಸರಕಾರದ ಮಿಸಲು ಧೋರಣೆಯಿಂದಾಗಿ ಭಾರತದಲ್ಲಿಯ ಬುದ್ಧಿವಂತರುಪ್ರತಿಭಾವಂತರುವಿಶಿಷ್ಟಕ್ಷೇತ್ರದಲ್ಲಿಯ ಪರಿಣಿತರು, ತಂತ್ರಜ್ಞರು ಇಂಜನೀಯರರು, ವೈದ್ಯರು ಶಿಕ್ಷಣತಜ್ಞರು ಮೊದಲಾದವರು ವಿದೇಶಗಳಿಗೆ ನೌಕರಿ ಮಾಡಲು ಸ್ವತಂತ್ರ ಉದ್ಯೋಗ ಮಾಡಲು ಪ್ರಶ್ನೆಗಳನ್ನು ಕೇಳುತ್ತಾರೆ ಪ್ರತಿಭಾ ಪಲಾಯನವಾಗಹತ್ತಿದೆ. ಕೆಲವರು ವಿದೇಶ ಯೋಗವಿದೆಯೋ ಹೇಗೆ ? ಎಂದು ಮೋಘಂ ಕೇಳಿದರೆ ಮತ್ತೆ ಕೆಲವರು ಈ ದೇಶಕ್ಕೆ ಹೋದರೆ ಹೇಗೆ? ಎಂದು ವಿವಿಧ ವಿದೇಶಗಳ ಬಗೆಗೆವಿಚಾರಿಸುತ್ತಾರೆ ಹೆಚ್ಚಾಗಿ

ಯುರೋಪಿಯನ ದೇಶಗಳ ಬಗೆಗೆ ಆಫ್ರಿಕಾ ದೇಶಗಳ ಬಗೆಗೆ ಕೆನಡಾ ಅಮೇರಿಕಾ ದೇಶದ ಬಗೆಗೂ ಅರಬ(ಗಲ್ಫ)ದೇಶಗಳ ಬಗೆಗೆ ವಿಚಾರಿಸುವುದೇ ಹೆಚ್ಚು ಇತ್ತೀಚೆಗೆ ಇಲ್ಲಿಯ ಎಸ್. ಟಿ.ಟಿ.ಎಫ್. ಆದ ನಂತರ ಆಸ್ಟ್ರೇಲಿಯಾ ಜರ್ಮನಿ ನ್ಯೂಜಿಲ್ಯಾಂಡ ದೇಶಕ್ಕೆ ಹೋದರೆ ಹೇಗೆ ಎಂದು ವಿಚಾರಿಸುತ್ತಾರೆ.

ಈ ಹಿಂದೆ ಭಾರತದಲ್ಲಿಯ ಕಂಪನಿ, ಕಾರಖಾನೆ, ಗಿರಣಿಗಳಲ್ಲಿ, ಕೆಲಸ ಮಾಡುತ್ತಿರುವ ವಿವಿಧ ನೌಕರ ವರ್ಗದವರಿಗೆ ನಿರ್ದಿಷ್ಟ ಸಂಬಳಕ್ಕಿಂತ ಹೆಚ್ಚು ಪಡೆಯುವ ಅವಕಾಶವಿದ್ದಿಲ್ಲ ಅದಕ್ಕಾಗಿ ಆಯಾ ಕಂಪನಿಯ ಆಡಳಿತಗಾರರು ಸರಕಾರ ಗೊತ್ತುಮಾಡಿದ ಸಂಬಳದ ಮಿತಿಗೆ ಸಂಬಳ ನಿರ್ಧರಿಸಿ ಉಳಿದ ಅನೇಕ ಸೌಲಭ್ಯಗಳನ್ನು ತನ್ನ ನವಕರಿಗೆ ಕೊಡುವ ಪರಿಪಾಠವಿತ್ತು ಆದರೆ ಇತ್ತೀಚೆಗೆ ಸರಕಾರ ತನ್ನ ಧೋರಣೆಗೆ ಬದಲಾಯಿಸಿದ್ದರಿಂದ ಇಲ್ಲಿ ಕಂಪನಿ ಕಾರಖಾನೆ ಯಲ್ಲಿ ಕೆಲಸಮಾಡುತ್ತಿರುವ ನೌಕರ ವರ್ಗದವರಿಗೆ ಹೆಚ್ಚಿನ ಸಂಬಳ ದೊರೆ ಯುವುದರಿಂದ ವಿದೇಶದಲ್ಲಿ ಕೆಲಸ ಮಾಡುತ್ತಿರುವ ವಿವಿಧ ಕ್ಷೇತ್ರದಲ್ಲಿಯ ಪ್ರತಿಭಾವಂತರು ನಮ್ಮ ದೇಶದಲ್ಲಿಯ ನೌಕರೀ ಮಾಡಲು ಸಜ್ಜಾಗಿದ್ದರೆ. ಅದಕ್ಕಾಗಿ ಭಾರತಕ್ಕೆ ಬಂದರೆ ಹೇಗೆ ಎಂದು ಪ್ರಶ್ನಿಸುತ್ತಿದ್ದಾರೆ. ಇದು ಅಲ್ಲದೇ ಕೆಲ ವಿದೇಶದಲ್ಲಿ ಕೆಲಸ ಮಾಡುತ್ತಿರುವ ಅನಿವಾಸಿ ಭಾರತೀಯರು ಪುನಃ ಇಲ್ಲಿಗೆ ಬಂದು ಉದ್ಯಮೆ ಪ್ರಾರಂಭಿಸಿದರೆ ಹೇಗೆ ಎಂದು ವಿಚಾರಿಸು ತ್ತಿದ್ದಾರೆ.

ಹೀಗೆ ನೌಕರರಿಗೆ ಸಂಬಂಧಿಸಿದ ವಿಷಯವಾಗಿಯು ವ್ಯಾಪಾರ ಉದ್ಯಮ, ಕೃಷಿ ಪಂಚಿಕೆದಾರಿಕೆ ಮೊದಲಾದ ಸ್ವತಂತ್ರ ಉದ್ಯೋಗಕ್ಕೆ ಸಂಬಂಧಿಸಿದ ವಿಷಯವಾಗಿಯೂ ವಿಚಾರಿಸುವ ಎಲ್ಲ ಪ್ರಶ್ನೆ-ಸಮಸ್ಯೆಗಳಿಗೆಲ್ಲ ವೃತ್ತಿ ಜ್ಯೋತಿಷಿಗಳು ಉತ್ತರಿಸಬೇಕಾಗುತದ್ದೆ. ಈ ಎಲ್ಲ ಪ್ರಶ್ನೆ ಸಮಸ್ಯೆ ಗಳಿಗೆ ಹೇಗೆ ಉತ್ತರಿಸಬೇಕೆಂಬುದನ್ನು ಕುರಿತು ನಾವು ಈಗಾಗಲೇ ಬರೆದು ಪ್ರಕಟಿಸಿದ ಎರಡು ಬೃಹತ್‌ಗ್ರಂಥಗಳಾದ **"ಉದ್ಯೋಗ ಜ್ಯೋತಿಷ್ಯ ಭಾಗ 1 ನೌಕರೀಯ ಮಾರ್ಗದರ್ಶಿ"** ಎಂಬ ಗ್ರಂಥದಲ್ಲಿ ಯಾವ

ಜಾತಕನಿಗೆ ಯಾವ ಖಾತೆಯಲ್ಲಿ, ಯಾವ ಸಂಸ್ಥೆಯಲ್ಲಿ. ಯಾವ ನಿಗಮ-ಬೋರ್ಡುಗಳಲ್ಲಿ, ಯಾವ ಹುದ್ದೆಯಲ್ಲಿ, ನೌಕರಿ ಸಿಗುತ್ತದೆ. ಅರ್ಥಾತ ನೌಕರಿ ಹತ್ತುವ ಕಾಲ, ಬದಲಿ ಬಡತಿ. ರಜೆ ನೌಕರಿ ಕಾಯಂ ಆಗುವಿಕೆ ಸೇವಾ ಅವಧಿ ವಿಸ್ತರಣೆ ಮೇಲಾಧಿಕಾರಿಗಳ ಕೃಪಾ ಅವಕೃಪ ಮೊದಲಾದ ನೌಕರಿಗೆ ಸಂಬಂಧಿಸಿದ ಎಲ್ಲ ವಿಷಯಗಳನ್ನು ಸುಧೀರ್ಘವಾಗಿ ಮೇಲಕಂಡ ಗ್ರಂಥದಲ್ಲಿ ವಿಶ್ಲೇಷಿಸಲಾಗಿದೆ. ಇದರಂತೆ **"ಉದ್ಯೋಗ ಜ್ಯೋತಿಷ್ಯ ಭಾಗ 2 ವೃತ್ತಿ ಮಾರ್ಗದರ್ಶಿ"** ಎಂಬ ಎರಡನೇಯ ಗ್ರಂಥದಲ್ಲಿ ಯಾವ ಜಾತಕನು ಯಾವ ಪ್ರಕಾರದ ವ್ಯಾಪಾರ, ಕೃಷಿ, ಉದ್ದಿಮೆ, ಗುತ್ತಿಗೆ ವೃತ್ತಿ ಪಂಟಿಕೆದಾರಿಕೆ ವೃತ್ತಿ, ಬುದ್ಧಿಜೀವಿಗಳ ವೃತ್ತಿ ಕಲಾಕಾರ ಹಾಗೂ ಕುಶಲಕರ್ಮಿಗಳ ವೃತ್ತಿ, ಮಶಿನರೀ ಸಾಮಗ್ರಿ ಹಾಗೂ ರಿಪೇರಿ ವೃತ್ತಿ ಮಾಲಕತ್ವ ವೃತ್ತಿ ಮೊದಲಾದ ಎಲ್ಲ ಪ್ರಕಾರದ ವೃತ್ತಿ ಅಲ್ಲದೆ ಸ್ವತಂತ್ರ ಉದ್ಯೋಗ ವೃತ್ತಿಗೆ ಸಂಬಂಧಿಸಿದ ಕಾರ್ಮಿಕ ಸಮಸ್ಯೆ, ಬಂಡವಾಳದ ಸಮಸ್ಯೆ, ಜಾಗೆಯಸಮಸ್ಯೆ ಬಂಡವಾಳ ಒದಗಿಸುವ ಸಂಸ್ಥೆಗಳ ಸಮಸ್ಯೆ ಸರಕಾರದ ಪರ್ಮಿಟ್ಟು ಲೈಸೆನ್ಸ ಮೊದಲಾದ ನಿರ್ಬಂಧನೆಗಳ ಸಮಸ್ಯೆ ಉತ್ಪಾದನಾ ಸಮಸ್ಯೆ, ಪಾಲುಗಾರರ ಸಮಸ್ಯೆ, ಕಚ್ಚಾ ಸಾಮಗ್ರಿ ವಸ್ತುಗಳ ಸಮಸ್ಯೆ ಮಾರಾಟದ ಸಮಸ್ಯೆ, ಕಳವು ತುಡುಗು, ಅಪಘಾತಾದಿಗಳ ಸಮಸ್ಯೆ ಹೀಗೆ ಎಲ್ಲ ಪ್ರಕಾರದ ವ್ಯಾಪಾರ ಉದ್ಯೋಗ ವೃತ್ತಿಗೆ ಸಂಬಂಧಿಸಿದ ಎಲ್ಲ ಪ್ರಶ್ನೆ ಸಮಸ್ಯೆಗಳ ಸುಧೀರ್ಘವಾಗಿ ಆ ಗ್ರಂಥದಲ್ಲಿ ವಿಶ್ಲೇಷಿಸಲಾಗಿದೆ. ಪ್ರಸ್ತುತಃ ಈ ಗ್ರಂಥದ ಈ ಅಧ್ಯಾಯದಲ್ಲಿ ನೌಕರೀ ಹಾಗೂ ಸ್ವತಂತ್ರ ಉದ್ಯೋಗ ವೃತ್ತಿಗಳ ಬಗೆಗೆ ಮುಂಜಾಗ್ರತೆ ಹಾಗೂ ಪರಿಹಾರದ ದೃಷ್ಟಿಯಿಂದ ಮಾತ್ರ ಇಲ್ಲಿ ವಿವರಿಸಲಾಗಿದೆ.

**1) ನೌಕರಿ, ಸ್ವತಂತ್ರ ಉದ್ಯೋಗ, ವೃತ್ತಿಯ ವಿಷಯವಾಗಿ ಮುಂಜಾಗ್ರತ ಕ್ರಮಗಳು** ; ಯಾರೊಬ್ಬ ಜಾತಕನು ನೌಕರಿ; ಸ್ವತಂತ್ರ ಉದ್ಯೋಗ ವೃತ್ತಿಯ ವಿಷಯವಾಗಿ ಯಾವ ಯಾವ ಮುಂಜಾಗ್ರತೆ ಕ್ರಮಗಳನ್ನು ಕೈಕೊಳ್ಳಬೇಕು ಎಂಬುದರಪೂರ್ವದಲ್ಲಿ ಮೊದಲು ಅವರ ಅವರ ಜಾತಕವನ್ನು ಸೂಕ್ಷ್ಮವಾಗಿ ಪರಿಶೀಲಿಸಬೇಕು ಜಾತಕದ ಲಗ್ನ ಸರಿಯಾಗಿದೆಯೋ

ಹೇಗೆ ಅಥವಾ ಸಂಧಿಗ್ದ ಲಗ್ನವಿದೆಯೋ ಹೇಗೆ ? ಎಲ್ಲ ಗ್ರಹಗಳು ಎಷ್ಟೇಷ್ಟು ಅಂಶಗಳಿಂದ ಯಾವ ಯಾವ ರಾಶಿಯಲ್ಲಿರುತ್ತವೆ ಎಂಬುವದನ್ನು ಖಚಿತಪಡಿಸಿ ಕೊಳ್ಳಬೇಕು. ಅದರಲ್ಲಿ ಯಾವುದೊಂದು ಗ್ರಹಗಳ ಯುತಿ ಯೋಗವಾಗಲಿ ಪ್ರತಿಯೋಗವಾಗಲಿ ದೃಷ್ಟಿಯೋಗವಾಗಲೀ ಇರುವಾಗ ಅಂಶಾತ್ಮಕ ವಾಗಿ ಹೇಗಿದೆ ಎಂಬುದು ಬಹಳ ಮುಖ್ಯವಿದೆ. ಯಾವುದೇ ಎರಡು ಗ್ರಹಗಳ ಯುತಿಯೋಗ ಪ್ರತಿಯೋಗವಿದ್ದಾಗ ಯಾವುದೊಂದು ಗ್ರಹವು ಆ ರಾಶಿಯಲ್ಲಿ 29 ಅಂಶ ಮತ್ತೊಂದು ಗ್ರಹ 1–2 ಅಂಶಗಳಿದ್ದರೆ ಅದು ಯುತಿಯೋಗವಾಗದೇ ಗ್ರಹಯೋಗವಾಗುತ್ತದೆ. ಹೀಗೆ ಆಯಾ ಗ್ರಹ ಗಳ ಯುತಿಯೋಗ ಪ್ರತಿಯೋಗ ದೃಷ್ಟಿಯೋಗದ ವಿಷಯವಾಗಿ ಆಯಾ ಗ್ರಹಗಳ ಅಂಶವನ್ನು ನೋಡಬೇಕು ಎರಡನೇದಾಗಿ ಯಾವುದೊಂದು ಜಾತಕವನ್ನು ಪರಿಶೀಲಿಸುವಾಗ ಈ ಜಾತಕ ನೌಕರಿಗೆ ಯೋಗ್ಯವೋ ಅಥವಾ ಸ್ವತಂತ್ರ ಉದ್ಯೋಗ, ವೃತ್ತಿಯುಜಾತಕವಿದೆಯೋ ಹೇಗೆ ಎಂಬುದನ್ನು ತಿಳಿಯಲು ನಾವು ಬರೆದು ಪ್ರಕಟಿಸಿದ ಉದ್ಯೋಗ ಜ್ಯೋತಿಷ್ಯ ಭಾಗ 1 ನೌಕರೀಯ ಮಾರ್ಗದರ್ಶಿ ಎಂಬ ಗ್ರಂಥದ 1ನೇ ಪುಟದಿಂದ 72ನೇ ಪುಟದ ವರೆಗೆ ಹಾಗೂ ಉದ್ಯೋಗ ಜ್ಯೋತಿಷ್ಯ ಭಾಗ 2 ವೃತ್ತಿ ಮಾರ್ಗದರ್ಶಿ ಎಂಬ ಗ್ರಂಥದ 1ನೇ ಪುಟದಿಂದ 10ನೇ ಪುಟದವರೆಗೆ ವಿವರವಿವರವಾಗಿ ವಿವರಿಸಲಾಗಿದ್ದು ಈ ಎರಡು ಗ್ರಂಥಗಳನ್ನು ಓದಿದಲ್ಲಿ ನಮ್ಮ ಮಾತಿನ ಸತ್ಯಾಂಶ ಕಂಡುಬರುತ್ತದೆ. ಇನ್ನು ನೌಕರೀ ಹಾಗೂ ಸ್ವತಂತ್ರ ಉದ್ಯೋಗ ವೃತ್ತಿಯ ವಿಷಯವಾಗಿ ಯಾವ ಯಾವ ಮುಂಜಾಗ್ರತೆ ಕ್ರಮಗಳನ್ನು ಕೈಕೊಳ್ಳಬೇಕೆಂಬುದನ್ನು ಈ ಕೆಳಗಿನಂತೆ ಬರೆಯಲಾಗಿದೆ.

1] ಯಾರ ಜಾತಕದಲ್ಲಿ ನೌಕರಿಯೋಗವಿರುವುದಿಲ್ಲವೋ ಅಂಥ ಜಾತ ಕನು ನೌಕರೀ ಬಗೆಗೆ ಪ್ರಯತ್ನಿಸದೇ ಸ್ವತಂತ್ರ ಉದ್ಯೋಗ, ಕೈಕೊಳ್ಳಬೇಕು. ಅದರ ಸಲುವಾಗಿ ಅಯುಷ್ಯದ ಉದ್ದಕ್ಕೂ ಪ್ರಯೋಗ ಮಾಡಿ ವ್ಯರ್ಥ ಶ್ರಮ, ಹಣ, ಕಾಲಗಳ ಅಪವ್ಯಯ ಮಾಡಕೂಡದು ನೌಕರಿಯೋಗವಿಲ್ಲ. ಇದನ್ನು ರಬ್ದ ಸಹ ಅರ್ಥಮಾಡಬಾರದು. ನೌಕರಿಯೋಗದ ಜಾತಕ ಇರುವುದಿಲ್ಲವೆಂದರೆ ನೌಕರಿ ಸಿಗುವುದು ಕಠಿಣಬಹಳ ಪ್ರಯತ್ನಿಸಬೇಕಾಗುತ್ತದೆ

ತ್ತದೆ. ಒಂದು ವೇಳೆ ಯಾವುದೊಂದು ಖಾತೆ, ಸಂಸ್ಥೆ ನಿಗಮ ಬ್ಯಾಂಕು ಗಳಲ್ಲಿ ನೌಕರಿ ದೊರೆತರೂ ಸ್ಥಿರವಾಗಿ ಆ ಖಾತೆ ಸಂಸ್ಥೆಗಳಲ್ಲಿ ಮುಂದುವರೆ ಯಲಾರರು ಮೇಲಿಂದ ಮೇಲೆ ಖಾತೆ, ಸಂಸ್ಥೆ, ಬೋರ್ಡ್, ಕಾರಖಾನೆಗಳ ಬದಲಾವಣೆ ಆಗುತ್ತವೆ ಅಥವಾ ಜಾತಕನೇ ರಾಜೀನಾಮೆ ಕೊಡಬಹುದು ಅಥವಾ ಖಾತೆಗಳ ವರಿಷ್ಟರೇ ನೌಕರಿಯಿಂದ ತೆಗೆಯಬಹುದು ಅಥವಾ ಮೇಲಾಧಿಕಾರಿಗಳ ಕಿರುಕುಳ ಉಪದ್ರವ ಬದಲಿ ಹಿಂಬಡತಿ ಮೊದಲಾದ ಅಶುಭ ಘಟನೆಗಳು ಜರುಗಬಹುದು ಅಥವಾ ಸರಿಯಾಗಿ ನಿವೃತ್ತಿ ಆಗಲಾ ರರುಹಾಗೂ ನಿವೃತ್ತಿಯ ಸೌಲಭ್ಯಗಳನ್ನು ಪಡೆಯಲು ಬಹಳ ಶ್ರಮಿಸಬೇಕಾ ಗುತ್ತದೆ. ಆದಾಗ್ಯೂ ಸಕಾಲದಲ್ಲಿ ದೊರೆಯಲಾರದು. ಹೀಗೆ ಅರ್ಥ ವಿವರಣೆ ಮಾಡಬೇಕು ನೌಕರಿಯ ಜಾತಕ ಯಾವುದೆಂಬುವನ್ನು ನಮ್ಮ ಉದ್ಯೋಗ ಜ್ಯೋತಿಷ್ಯ ಭಾಗ 2 ವೃತ್ತಿಮಾರ್ಗದರ್ಶಿ ಎಂಬ ಗ್ರಂಥದಲ್ಲಿ ವಿವರಿಲಾಗಿದ್ದರೂ ಸ್ಥೂಲವಾಗಿ ಈ ಕೆಳಗಿನಂತೆ ಯೋಗವಿರುವ ಜಾತಕರು.

1) ಶನಿ–ಮಂಗಳ, ಶನಿ–ಚಂದ್ರ, ಶನಿ–ರವಿ ಇವರ ಯುತಿಯೋಗ ಪ್ರತಿಯೋಗವು ಲಗ್ನ, ಚತುರ್ಥ, ದಶಮ ಭಾಗ್ಯ ಪಂಚಮ, ಸಪ್ತಮ ಈ ಸ್ಥಾನಗಳಲ್ಲಿ ಆಗುತ್ತಿದ್ದರೆ

2) ಶನಿ ದೃಷ್ಟಿತ ರವಿ ಚಂದ್ರರಿದ್ದು ಲಗ್ನೇಶ, ಚತುರ್ಥೇಶ ಭಾಗ್ನೇಶ ಬಲಾಢ್ಯರಿದ್ದರೆ.

3) ಅನೇಕ ಗ್ರಹಗಳು ಪುರುಷ ರಾಶಿಯಲ್ಲಿದ್ದಾರೆ ಅದರಲ್ಲಿಯೂ ಲಗ್ನೇಶ, ಚತುರ್ಥೆಶ ಹಾಗೂ ಚಂದ್ರ ಪುರುಷ ರಾಶಿಯಲ್ಲಿದ್ದ ಜಾತಕನು ಯಾವುದೊಂದು ನೌಕರಿಯಲ್ಲಿ ಸ್ಥಿರವಾಗಿ ನಿಲ್ಲಲಾರ

4) ಅನೇಕ ಗ್ರಹಗಳು ಉಚ್ಚರಾಶಿ ಇಲ್ಲದೆ ಸ್ವಗ್ರಹದಲ್ಲಿದ್ದ ಜಾತಕನು ಯಾವುದೊಂದು ನೌಕರಿಯಲ್ಲಿ ಸ್ಥಿರವಾಗಿ ನಿಲ್ಲಲಾರರು

5) ವಿಭಿನ್ನ ಲಗ್ನಗಳಿರುವ ಯೋಗಕಾರಕ ಗ್ರಹಗಳು ಬಲಾಢ್ಯವಿದ್ದು ಚಂದ್ರ ಹಾಗೂ ಲಗ್ನೇಶ ಬಲಾಢ್ಯರಿದ್ದ ಜಾತಕನು ಯಾವುದೊಂದು ನೌಕರಿ ಯಲ್ಲಿ ಸ್ಥಿರವಾಗಿ ನಿಲ್ಲಲಾರರು.

6) ರವಿ, ಗುರು, ಮಂಗಳ ಈ ಮೂರು ಗ್ರಹಗಳು ಬಲಾಢ್ಯವಿದ್ದ ಜಾತಕರು ಯಾವುದೊಂದು ಖಾತೆ ಸಂಸ್ಥೆಯಲ್ಲಿ ಅಧಿಕಾರಿ ಸ್ಥಾನವಿದ್ದರೆ ಮಾತ್ರ ನೌಕರಿಯಲ್ಲಿ ಮುಂದುವರೆಯುವರು ಇಲ್ಲದಿದ್ದರೆ ನೌಕರಿಯಲ್ಲಿ ಸ್ಥಿರವಾಗಿ ನಿಲ್ಲಲಾರರು

7) ಮೇಷ, ಮಿಥುನ, ಸಿಂಹ, ವೃಶ್ಚಿಕ, ಧನು, ಮೀನ ಈ ಯಾವುದೊಂದು ಲಗ್ನದ ಲಗ್ನೇಶ ಬಲಾಢ್ಯನಿದ್ದು ಚಂದ್ರನು ಪುರುಷ ರಾಶಿಯಲ್ಲಿದ್ದ ಜಾತಕರು ಅಧಿಕಾರವಿದ್ದರೆ ಮಾತ್ರ ನೌಕರಿ ಮಾಡುವರು ಇಲ್ಲದಿದ್ದರೆ ಯಾವುದೇ ನೌಕರಿಯಲ್ಲಿ ಸ್ಥಿರವಾಗಿ ನಿಲ್ಲಲಾರ

ಹೀಗೆ ಮೇಲೆ ಬರೆದ ಏಳು ಸಂಗತಿಗಳು ಪ್ಪೂರಕವಿದ್ದ ಜಾತಕನ ಯಾವುದೊಂದು ಸ್ವತಂತ್ರ ವ್ಯಾಪಾರ, ಉದ್ಯೋಗ, ಉದ್ಯಮ, ಕೃಷಿ, ಹಂಚಿಕೆದಾರಿಕೆ ಹೀಗೆ ಯಾವುದೊಂದು ಸ್ವತಂತ್ರ ವೃತ್ತಿ ಕೈಕೊಳ್ಳಬೇಕೆ ವಿನಹ ನೌಕರಿಯ ಪ್ರಯೋಗ ಮಾಡಬಾರದು.

ವಿವಿಧ ರಾಶಿಯವರ ವಿವಿಧ ಗ್ರಹಗಳ ಗುಣಧರ್ಮದಂತೆ ನೌಕರಿಯಾಗಲೀ ಸ್ವತಂತ್ರ ಉದ್ಯೋಗ ವೃತ್ತಿಯಾಗಲೀ ಕೈಕೊಂಡರೆ ಯಾವ ತೊಂದರೆ ಆಗುವದಿಲ್ಲ. ಅವುಗಳ ವಿವರಣೆ ಈ ಕೆಳಗಿನಂತೆ ಬರೆಯಲಾಗಿದೆ.

1) ಜಾತಕದಲ್ಲಿ ಬುಧನು ಬಲಾಢ್ಯನಿದ್ದ ಜಾತಕನು ವರಮಾನ ತೆರಿಗೆ ಮಾರಾಟ ತೆರಿಗೆ, ಅಬಕಾರಿ, ಸುಂಕ, ಮೊದಲಾದ ಎಲ್ಲ ಪ್ರಕಾರದ ತೆರಿಗೆಗೆ ಸಂಬಂಧಿಸಿದ, ಅಥವಾ ಬ್ಯಾಂಕ್ ಜೀವವಿಮೆ, ಎ ಜಿ ಆಫೀಸ, ಅಂಚೆ ಕಚೇರಿ ಸ್ಟೇಟ ಅಕೌಂಟ ಅಂಕಿ ಸಂಖ್ಯಾ ಮಾರ್ಕೆಟಿಂಗ ಮೊದಲಾದ ಲೆಕ್ಕಪತ್ರ ಅಂಕಿ ಸಂಖ್ಯೆ. ಹಣಕಾಸಿನ ಸಂಬಧಿಸಿದ ಖಾತೆಯಲ್ಲಿ ನೌಕರಿ ಮಾಡುವಿಕೆ ಇಲ್ಲವೆ ಯಾವುದೇ ಪ್ರಕಾರ ಸ್ವತಂತ್ರ ವ್ಯಾಪಾರ ವೃತ್ತಿ ಕೈ ಕೊಳ್ಳುವುದಾ ಯಾವುದೇ ಗಲೀವ್ಯಾಪಾರಿ ಪ್ರತಿನಿಧಿಯೆಂದು ಕೆಲಸ ಮಾಡುವದಾಗಲೀ ಅಥವಾ ಯಾವದೇ ಏಜನ್ಸಿ ಕೆಲಸಮಾಡುವದಾಗಲಿ, ಪತ್ರಿಕೊದ್ದಿಮೆಗೆ ಸಂಬಂಧಿಸಿದ ಕೆಲಸವಾಗಲಿ ಚಾರ್ಟರ್ಡಅಕೌಂಟಂಟವೃತ್ತಿ ಕಾಸ್ಟ ಅಕೌಂಟನ್ಸಿ ವೃತ್ತಿ ತೆರಿಗೆ ಸಲಹೆಗಾರಿಕೆ ವೃತ್ತಿ ಕೈಕೊಂಡರೆ ಯಾವ ತೊಂದರೆ ಉಂಟಾಗದು

2) ಜಾತಕದಲ್ಲಿ ಶನಿ ಮಂಗಳರು ಬಲಾಢ್ಯರಿದ್ದು, ಚಂದ್ರನು ಪುರುಷ ರಾಶಿಯಲ್ಲಿದ್ದ ಜಾತಕನು ಹೊರಾಂಗಣದ ಕೀರ್ತಿ ಕೆಲಸ ತಿರುಗಾಡಿ ಮಾಡುವ ಯಾವುದೇ ಕೆಲಸ ಕೈಕೊಂಡರೆ (Outdoor Executivework) ವೃತ್ತಿಯಲ್ಲಿ ಯಶಸ್ವಿ ಆಗುತ್ತಾನೆ ಉದಾಹರಣೆಗೆ ಯಾವುದೇ ಖಾತೆಯ ಇನ್ಸಸ್ಪೆಕ್ಟರ ಹುದ್ದೆ ನರ್ಸ, ಟಿಕೇಟಕಲೆಕ್ಟರ, ಗಾರ್ಡ, ರೆಂಜರ, ಕಂಡಕ್ಟರ, ಡ್ರಾಫ್ಟರ. ಪೋಲೀಸ, ವೈಯರ್‌ಮನ ವರ್ಕ ಇನ್ಸಪೆಕ್ಟರ ಮೊದಲಾದ ಹುದ್ದೆಗಳಾಗಲೀ ವರ್ಕಶಾಪ ಮಶೀನ ಶಾಪ ಖಾಸಗಿ ಗಿರಣಿ ಕಾರಖಾನೆಗಳಲ್ಲಿ ಮಶನರೀಗೆ ಸಂಬಂಧಿಸಿದ ಕೆಲಸವಾಗಲೀ ತಾಂತ್ರಿಕ ಕೆಲಸವಾಗಲೀ ದುರಸ್ತಿ ವೃತ್ತಿಯಾಗಲೀ ಕಾರು, ಬಸ್ಸು, ಟ್ರಕ್, ಟ್ಯಾಕ್ಟರ ರಿಕ್ಷಾ, ಟೆಂಪೋ, ಮೋಟಾರೊರ ಮೊದಲಾದ ವಾಹನಗಳ ವಾಹನ ಚಾಲಕ ಕೆಲಸವಾಗಲೀ ರೀಪೇರಿ ಕೆಲಸವಾಗಲೀ ಈ ವಾಹನಗಳನ್ನು ತಯಾರಿಸುವ ಉತ್ಪಾದಿಸುವ ಕೆಲಸವಾಗಲೀ ಕೈಕೊಂಡರೆ ಯಶಸ್ವಿಯಾಗುತ್ತಾರೆ. ಇದಲ್ಲದೆ ಆಸ್ಪತ್ರೆಯಲ್ಲಿಯ ನರ್ಸಿಂಗ್, ಟೆಕ್ನಿಶಿಯನ್ ಕೆಲಸ ಯಾವುದೇ ಪ್ರಕಾರದ ಇಂಜನೀಯರಿಂಗ ಕೆಲಸ ಯಾವುದೇ ಪ್ರಕಾರದ ಗುತ್ತಿಗೆ ವೃತ್ತಿ ಉತ್ಪಾದನಾ ಕೆಲಸಕ್ಕೆ ಇದಲ್ಲದೇ ವಿಮಾನದಳ, ಸೈನ್ಯಖಾತೆ, ನೌಕಾದಳ, ಪೋಲಿಸ ಈ ಖಾತೆಗಳಲ್ಲಿಕೆಲಸ ಇದೇ ಮೊದಲಾದ ಕೆಲಸ ಕೈಕೊಂಡರೆ ವೃತ್ತಿಯಲ್ಲಿಯೂ ನೌಕರಿಯಲ್ಲಿಯೂ ಯಶಸ್ವಿ ಸಂಪಾದಿಸುತ್ತಾರೆ.

3) ಪ್ರಾಥಮಿಕ ಶಿಕ್ಷಕ ಮಾಧ್ಯಮಿಕ ಶಿಕ್ಷಕ ಯಾವುದೇ ವಿಷಯದ ಕೊರ್ಸಿನ ಕಾಲೇಜಿನ ಅರ್ಥಾತ್ ವಿಶ್ವವಿದ್ಯಾಲಯಗಳ ಅಧ್ಯಾಪಕ ತರಬೇತಿ ಕೂರ್ಸುಗಳ ಶಿಕ್ಷಕ ಸ್ವತಂತ್ರವಾಗಿ ನಡೆಸುತ್ತಿರುವ ಟ್ಯುಟೋರಿಯಲ್ಲ ಕೆಲಸ ಹೀಗೆ ಯಾವುದೇ ಪ್ರಕಾರದ ಶಿಕ್ಷಕ ವೃತ್ತಿಗೆ ಗುರುವು ಬಲಾಢ್ಯನಿರಬೇಕು ಅಥವಾ ಕಾಯದೇ ಸಲಹೆಗಾರಿಕೆ, ಶಿಕ್ಷಣ ಸಲಹೆಗಾರಿಕೆಯ ಹುದ್ದೆಗೆ ವೃತ್ತಿಗೂ ನ್ಯಾಯಾಧೀಶ ಪುರೋಹಿತ ಧರ್ಮೋಪದೇಶಕ ಜ್ಯೋತಿಷಿ ವಿವಿಧ ವಿಷಯಗಳ ಉಪನ್ಯಾಸಕರು ಈವಿಲ್ಲ ವೃತ್ತಿಹಾಗೂ ನೌಕರ ದಾರಿಗೆ ಗುರುವುಕೆ ಬಲಾಢ್ಯನಿರಬೇಕು ಅಲ್ಲದೇ ಅರ್ಹತೆಯ ಆಧಾರದ ಮೇಲೆ ಪ್ರತಿಭೆಯ ಆದಾರದ ಮೇಲೆ ಲಭಿಸು ಯಾವುದೇ ಖಾತೆಯು ಯಾವುದೇ

ಹುದ್ದೆಗೆ ಯಾವುದೇ ದೇಶದಲ್ಲಿಯು ಕೆಲಸಗಳಿಗೆ ಗುರುವು ಬಲಾಢ್ಯ ನಿರಲೇಬೇಕು ಆದುದರಿಂದ ಯಾವುದೊಂದು ಶಿಕ್ಷಕ ವೃತ್ತಿಯಾಗಲೀ ಸಲಹೆಗಾರಿಕೆ ವೃತ್ತಿಯಾಗಲಿ ಪತ್ರಿಕೋದ್ಯಮಿಯಾಗಲಿ ಮಂತ್ರಿ ಮಹೋದಯರ ವರಿಷ್ಟ ಅಧಿಕಾರಿಗಳ ಪರ್ಸನಲ್ ಅಸಿಸ್ಟೆಂಟ ಕೆಲಸಕ್ಕಾಗಲಿ ವಿದೇಶದಲ್ಲಿಯು ಅಥವಾ ವಿದೇಶ ಕಂಪನಿಗಳಲ್ಲಿ ಅಥವಾ ಭಾರತದಲ್ಲಿರುವ ವಿದೇಶ ಕಂಪನಿಯೊಂದಿಗೆ ಸಂಯೊಗವಿರುವ ಕಾರಖಾನೆಗಳ ಕೆಲಸದಲ್ಲಿ ಆಯ್ಕೆ ಆಗಲು ಜಾತಕದಲ್ಲಿ ಗುರುವು ಬಲಾಢ್ಯ ನಿರಲೇಬೇಕು.

4) ಆಯ.ಎ.ಎಸ್., ಆಯ.ಪಿ.ಎಸ್., ಆಯ್.ಎಫ್.ಎಸ್., ಕೆ.ಎ.ಎಸ್.ಆಯ., ಆರ್.ಎಸ್.ಎಸ್. ಮೊದಲಾದಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ತೇರ್ಗಡೆಆಗಿ ಆಯ್ಕೆಆಗಲು ಅಥವಾಯಾವುದೊಂದು ಖಾತೆ,ಸಂಸ್ಥೆಯ ಬೋರ್ಡ, ನಿಗಮಗಳ ಗಿರಲಿ, ಕಂಪನಿ ಕಾರಖಾನೆಗಳ ವರಿಷ್ಟ ಅಧಿಕಾರಿ ಆಗಲು ಅಂದರೆ ನೇರ ನೇಮಕದಿಂದಾಗಲೀ ಅಥವಾ ಕೆಳದರ್ಜೆಯಿಂದ ಬಡತಿ ಪಡೆದು ಅಧಿಕಾರಿ ಆಗುವುದಾಗಲೀ ಯಾವುದೇ ಪ್ರಕಾರದ ಅಧಿಕಾರಿ ಆಗಲು ಜಾತಕದಲ್ಲಿ ರವಿಯು ಬಲಾಢ್ಯನಿರಲೇಬೇಕು ಅಲ್ಲದೇ ಸಂಗ–ಸಂಸ್ಥೆಯಲ್ಲಿ ಖಾತೆಯಲ್ಲಿ ಬೋರ್ಡ, ನಿಗಮಗಳಲ್ಲಿ ಕಂಪನಿ ಕಾರಖಾನೆಗಳಲ್ಲಿ ರಾಜಕೀಯದಲ್ಲಿ ಸಮಾಜದಲ್ಲಿ ಪುರ-ಪಟ್ಟಣಗಳಲ್ಲಿ ಆಪ್ತೇಷ್ಟರಲ್ಲಿ ಗಣ್ಯ, ಪ್ರಭಾವಿ, ವರ್ಚಸ್ವೀ ವ್ಯಕ್ತಿಗಳೆಂದು ಮಾನ್ಯತೆ, ಮನ್ನಣೆ ಪಡೆಯಲು ಅಧಿಕಾರಪಡೆಯಲು ಅಧಿಕಾರ ಚಲಾಯಿಸಲು ಜಾತಕದಲ್ಲಿ ಬಲಾಢ್ಯರವಿಇರಬೇಕಾಗುತ್ತದೆ. ಇವಲ್ಲದೇ ರವಿಯು ಬಲಾಢ್ಯ ನಿರುವ ಸ್ವತಂತ್ರ ಉದ್ಯೋಗ ಸಾರಿಗೆ ಉದ್ಯಮದಾರರಿಗೆ ವೃತ್ತಿಯವರೆಗೆ ಬಂಡವಾಳದ ಸಮಸ್ಯೆಯಾಗಲಿ ಕಚ್ಚಾಸಾಮಗ್ರಿ ವಸ್ತುಗಳ ಸಮಸ್ಯೆಯಾಗಲೀ ಪರ್ಮಿಟ್ಟು ಲೈಸನ್ಸಗಳ ಸಮಸ್ಯೆಯಾಗಲಿ ಇರುವುದಿಲ್ಲ. ಇದು ಅಲ್ಲದೇ ರವಿಯು ಬಲಾಢ್ಯನಿರುವ ಜಾತಕನು ತಾನು ಉತ್ಪಾದಿಸಿದ ವಸ್ತುಗಳನ್ನು ಬೇರೆ ಪ್ರಾಂತಗಳಿಗಾಗಲಿ ಬೇರೆ ದೇಶಗಳಿಗಾಗಲೀ ರಫ್ತು ಮಾಡಲು ಯಾವ ತೊಂದರೆಯು ಬರುವುದಿಲ್ಲ. ರವಿ, ಮಂಗಳ, ಗುರುಗಳು ಬಲಾಢ್ಯರಿರುವ ಅನಿವಾಸಿ ಭಾರತೀಯರು ಭಾರತದಲ್ಲಿ ಉದ್ಯಮಗಳನ್ನಾಗಲಿ

ವೃತ್ತಿಗಳನ್ನಾಗಲೀ ಪ್ರಾರಂಭಿಸಿದಲ್ಲಿ ಯಶಸ್ವಿಯಾಗುತ್ತಾರೆ. ರವಿ ಹಾಗೂ ಸಪ್ತಮೇಶರು ಬಲಾಢ್ಯರಿದ್ದರೆ. ಪಾಲುಗಾರಿಕೆಯ ಸಮಸ್ಯೆವಿರುವುದಿಲ್ಲ.

5) ಜಾತಕವಲ್ಲಿ ಶನಿಯು ಬಲಾಢ್ಯ ನಿದ್ದರೆ ಮಾತ್ರ ಕೃಷಿ ತೋಟಗಾರಿಕೆ ವೃತ್ತಿ ಅಥವಾ ಎಲ್ಲ ಪ್ರಕಾರದ ಎಣ್ಣೆ, ಕಟ್ಟಿಗೆ, ಉಕ್ಕು, ಕಬ್ಬಿಣ, ಸಿಮೆಂಟು ಕಟ್ಟಡಕ್ಕೆ ಬೇಕಾಗುವ ವಸ್ತುಗಳು ಸ್ಯಾನಿಟರೀ ವಸ್ತುಗಳು ಗೊಬ್ಬರ, ಕೃಷಿಗೆ ಸಂಬಂಧಿಸಿದ ಬೀಜ, ಔಷಧ ಮೊದಲಾದ ವ್ಯಾಪಾರವಾಗಲೀ ಉತ್ಪಾದನಾ ಉದ್ಯಮ ಯಾಗಲೀ ಕೈಕೊಂಡರೆ ಯಶಸ್ವಿಯಾಗುತ್ತಾರೆ ಶನಿಯು ನಿರ್ಬಲ ವಿದ್ದರೆ ಮೇಲೆ ಬರೆದ ವಸ್ತುಗಳ ವ್ಯಾಪಾರ ಅಥವಾ ಉದ್ಯಮ ಪ್ರಾರಂಭಿಸಬಾರದು. ಯಾರು ಯಾವ ಪ್ರಕಾರದ ವ್ಯಾಪಾರ ಕೈಕೊಳ್ಳಬೇಕೆಂಬುದರ ಬಗೆಗೆ ನಮ್ಮ ಉದ್ಯೋಗ ಜ್ಯೋತಿಷ್ಯ ಭಾಗ 2 ರಲ್ಲಿ ವಿವರಿಸಲಾಗಿದೆ.

6) ಯಾರ ಜಾತಕದಲ್ಲಿ ರವಿ, ಮಂಗಳ, ಗುರುಗಳು ನಿರ್ಬಲ ರಿದ್ದು ಶನಿ, ಚಂದ್ರ, ಶುಕ್ರ ಬುಧರು ಬಲಾಢ್ಯರಾಗಿ ಚಂದ್ರನು ಸ್ತ್ರೀರಾಶಿ ಯಲ್ಲಿದ್ದ ಜಾತಕರು ಸ್ವತಂತ್ರ ಉದ್ಯೋಗ ಉದ್ಯಮ ವೃತ್ತಿಕೈಕೊಳ್ಳಬಾರದು ನವಕರಿ ಇವರಿಗೆ ಶ್ರೇಯಸ್ಕರ

## 7) ಪರದೇಶ ಪರ್ಯಟನದ ಯೋಗಗಳು

ಇತ್ತೀಚೆಗೆ ಪರದೇಶ ಪ್ರಯಾಣದ ಸಂಬಂಧಿಸಿದ ಪ್ರಶ್ನೆಗಳಲ್ಲಿ ಅನೇಕರು ಪ್ರಶ್ನಿಸುತ್ತಿದ್ದಾರೆ. ಆದುದರಿಂದ ವಿದೇಶಿ ಪ್ರಯಾಣದ ಯೋಗಗಳು ಹೇಗಿರುತ್ತವೆ ಎಂಬುದನ್ನು ಪರಿಶೀಲಿಸುವಾ. ಯಾರೊಬ್ಬರು ವಿದೇಶಿ ಸಂಚಾರ ಕೈ ಕೊಳ್ಳಲು ಆರು ಕಾರಣಗಳಿವೆ. 1) ವಿದೇಶದಲ್ಲಿ ಹೆಚ್ಚಿನ ಶಿಕ್ಷಣ ಪಡೆಯುವುದಕ್ಕಾಗಿ 2) ವಿದೇಶದಲ್ಲಿ ನೌಕರೀ ಇಲ್ಲವೆ ಸ್ವತಂತ್ರ ಉದ್ಯೋಗ ವೃತ್ತಿ ಕೈ ಕೊಳ್ಳುವ ಉದ್ದೇಶಕ್ಕಾಗಿ 3) ಸರಕಾರದ ಇಲ್ಲವೆ ಬೋರ್ಡ್, ನಿಗಮ, ಸಂಘ ಸಂಸ್ಥೆಗಳ ಪ್ರತಿನಿಧಿಯಾಗಿ 4) ವಿದೇಶದಲ್ಲಿರುವ ತಮ್ಮ ಆಪ್ತೇಷ್ಟರ ಭೆಟ್ಟಿಗಾಗಿ 5) ಆರೋಗ್ಯ ತಪಾಸಣೆ

ಗಾಗಿ, ರೋಗ ಚಿಕಿತ್ಸೆಗಾಗಿ 6) ವಿದೇಶ ನೋಡುವ ಒಂದೇ ಉದ್ದೇಶಕ್ಕಾಗಿ. ಹೀಗೆ ಯಾವುದಾದರೊಂದು ಉದ್ದೇಶಕ್ಕಾಗಿ, ಕಾರಣದಿಂದಾಗಿ ಯಾರೊಬ್ಬರು ವಿದೇಶ ಸಂಚಾರ ಕೈಕೊಳ್ಳುತ್ತಾರೆ. ಇದಲ್ಲದೇ ಕಲಾವಿದರು ತಮ್ಮ ಕಲೆಯ ಪ್ರದರ್ಶನಕ್ಕೆ ವಿದೇಶ ಸಂಚಾರ ಕೈಕೊಳ್ಳುವರು ಮತ್ತೆ ಕೆಲವರು ಯಾರೊಬ್ಬರ ಸಂಗಡ ಸಂಗಾತಿಗಳಾಗಿ ಹೋಗುತ್ತಾರೆ ವಿಭಿನ್ನ ಉದ್ದೇಶದಿಂದ ಕೈಕೊಳ್ಳಲಿರುವ ವಿದೇಶ ಸಂಚಾರದ ಯೋಗಗಳು ಕೂಡ ವಿಭಿನ್ನವಿರುತ್ತವೆ. ಇದೊಂದೇವಿಷಯದ ಮೇಲೆ ನೂರಾರು ಪುಟಗಳಷ್ಟು ವಿವೇಚಿಸುವ ವಿಷಯದ ವ್ಯಾಪ್ತಿ ಇರುವುದರಿಂದ ಈ ಅಧ್ಯಾಯದ ವಿಷಯಕ್ಕೆ ಮಾತ್ರ ಇಲ್ಲಿ ವಿವರಿಸಲಾಗಿದೆ.

**ಸಾಮಾನ್ಯ ಯೋಗಗಳು** :— ಯಾರೊಬ್ಬ ಜಾತಕನು ಸತತ ಸಂಚಾರಿಯಾಗಿದ್ದರೆ, ಪ್ರವಾಸ ಜೀವಿಯಾಗಿದ್ದರೆ ಅಥವಾ ಹುಟ್ಟು ಊರು ಬಿಟ್ಟು ಬೇರೆ ಊರಲ್ಲಿ, ಬೇರೆ ಪ್ರಾಂತದಲ್ಲಿ, ಬೇರೆ ದೇಶದಲ್ಲಿ ಉದ್ಯೋಗ, ನೌಕರಿ ಮಾಡುತ್ತಿದ್ದರೆ ಅಥವಾ ಹುಟ್ಟು ಊರು ಬಿಟ್ಟು ಬೇರೆ ಪ್ರಾಂತ, ಬೇರೆ ಊರಿನಲ್ಲಿ ಅವನ ಉತ್ಕರ್ಷ ಹೊಂದುವನಾಗಿದ್ದರೆ ಈ ಕೆಳಗೆ ಬರೆದ ಸಾಮಾನ್ಯ ಯೋಗಗಳಿರುತ್ತವೆ.

1) ಇವರ ಜಾತಕದಲ್ಲಿ ಅನೇಕ ಗ್ರಹಗಳು ಲಗ್ನ, ತೃತೀಯ ಸಪ್ತಮ, ಭಾಗ್ಯ, ವ್ಯಯ ಈ ಸ್ಥಾನಗಳಲ್ಲಿರುತ್ತವೆ.

2) ಅನೇಕ ಗ್ರಹಗಳು ಚರರಾಶಿಯಲ್ಲಿರುತ್ತವೆ.

3) ಲಗ್ನೇಶ ಇಲ್ಲವೆ ಚಂದ್ರನು ಚರ ಇಲ್ಲವೆ ದ್ವಿಸ್ವಭಾವ ರಾಶಿಯಲ್ಲಿರುತ್ತವೆ.

4) ಲಗ್ನೇಶ, ಭಾಗ್ಯೇಶ, ಸಪ್ತಮೇಶ, ತೃತಿಯೇಶ, ವ್ಯಯೇಶ ಈ ಐದು ಸ್ಥಾನಾಧೀಶರಲ್ಲಿ ಕನಿಷ್ಟ ಮೂರು ಸ್ಥಾನಾಧೀಶರು ಲಗ್ನ, ತೃತೀಯ ಸಪ್ತಮ, ಭಾಗ್ಯ, ವ್ಯಯ ಈ ಯಾವುದೊಂದು ಸ್ಥಾನದಲ್ಲಿರುತ್ತವೆ. ಈ ನಾಲ್ಕು ಯೋಗಗಳು ಸಾಮಾನ್ಯವಾಗಿ ಯಾವುದೊಂದು ಉದ್ದೇಶಕ್ಕಾಗಿ ವಿದೇಶ ಸಂಚಾರ ಕೈ ಕೊಳ್ಳುವವರ ಜಾತಕದಲ್ಲಿರುವದಲ್ಲದೇ ಇನ್ನು ವಿಶಿಷ್ಟ ಉದ್ದೇಶಕ್ಕಾಗಿ ವಿದೇಶ ಸಂಚಾರ ಕೈ ಕೊಳ್ಳುವವರ ಜಾತಕದಲ್ಲಿ ಮೇಲ

ಬರೆದ ಯೋಗಗಳ ಹೊರತಾಗಿ ಕೆಲ ವಿಶಿಷ್ಟ ಯೋಗಗಳಿದ್ದು ಅವುಗಳ ಸಂಕ್ಷಿಪ್ತ ವಿವರಣೆ ಈ ಕೆಳಗಿನಂತಿವೆ.

**ವಿದೇಶದಲ್ಲಿ ವೃತ್ತಿ ಇಲ್ಲವೇ ನೌಕರೀ ಮಾಡುವ ವಿಶಿಷ್ಟ ಯೋಗ ಗಳು :—** 1) ಹಿಂದಿನ ಪುಟದಲ್ಲಿ ಹೇಳಿದಂತೆ ಸರಕಾರದ ಮೀಸಲಾತಿ ಧೋರಣೆಯಿಂದ ವಂಚಿತರಾದ ಪ್ರತಿಭಾವಂತರು ನೌಕರಿ ಇಲ್ಲವೇ ವೃತ್ತಿಗಾಗಿ ವಿದೇಶ ಸಂಚಾರ ಕೈ ಕೊಳ್ಳುತ್ತಾರೆ. ಇದೇ ಗ್ರಂಥದ 62ನೇ ಪುಟದಿಂದ 65ನೇ ಪುಟದಲ್ಲಿ ವಿವರಿಸಿದಂತೆ ವಿಭಿನ್ನ ಲಗ್ನಗಳಿಗಿರುವ ಯೋಗಕಾರಕ ಗ್ರಹ ಗಳು ಬಲಾಢ್ಯವಿರುತ್ತವೆ. 2) ಲಗ್ನೇಶ, ಭಾಗ್ಯೇಶ, ಪಂಚಮೇಶ, ಸುಖೇಶರು ಬಲಾಢ್ಯರಿರುತ್ತಾರೆ.

3) ರವಿ, ಮಂಗಳ, ಗುರು ಈ ಮೂರು ಗ್ರಹಗಳು ಬಲಾಢ್ಯ ವಿರುತ್ತವೆ. 4) ಅನೇಕ ಗ್ರಹಗಳು ಪುರುಷ ರಾಶಿಯಲ್ಲಿರುತ್ತವೆ ವಿದೇಶ ಪ್ರವಾಸ ಕೈಕೊಳುವ ಸಮಯದಲ್ಲಿ ಗೋಚರೀಯಿಂದ ಗುರು, ಶನಿ, ರವಿ, ಚಂದ್ರರ ಪರಿಭ್ರಮಣವು ಶುಭವಿರುತ್ತವೆ.

ಮೇಲೆಬರೆದ ನಾಲ್ಕು ಯೋಗಗಳಿದ್ದ ಜಾತಕನು ವಿದೇಶದಲ್ಲಿ ನೌಕರಿ ಇಲ್ಲವೆ ಸ್ವತಂತ್ರ ಉದ್ಯೋಗ, ವೃತ್ತಿ ಕೈಕೊಳಬಹುದು ಆದರೆ ಒಂದು ಮಹತ್ವ ಸಂಗತಿಯೆಂದರೆ ಸಾಡೇಸಾತಿ ಇಲ್ಲವೇ ಪಂಚಮಾಷ್ಟಮಿ ಶನಿ ಇರುವಾಗ ಇಲ್ಲವೇ ಗೋಚರೀಯಿಂದ 4–6–8–12– ನೇ ಗುರು ಬಂದಾಗ ವಿದೇಶಿ ಸಂಚಾರ ಕೈಕೊಳ್ಳಬಾರದು ಅಲ್ಲದೇ ಗೋಚರೀಯಿಂದ ರವಿ-ಚಂದ್ರರು4–6–8–12ನೇ ಯಾವರಾಗಿ ಬಂದಾಗ ಸಂಚಾರ ಕೈಕೊಳ್ಳಬಾರದು ಹ್ರಜಾಕ ಅಪಘಾತ ಕಳವು ತುಡುಗುಗಳ ಭೀತಿ ಪಾಸಪೋರ್ಟ್, ವೀಸಾ ವಿದೇಶಿವಿನಿಮಯದ ಆತಂಕ ಮೊದಲಾದ ತೊಂದರೆಗಳಿಂದ ಸಂಚಾರಕ್ಕೆ ವಿಘ್ನಗಳು ಬರುತ್ತವೆ. ಯಾರ ಜಾತಕದಲ್ಲಿ ರವಿ, ಗುರುಗಳು ಬಲಾಢ್ಯರಿರುವರು ಅವರಿಗೆ ಪಾಸ ಪೋರ್ಟಗಳ ತೊಂದರೆ ಆಗುವದಿಲ್ಲ.

2) **ಹೆಚ್ಚಿನ ಶಿಕ್ಷಣ, ವ್ಯಾಸಾಂಗ, ತರಬೇತಿ, ಕೋರ್ಸುಗಳಿಗಾಗಿ ವಿದೇಶಿ ಸಂಚಾರ ಕೈಕೊಳುವರ ವಿಶಿಷ್ಟ ಯೋಗಗಳು ಯಾರೊಬ್ಬ**

ಜಾತಕನು ಹೆಚ್ಚಿನ ಶಿಕ್ಷಣಕ್ಕಾಗಿ ಅಥವಾ ಹೆಚ್ಚಿನ ವ್ಯಾಸಾಂಗಕ್ಕಾಗಿ ಕೆಲವೊಂದು ಕೋರ್ಸುಗಳ ವಿಷಯಗಳ ತರಬೇತಿಗಾಗಿ ಕೆಲ ಅವಧಿಯವರೆಗೆ ವಿದೇಶಿ ಸಂಚಾರ ಕೈಕೊಳುವವರ ಜಾತಕದಲ್ಲಿ ವಿದೇಶಿ ಸಂಚಾರದ ಸಾಮಾನ್ಯ ಯೋಗಗಳ ಹೊರತಾಗಿ ಪಂಚಮೇಶ ಭಾಗ್ಯೇಶ ಗುರು ಬುಧರು ಬಲಾಢ್ಯರಿರುತ್ತಾರೆ ಅಲ್ಲದೆ ಪಂಚಮ, ಭಾಗದಲ್ಲಿ ಬಲಾಢ್ಯ ಗ್ರಹ ಇಲ್ಲವೇ ಗ್ರಹಗಳಿರುತ್ತವೆ

**3) ಯಾರೊಬ್ಬರ ಪ್ರತಿನಿಧಿಯಾಗಿ ವಿದೇಶ ಸಂಚಾ ಕೈಕೊಳ್ಳುವವರ ವಿಶಿಷ್ಟ ವಿದೇಶ ಯೋಗಗಳು :** ಇವರ ಮೇಲೆ ಬರೆದ ಸಾಮಾನ್ಯ ಯೋಗಗಳ ಹೊರತಾಗಿ ಇವರ ಜಾತಕದಲ್ಲಿ ರವಿ, ಮಂಗಳರು ಗುರು ಲಗ್ನೇಶ, ಭಾಗೇಶರು ಬಲಾಢ್ಯರಿರುತ್ತಾರೆ.

**4. ಆಪ್ತೇಷ್ಟರನ್ನು ಭೆಟ್ಟಿಯಾಗಲು ವಿದೇಶ ಸಂಚಾರ ಕೈಕೊಳ್ಳುವರರ ವಿಶಿಷ್ಟ ಯೋಗ :** ಮೇಲೆ ಬರೆದ ಸಾಮಾನ್ಯ ಯೋಗಗಳ ಹೊರತಾಗಿ ಲಗ್ನೇಶ, ಚತುರ್ಥೇಶ, ಪಂಚಮೇಶ, ಭಾಗ್ಯೇಶರು ಬಲಾಢ್ಯರಿರುತ್ತಾರೆ.

**5) ವಿದೇಶದಲ್ಲಿಯ ಪ್ರೇಕ್ಷಣೀಯ ಸ್ಥಳಗಳನ್ನೇ ನೋಡುವ ಒಂದೇ ಉದ್ದೇಶಕ್ಕಾಗಿ ವಿದೇಶ ಸಂಚಾರ ಕೈಕೊಳ್ಳುವವರ ವಿಶಿಷ್ಟ ಯೋಗಗಳು :** ಮೇಲೆ ಬರೆದ ಸಾಮಾನ್ಯ ಯೋಗಗಳ ಹೊರತಾಗಿ ಲಗ್ನೇಶ, ಭಾಗ್ಯೇಶ, ಸುಖೇಶ, ಶುಕ್ರ, ಚಂದ್ರರು ಬಲಾಢ್ಯರಿರುತ್ತಾರೆ.

**6) ಆರೋಗ್ಯ ತಪಾಸಣೆಗಾಗಿ ರೋಗ ಚಿಕಿತ್ಸೆಗಾಗಿ ವಿದೇಶ ಸಂಚಾರ ಕೈಕೊಳ್ಳುವವರ ಜಾತಕದಲ್ಲಿಯ ವಿಶಿಷ್ಟ ಯೋಗಗಳು :** ಆರೋಗ್ಯ ತಪಾಸಣೆಗಾಗಿ ರೋಗ ಚಿಕಿತ್ಸೆಗಾಗಿ ಕೆಲ ಜನರು ವಿದೇಶ ಸಂಚಾರ ಕೈಕೊಳ್ಳುತ್ತಾರೆ. ಇವರು ಹೆಚ್ಚಾಗಿ ಶ್ರೀಮಂತರಿರುವುದರಿಂದ ವಿದೇಶ ಯೋಗದ ಸಾಮಾನ್ಯ ಯೋಗಗಳ ಸಂಗಡ ಶ್ರೀಮಂತಿಕೆಯ ಯೋಗಗಳು ಇವರ ಜಾತಕದಲ್ಲಿರುತ್ತವೆ. ಶ್ರೀಮಂತಿಕೆಯ ಯೋಗಗಳು ಹೇಗಿರುತ್ತವೆ ಎಂಬುದು ಇದೇ ಅಧ್ಯಾಯದ ಆರ್ಥಿಕ ಪರಿಹಾರ ಅಧ್ಯಾಯದಲ್ಲಿ ನೋಡ ಬಹುದು.

ಇದಲ್ಲದೇ ಸಂಗೀತ, ನೃತ್ಯ ಅಭಿನಯ, ಚಿತ್ರಕಲೆ ಮೊದಲಾದ ಲಲಿತ ಕಲೆಗಳ ಕಲಾವಿದರನ್ನು ವಿದೇಶಿಯರು ಆಮಂತ್ರಿಸುತ್ತಾರೆ ಆದರೆ ಆ ಸುಯೋಗ ಎಲ್ಲ ಕಲಾವಿದರ ಜಾತಕದಲ್ಲಿ ಇರುವುದಿಲ್ಲ. ಆದುದರಿಂದ ಇಂಥ ಕಲಾವಿದರ ಜಾತಕದಲ್ಲಿ ಸಾಮಾನ್ಯ ವಿದೇಶಿ ಯೋಗದ ಸಂಗಡ ಚಂದ್ರ. ಶುಕ್ರರು, ಭಾಗ್ಯೇಶರು ಹೆಚ್ಚು ಬಲಿಷ್ಠರಿರುತ್ತಾರೆ ಇದಲ್ಲದೇ ಕೆಲ ಜಾತಕರು ವಿದೇಶ ಸಂಚಾರ ಕೈಕೊಂಡಾಗ ಕೆಲ ಜನರನ್ನು ತಮ್ಮ ಸಂಗಡ (ಆಕಂಪನಿ) ಕೆಲವನ್ನು ಕರೆದುಕೊಂಡು ಹೋಗುತ್ತಾರೆ. ಅವರ ಸಂಗಡ ಹೋಗುವವರ ಜಾತಕದಲ್ಲಿ ಸಾಮಾನ್ಯ ವಿದೇಶಿ ಯೋಗಗಳು ಮಾತ್ರವಿರುತ್ತವೆ.

8) ಗೋಚರೀಯಿಂದ ಗುರು, ಶನಿಯರು ಅನುಕೂಲರಾಗಿ ಶುಭ ರಾಗಿ ಬಂದಾಗ ಹಾಗೂ ವಿಭಿನ್ನ ಲಗ್ನಗಳಿರುವ ಯೋಗಕಾರಕ ಗ್ರಹಗಳು ಬಲಾಢ್ಯವಿದ್ದು ಆ ಗ್ರಹಗಳ ಮಹರ್ದಶೆ ಅಂತರರ್ದಶೆಯಲ್ಲಿ ಯಾರೊಬ್ಬರಿಗೆ ನೌಕರಿ ಲಭಿಸುವಿಕೆ ಬಡತಿ ಆಗುವಿಕೆ ಇಚ್ಛಿಸಿದ ಸ್ಥಳಕ್ಕೆ ಬದಲಿ ಆಗುವಿಕೆ ಇಲ್ಲವೇ ಸ್ವತಂತ್ರ ಉದ್ಯೋಗ, ವೃತ್ತಿ ಪ್ರಾರಂಭಿಸುವಿಕೆ ಹೊಸ ಉದ್ಯೋಗ ಕೈಕೊಳ್ಳುವಿಕೆ, ಉದ್ಯೋಗ–ನೌಕರಿಯಲ್ಲಿ ಅನುಕೂಲಕರ ಬದಲಾವಣೆ ಯಾಗುವಿಕೆ ಮಾರ್ಪಾಡವಾಗುವಿಕೆ ಮೊದಲಾದ ಶುಭ ಘಟನೆಗಳು ಜರಗು ತ್ತವೆಯಲ್ಲದೇ ಇದೆ ಅವಧಿಯಲ್ಲಿ ಉದ್ಯೋಗ ನೌಕರಿಯಲ್ಲಿ ಸ್ಥಿರತೆಬರುತ್ತದೆ.

9) ಇತ್ತೀಚೆಗೆ ಕೆಲ ನೌಕರ ವರ್ಗದವರು ಸೇವಾ ಅವಧಿಪೂರ್ವದ ಸ್ವಯಂ ನಿವೃತ್ತಿ ತೆಗೆದುಕೊಂಡರೆ ಹೇಗೆ ? ಸ್ವಯಂ ನಿವೃತ್ತಿ ತೆಗೆದು ಕೊಳ್ಳುವ ಕಾಲ ಯಾವುದು ಎಂದು ವಿಚಾರಿಸುತ್ತಿದ್ದಾರೆ. ಈ ಪ್ರಶ್ನೆಗೆ ಉತ್ತರ ಕೊಡಲು ವಿಷಯಗಳನ್ನು ಪರಿಶೀಲಿಸಬೇಕಾಗುತ್ತದೆ. ಮೊದಲನೇ ದಾಗಿ ಇದೇ ಗ್ರಂಥದ 152 ಪುಟದಿಂದ ಉ 153 ಪುಟದವರೆಗೆ ವಿವರಿಸಿದಂತೆ ಯಾರ ಜಾತಕದಲ್ಲಿ ಸ್ವತಂತ್ರ (ಉದ್ಯೋಗ, ವೃತ್ತಿ ಕೈಕೊಳ್ಳುವ ಪೂರಕ ಪೋಷಕಕಾರಕ ಗ್ರಹಗಳಿರುವವೋ ಹೇಗೆ ? ಎಂಬುದನ್ನು ಖಚಿತಪಡಿಸಿ ಕೊಳ್ಳಬೇಕು. ಎರಡನೇದಾಗಿ 20 ವರುಷ ಸೇವಾವಧಿ ಪೂರ್ತಿ ಆಗುವ ಸಮಯದಲ್ಲಿ ಗೋಚರೀ ಗುರು, ಶನಿಯರು ಹೇಗಿದ್ದಾರೆ ಹಾಗೂ ಮಹರ್ದಶೆ

ಅಂತರರ್ದಶೆಗಳು ಹೀಗಿವೆ ಎಂಬುದನ್ನು ಪರಿಶೀಲಿಸಬೇಕು ಜಾತಕನ ಜಾತಕದಲ್ಲಿ ಸ್ವತಂತ್ರ ಉದ್ಯೋಗ ವೃತ್ತಿಯ ಗ್ರಹಗಳು ಪೋಷಕವಿದ್ದು, 20 ವರುಷ ಸೇವಾ ಅವಧಿ ಪೂರ್ತಿ ಆಗುವ ಸಮಯದಲ್ಲಿ ಗೋಚರಿಯಿಂದ ಗುರು–ಶನಿಯರು ಅಶುಭರಾಗಿ ಬಂದಾಗ ಸ್ವಯಂ ನಿವೃತ್ತಿ ತೆಗೆದುಕೊಳ್ಳಲು ಸಲಹೆ ನೀಡಬೇಕು. ಏಕೆಂದರೆ ಮೊದಲೇ ಸ್ವತಂತ್ರ ಉದ್ಯೋಗ, ವೃತ್ತಿಯ ಜಾತಕ ಆ ಬಳಿಕ ಸಾಡೇಸಾತಿ ಪಂಚಮಾಷ್ಟಮ ಶನಿ ಹಾಗೂ 4–6–8–12 ನೇ ಗುರು ಬಂದ ಸಮಯದಲ್ಲಿ ನೌಕರಿ ಮುಂದುವರಿಸುವ ಇಚ್ಛೆ ಇದ್ದಲ್ಲಿ ಕಡ್ಡಾಯ ನಿವೃತ್ತಿ ಆಗುವ ಸಂದರ್ಭ ಬರುತ್ತದೆ,

10) ಕೆಲನೌಕರವರ್ಗದವರು ಸೇವಾ ಅವಧಿ ಮುಗಿಯುವ ಮೊದಲೇ ಸ್ವಯಂ ನಿವೃತ್ತ ಆಗಲು ಬಯಸಿದರೆ ಕೆಲ ನೌಕರವರ್ಗದವರು ಸೇವಾ ಅವಧಿ ಪೂರ್ತಿಸಿದನಂತರವೂ ನೌಕರಿಯಲ್ಲಿ ಮುಂದುವರೆಯುವ ಇಚ್ಛೆಯುಳ್ಳವರದ್ದು ಅದಕ್ಕಾಗಿ (Extension) ಪ್ರಯತ್ನಿಸುತ್ತಾರೆ. ಹಾಗೂ ನಮ್ಮನ್ನು ಪ್ರಶ್ನಿಸುತ್ತಾರೆ. ಈ ನೌಕರಿಯಲ್ಲಿ ಹುದ್ದೆಯಲ್ಲಿ ಮುಂದುವರೆಯುವುದರಿಂದ ಕಾರಕೂನ ಮೊದಲಾದ ಕೆಳದರ್ಜೆಯ ನೌಕರಿ ವರ್ಗದವರಿಗೆ ಆರ್ಥಿಕ ಭದ್ರತೆಯ ದೃಷ್ಟಿಯಿಂದ ಅನುಕೂಲವಾಗುತ್ತಿದ್ದರೆ ಅಧಿಕಾರವರ್ಗದವರಿಗೆ ಮೊದಲಿನಂತೆ ಅಧಿಕಾರ ಚಲಾಯಿಸಲು ಮಾನ. ಸನ್ಮಾನ ಪಡೆಯಲು ತನ್ಮೂಲಕ ದ್ರವ್ಯಾರ್ಜನೆ ಹೊಂದಲು ಮತ್ತಷ್ಟು ಅವಧಿ ದೊರೆತಂತಾಯಿತು. ಆದರೆ ಈ ನೌಕರಿಯಲ್ಲಿ ಹುದ್ದೆಯಲ್ಲಿ ಮುಂದುವರಿಕೆಯು ಯೋಗವು ಎಲ್ಲ ನೌಕರವರ್ಗದವರಿಗಿರುವುದಿಲ್ಲ ಆದುದರಿಂದ ಅವರ ಜಾತಕದಲ್ಲಿ ಈ ಮುಂದೆ ಬರೆದ ಯೋಗಗಳಿರುವುದು ಕಂಡು ಬರುತ್ತದೆ. ಜಾತಕದಲ್ಲಿ ರವಿಯು ಬಲಾಢ್ಯನಿರುತ್ತಾನೆ 2) ಮಾತೆಯ ಕಾರಕ, ವೃತ್ತಿಯಕಾರಕ. ದಶಮೇಶ ದಶಮಸ್ಥಾನದಲ್ಲಿರುವ ಗ್ರಹಗಳೆಲ್ಲರೂ ಬಲಾಢ್ಯರಿರುತ್ತಾರೆ 3) ಸೇವಾ ಅವಧಿ ಮುಗಿಯುವ ಅವಧಿಯಲ್ಲಿ ಗೋಚರಿಯಿಂದ ಗುರು, ಶನಿ ರವಿ ಗ್ರಹಗಳು ಬಲಾಢ್ಯರಿರುವುದಲ್ಲದೇ ಜಾತಕದಲ್ಲಿರುವಬಲಾಢ್ಯ ಗ್ರಹಗಳ ಮಹರ್ದಶೆ ಅಂತರರ್ದಶೆ ನಡೆಯುತ್ತದೆ.

11) ಇತ್ತೀಚೆಗೆ ಅನೇಕರು ಪಾಲುಗಾರಿಕೆಯ ವಿಷಯವಾಗಿ ಪ್ರಶ್ನೆಗಳನ್ನು ಕೇಳುತ್ತಿದ್ದಾರೆ. ಇದಕ್ಕೆ ಅನೇಕ ಕಾರಣಗಳಿವೆ ಯಾರೊಬ್ಬರು ಯಾವುದೊಂದು ಉದ್ಯಮ ಕೈಕೊಳ್ಳಬೇಕೆಂದರೆ ಅದಕ್ಕೆ ಹೇರಳವಾಗಿ ಬಂಡವಾಳವನ್ನು ತೊಡಗಿಸಬೇಕಾಗುತ್ತದೆ. ಒಬ್ಬರಿಂದಲೇ ಅನೇಕ ಲಕ್ಷ ಬಂಡವಾಳ ತೊಡಗಿಸುವುದು ಸೌಲಭ್ಯ ಸಾಧ್ಯವಿಲ್ಲದ ಮಾತು ಅಲ್ಲದೇ ಕೆಲ ನೌಕರವರ್ಗದವರು ತಮ್ಮ ಸಮೀಪದ ಬಳಗದವರ ಪಟುಯಾಂತರ ಪಾಲುಗಾರಿಕೆ ಉದ್ಯೋಗ ಕೈಕೊಳ್ಳುತ್ತಾರೆ. ಇದಲ್ಲದೆ ಇಂದು ದೇಶದಲ್ಲಿ ಅಸಂಖ್ಯ, ಖಾಸಗಿ ಪಾಲುಗಾರಿಕೆಯ ಫೈನಾನ್ಸ ಕಂಪನಿಗಳು ತಲೆಯತ್ತಿವೆ. ಇದುಅಲ್ಲದೆ ಪಾಲುಗಾರಿಕೆಯಿಂದ ವ್ಯಾಪಾರ ವೃತ್ತಿ ಉದ್ಯಮ ಕೈಕೊಳ್ಳಲು ಹಿಂದಿನಕ್ಕಿಂತಲೂ ಈಗ ಜನರ ಒಲವು ಹೆಚ್ಚಾಗಿದೆ. ಆದರೆ ಪಾಲುಗಾರಿಕೆಯಿಂದ ವ್ಯಾಪಾರ ವೃತ್ತಿ ಉದ್ಯಮ ಕೈಕೊಳ್ಳುವರು ಬಹಳಷ್ಟು ಜನ ಪಾಲುಗಾರರ ಸಂಗಡ ಮತ ಭೇಧದಿಂದ ತಮ್ಮ ಪಾಲುಗಾರಿಕೆಯಿಂದ ನಿವೃತ್ತರಾಗುತ್ತಾರೆ. ಕೆಲಜನರ ಪಾಲುಗಾರಿಕೆಯಿಂದ ಲಾಭವನ್ನು ಹೊಂದಿದ್ದಾರೆ. ಆದುದರಿಂದ ಪಾಲುಗಾರಿಕೆಯ ವ್ಯವಹಾರ ಯಾರಿಗೆಯೋಗ್ಯ ಎಂಬುದರ ವಿವರಣೆ ಈಕೆಳಗಿನಂತೆ ವಿವರಿಸಲಾಗಿದೆ.

1) ಪಾಲುಗಾರಿಕೆಯ ಸ್ಥಾನವೆಂದರೆ ಸಪ್ತಮ ಸ್ಥಾನ ಆದುದರಿಂದ ಸಪ್ತಮದಲ್ಲಿ ಬಲಾಢ್ಯಗ್ರಹ ಹಾಗೂ ಸಪ್ತಮೇಶನೂ ಬಲಾಢ್ಯನಿರುವ ಜಾತಕನ ಪಾಲುಗಾರಿಕೆ ವ್ಯವಹಾರದಲ್ಲಿ ಯಶಸ್ಸು ಆಗುತ್ತಾನೆ. 2) ಪಾಲುಗಾರಿಕೆಯ ಪೋಷಕ ಗ್ರಹವೆಂದರೆ ಬುಧ, ಚಂದ್ರ, ಶುಕ್ರ, ಕ್ರಮಶಃ ಕಾರಕಗ್ರಹಗಳು 3) ರವಿ, ಮಂಗಳ, ಗುರುಗಳು ಬಲಾಢ್ಯರಿದ್ದ ಜಾತಕರು ಪಾಲುಗಾರಿಕೆ ಉದ್ಯೋಗದಲ್ಲಿ ತೊಡಗಿಸಿದರೆ ದಿನನಿತ್ಯ ಪಾಲುಗಾರರ ಸಂಗಡ ಜಗಳತಪ್ಪಿದ್ದಲ್ಲ 4) ಸಪ್ತಮದ ನಂತರ ಚತುರ್ಥಸ್ಥಾನವು ಪಾಲುಗಾರಿಕೆಯ ಸ್ಥಾನ ಆದ್ದರಿಂದ ಚತುರ್ಥೇಶನೂ ಬಲಾಢ್ಯನಿರಬೇಕು ಸಪ್ತಮ ಚತುರ್ಥದ ನಂತರ, ಲಾಭ ಸ್ಥಾನವು ಅಂದರೆ ಲಾಭೇಶನು ಕಾರಕನು, ಆದುದರಿಂದ ಸಪ್ತಮದಲ್ಲಿಯ ಬಲಾಢ್ಯ ಗ್ರಹ ಚತುರ್ಥದಲ್ಲಿ ಬಲಾಢ್ಯ ಗ್ರಹ ಲಾಭದಲ್ಲಿ ಬಲಾಢ್ಯ ಗ್ರಹ ಹಾಗೂ ಸಪ್ತಮೇಶ, ಚತುರ್ಥೇಶ ಲಾಭೇಶ. ಚಂದ್ರ, ಶುಕ್ರ ಗುರು ಈ ಸಂಗತಿಗಳು ಪೂರಕವಿದ್ದರೆ ಮಾತ್ರ ಪಾಲುಗಾರಿಕೆಯ ಉದ್ಯೋಗ

ವೃತ್ತಿ ಕೈಕೊಳ್ಳಬೇಕು ಇನ್ನೊಂದು ಮಹತ್ವದ ಸಂಗತಿಯೆಂದರೆ ಪಾಲುಗಾರರಲ್ಲಿ ಯಾರೊಬ್ಬರಿಗೆ ಸಾಡೇಸಾತಿ ಪಂಚಮಾಷ್ಟಮ ಶನಿ ಹಾಗೂ ಗೋಚರಿಯಿಂದ ಅಶುಭ ಫಲದಾಯಕ ಗುರು ಬಂದಾಗ ಪಾಲುಗಾರಿಕೆಯಲ್ಲಿ ತುಸು ಮನಸ್ತಾಪ ವಾಗುತ್ತದೆ ಆದರೆ ಕೆಲ ವರುಷದವರೆಗೆ ಮಾತ್ರ ಇರುತ್ತದೆ ಈ ಅಶುಭ ಅವಧಿಯಲ್ಲಿ ತಾಳ್ಮೆ ಸಹನ ಶೀಲತೆಯಿಂದ ಇದ್ದಾರೆ ಎಲ್ಲವೂ ಸರಿಯಾಗುತ್ತದೆ

**2) ನೌಕರಿ, ಸ್ವತಂತ್ರ ಉದ್ಯೋಗ, ವೃತ್ತಿಯ ವಿಷಯವಾಗಿ ಪರಿಹಾರದ ಕ್ರಮಗಳು.**

ಯಾರೊಬ್ಬ ಜಾತಕನ ನೌಕರಿ ಇಲ್ಲವೇ ಸ್ವತಂತ್ರ ವ್ಯಾಪಾರ ಉದ್ಯೋಗ ವೃತ್ತಿಯ ವಿಷಯ ಕೈಕೊಳ್ಳಬೇಕೆಂಬುದನ್ನು ಈ ವರೆಗೂ ವಿವರಿಸಿದ್ದಾಯಿತು. ಇನ್ನು ನೌಕರಿ ಸ್ವತಂತ್ರ ಉದ್ಯೋಗವೃತ್ತಿಯಲ್ಲಿ ಬರುವ ತೊಂದರೆ ನಿವಾರಣೆಗಾಗಿ ಕೈಕೊಳ್ಳಬೇಕಾದ ಪರಿಹಾರ ಕ್ರಮಗಳ ಬಗೆಗೆ ಪರಿಶೀಲಿಸೋಣ. ಈ ಹಿಂದೆ ಹೇಳಿದಂತೆ ನೌಕರಿವರ್ಗದವರ ಸಮಸ್ಯೆಗಳಿಗಿಂತ ಸ್ವತಂತ್ರ ಉದ್ಯೋಗಸ್ಥರ ಸಮಸ್ಯೆಗಳು ಅಧಿಕವಿರುವುದರಿಂದವ ಪರಿಹಾರದ ಕ್ರಮಗಳಲ್ಲಿಯೂ ವಿಭಿನ್ನತೆ ವಿರುವುದರಿಂದ ಅವುಗಳ ವಿವರಣೆಯನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

1) ಮೊದಲನೆಯದಾಗಿ ಯಾರೊಬ್ಬ ನೌಕರ ವರ್ಗದವನು ಯಾವುದೇ ಖಾತೆಯಲ್ಲಿ ನೌಕರಿ ಮಾಡಲಿ ತನ್ನ ನೌಕರಿಯಲ್ಲಿ ಬರುವ ತೊಂದರೆ ನಿವಾರಣೆಗಾಗಿ ಪ್ರತಿನಿತ್ಯ ಸೂರ್ಯ ಪ್ರಾರ್ಥನೆ, ಸೂರ್ಯೋಪಾಸನೆ ಆದಿತ್ಯಹೃದಯ ಓದಬೇಕು, ಗಾಯತ್ರಿಜಪವನ್ನು ನಿತ್ಯ ಜಪಿಸಬೇಕು ಹಾಗೂ ಪ್ರತಿನಿತ್ಯ ಸೂರ್ಯನ ನಾಮಸ್ಮರಣೆಯೊಂದಿಗೆ ಸೂರ್ಯ ನಮಸ್ಕಾರ ಹಾಕಬೇಕು ಧ್ಯಾನ ದಾನ ಮಾಡಬೇಕು ಹಾಗೂ ಸೂರ್ಯನ ಅನುಗ್ರಹ ಪಡೆಯಲು ಮಾಣಿಕ್ಯ ಹರಳು ಧರಿಸಬೇಕು ಹಾಗೂ ಗೋದಿ. ಜವೆ ಗೋದಿ. ಗೋದಿರವೆ. ದ್ರಾಕ್ಷಿ, ತಾಂಬೂಲ. ಕೆಂಪು ಬಟ್ಟೆ ಯಥಾಶಕ್ತಿ ಸತ್ ಪಾತ್ರರಿಗೆ ಧಾನಮಾಡಬೇಕು.

2) ಎರಡನೆಯದಾಗಿ ಯಾರೂಬ್ಬ ನೌಕರ ಯಾವ ಖಾತೆಯಲ್ಲಿ ನೌಕರೀ ಮಾಡುವನೋ ಆ ಖಾತೆಯ ಕಾರಕ ಗ್ರಹಗಳ ಪ್ರಾರ್ಥನೆ ಜಪ

ಬ್ಯಾಂಕು, ವರಮಾನ, ಮಾರಾಟ ಅಬಕಾರಿ ಮೊದಲಾದ ತೆರಿಗೆ ಸಂಬಂಧಿಸಿದ ಖಾತೆಗಳಲ್ಲಿ ನೌಕರಿ ಮಾಡುತ್ತಿದ್ದಾರೆ. ಖಾತೆಯ ಕಾರಕ ಗ್ರಹಗಳಾದ ಬುಧನಿಗೆ ಸಂಬಂಧಿಸಿದ ಜಪ, ದಾನ, ಧ್ಯಾನ ಮಾಡಬೇಕು. ಹಾಗೂ ಪಚ್ಚೆ ಹರಳನ್ನು ಧರಿಸಬೇಕು. ಇದರಂತೆ ಶಿಕ್ಷಣ ಖಾತೆಯಲ್ಲಿ ಕೆಲಸಮಾಡುತ್ತಿರು ವವರು ಗುರುವಿನ ಜಪ ಧ್ಯಾನ ಮಾಡುವುದರೊಂದಿಗೆ ಪುಷ್ಯರಾಗ ಧರಿಸಬೇಕು ಶ್ರೀ ಗುರುಚರಿತ್ರೆ, ಚಿದಂಬರ ಚರಿತ್ರೆ, ಸಪ್ತಾಹಮಾಡಬೇಕು. ಮಶಿನರಿಗೆ ಸಂಬಂಧಿಸಿದ ಕೆಲಸ ಮಿಲಿಟರಿ, ನೇವಿ, ಪೋಲಿಸ್ ಮೊದಲಾದ ಹೊರಾಂಗಣ ಕೆಲಸಗಾರರು ಮಂಗಳನ ಸಂಬಂಧಿಸಿದ ಜಪ ಧ್ಯಾನ ದಾನಾದಿಗಳನ್ನು ಕೃಷಿ ಖಾತೆ, ಗಿರಣಿ ಕಾರಖಾನೆಗಳಲ್ಲಿ ಕೆಲಸಗಾರರು ಶನಿಯ ಜಪ, ದಾನ ಧ್ಯಾನಾದಿ ಗಳೊಂದಿಗೆ ಮಾರುತಿ ಸ್ತೋತ್ರ, ಹನುಮಾನ ಚಾಲಿಸ್ ಪವಮಾನ ಹೋಮ ಧ್ಯಾನ ದಾನ, ಮಾಡಬೇಕು. ವಾಯುಸ್ತುತಿ ಪಠಿಸಬೇಕು. ಹೀಗೆ ವಿವಿಧ ಖಾತೆಗಳ ವಿವಿಧ ಹುದ್ದೆಗಳ ಪೋಷಕಕಾರಕ ಗ್ರಹಗಳ ಜಪ ಧ್ಯಾನದಾನಾ ದಿಗಳನ್ನು ಮಾಡಬೇಕು. ಇದರಂತೆ ವಿವಿಧ ಕಂಪನಿ ಕಾರಖಾನೆಗಳಲ್ಲಿ ಉತ್ಪಾದಿಸುವ ವಸ್ತುಗಳಿಗನುಗುಣವಾಗಿ ಆಯಾ ಗ್ರಹಗಳ ಜಪ ಧ್ಯಾನ ದಾನಾದಿಗಳನ್ನು ಮಾಡಬೇಕು

3) ಮೂರನೇದಾಗಿ ಶ್ರೀ ಗುರುಚರಿತ್ರೆಯ 14ನೇ(ಹದಿನಾಲ್ಕನೇಯ) ಅಧ್ಯಾಯವನ್ನು ನಿತ್ಯ ಓದಬೇಕು ಅಥವಾ ಕನಿಷ್ಠ ಪಕ್ಷ ವರುಷಕ್ಕೆ ಎರಡು ಸಲವಾದರು ಶ್ರೀ ಗುರುಚರಿತ್ರೆ ಸಪ್ತಾಹ ಮಾಡಬೇಕು ಅಥವಾ ಪ್ರತಿನಿತ್ಯ ಅಥರ್ವಶೀರ್ಷವನ್ನು. ಪಠಿಸಬೇಕು ಅಥವಾ ವೆಂಕಟೇಶ ಸ್ತೋತ್ರ ಅಥವಾ ವಿಷ್ಣು ಸಹಸ್ರನಾಮ ಪಠಿಸಬೇಕು.

ಹೀಗೆ ಮೇಲೆ ಬರೆದ ಮೂರುಪ್ರಾಕಾರದ ಯಾವದೇ ಒಂದರ ಜಪ ಧ್ಯಾನ ಮಾಡಿದಲ್ಲಿ ನೌಕರಿಯಲ್ಲಿಯ ತೊಂದರೆ ನಿವಾರಣೆ ಆಗುವವು.

ಇನ್ನು ಸ್ವತಂತ್ರ ವ್ಯಾಪಾರ, ಕೃಷಿ ಹಂಚಿಕದಾರಿಕೆ ಗುತ್ತಿಗೆದಾರಿಕೆ ಮೊದಲಾದ ವೃತ್ತಿಗಳನ್ನಾಗಲಿ ಉದ್ಯಮಗಳನ್ನಾಗಲೀ ಕೈಗಾರಿಕೆಗಳನ್ನಾಗಲಿ ವರ್ಕಶಾಪ ಮಶೀನ ಶಾಪಗಳನ್ನಾಗಲಿ ಕೈ ಕೊಳ್ಳುವ ಸ್ವತಂತ್ರ

ಉದ್ಯೋಗಸ್ಥರ ಉದ್ದಿಮೆದಾರ ಸಮಸ್ಯೆಗಳು, ಬಹಳವಿರುವುದರಿಂದ ಅವರ ಕೈಕೊಳ್ಳುವ ಪರಿಹಾರದ ಕ್ರಮಗಳು ಇಂತಿವೆ.

1) ಮೇಲೆ ಬರೆದ ಸ್ವತಂತ್ರ ಉದ್ಯೋಗಸ್ಥರು ತಾವು ಕೆಲಸ ಮಾಡುತ್ತಿರುವ ಜಾಗದಲ್ಲಿ ಗಣಪತಿ, ಸರಸ್ವತಿ, ಲಕ್ಷ್ಮೀ ಫೋಟೊಗಳನ್ನು ತೂಗು ಹಾಕಬೇಕು ಹಾಗು ತಾವು ಕೆಲಸ ಪ್ರಾರಂಭಿಸುವ ಪೂರ್ವದಲ್ಲಿ ಆ ದೇವರ ಫೋಟೋಗಳಿಗೆ ಪೂ. ಕುಂಕುಮ.ಗಂಧ ಪೂಜಿಸಿ ಊದಿನಕಡ್ಡಿ ಹಚ್ಚಿ ನಮಸ್ಕಾರ ಪ್ರದಕ್ಷಿಣೆ ಆದ ಬಳಿಕವೇ ಕೆಲಸ ಪ್ರಾರಂಭಿಸಬೇಕು ಪ್ರತಿ ಶುಕ್ರವಾರ ಹಾಗೂ ಅಮಾವಾಸಿ ದಿನ ಲಕ್ಷ್ಮೀ ಪೂಜೆ ತಪ್ಪದೇ ಮಾಡಬೇಕು

2) ಸ್ವತಂತ್ರ ಉದ್ಯೋಗಸ್ಥರು ವ್ಯಾಪಾರಸ್ಥರು ಉದ್ಯಮದಾರರು ಮಶಿನರೀ ಯಂತ್ರಗಳ ದುರಸ್ತಿದಾರರು ಗುತ್ತಿಗೆದಾರರು ಹಂಚಿಕೆದಾರರು ಕಮೀಶನ್ ಏಜೆಂಟರು. ಸಾರಿಗೆ ವೃತ್ತಿಯವರು, ಕೃಷಿ ವೃತ್ತಿಯವರು, ಕೃಷಿ ಆಧಾರಿತ ವೃತ್ತಿಯವರು ವಿವಿಧ ವಸ್ತುಗಳ ಉತ್ಪಾದಿಸುವ ಕಾರಖಾನೆ ಖಾಸಗಿ ಗಿರಣಿ ಕೈಗಾರಿಕೆದಾರರು ಉದ್ಯಮದಾರರು ವರ್ಕಶಾಪ ಮಶೀನ ಶಾಪ ಖಾಸಗಿ ಉದ್ಯೋಗಸ್ಥರು ಇವೇ ಮೊದಲಾದವರು ಪ್ರತಿವರುಷ ಅಶ್ವಿನ ಬಹುಳ ಅಮವಾಸಿ (ದಿಪಾವಳಿ ಅಮವಾಸಿ) ದಿನ ಸಡಗರದಿಂದ ವೈಭವದಿಂದ ಲಕ್ಷ್ಮೀ ಪೂಜೆಯನ್ನು ತಪ್ಪದೇ ಮಾಡಬೇಕು.

ವಿವಿಧ ಡಾಕ್ಟರರು, ವಕೀಲರು ವಿವಿಧ ತೆರಿಗೆ ಸಲಹೆಗಾರರು ಇಂಜಿನಿಯರು ಆರ್ಕಿಟೆಕ್ಟ (ಶಿಲ್ಪಿ) ಸಾಹಿತಿಗಳು, ಬರಹಗಾರರು. ಖಾಂಡ ರೈಟರ, ನರ್ಸಿಂಗ್ ಹೋಮ ಕ್ಲಿನಿಕಗಳಂಥ ವಿವಿಧ ಡಾಕ್ಟರರು ವಿವಿಧ ಕಲಾವಿದರು ಕಾರ್ತಿಕ ಶುದ್ಧ ಪ್ರತಿಪದ ದಿಪಾವಳಿ ಪಾಡ್ಯದ ದಿನ ಲಕ್ಷ್ಮೀ ಪೂಜೆಯನ್ನುವೈಭವದಿಂದ ಸಡಗರದಿಂದ ಪೂಜಿಸಬೇಕು.

3) ಗಿರಣಿ, ಕಾರಖಾನೆ, ವರ್ಕಶಾಪ, ಮಶೀನಶಾಪ, ಗ್ಯಾರೇಜ ಮೊದಲಾದ ಉದ್ಯಮ ಕೈಗಾರಿಕೆಗಳಂಥ ಸ್ಥಳಗಳಲ್ಲಿ ಆಗಲೀ ಬೋರ್ಡಿಂಗ ಲಾಜಿಂಗ, ಹೋಟೆಲಗಳಾಗಲಿ ಯಾವುದೇ ಪ್ರಕಾರದ ಅಂಗಡಿ ಇರಲಿ ನರ್ಸಿಂಗ

ಹೋಮ, ಕ್ಲಿನಿಕ, ಖಾಸಗಿ ಆಸ್ಪತ್ರೆ, ವಕೀಲರ ಮನೆಯಲ್ಲಿಯ ಚೇಂಬರ ವೈದ್ಯ ಡಾಕ್ಟರ, ವಕೀಲರು, ತಮ್ಮ ವೃತ್ತಿ ಕೈಕೊಳ್ಳುವ ಜಾಗೆ ವಾಸ್ತುಶಿಲ್ಪಿ (ಆರ್ಕಿಟೆಕ್ಟ) ಇವರು ತಮ್ಮ ವೃತ್ತಿ ನಡೆಸುವ ಸ್ಥಳವಿರಲಿ ಚಾರ್ಟರ್ಡ ಅಕೌಂಟಂಟ ಹಾಗೂ ಎಲ್ಲ ಪ್ರಕಾರದ ತೆರಿಗೆ ಸಲಹೆಗಾರರು ತಮ್ಮ ವೃತ್ತಿಯ ಸ್ಥಳ ಕಲ್ಯಾಣಮಂಟಪದ ಜಾಗೆ ನಾಟ್ಯ ಮಂದಿರದ ಸ್ಥಳ, ಟಾಕೀಜ ಗಿರಣಿ-ಕಾರಖಾನೆಗಳ ಸ್ಥಳ ಯಾರೊಬ್ಬ ಜಾತಕನು ಯಾವುದೊಂದು ವೃತ್ತಿಯನ್ನು ನಡೆಸುತ್ತಿರುವ ಜಾಗೆ, ಸ್ಥಳ, ನಿವಾಸಗಳಲ್ಲಿ **ಆ ಜಾಗೆಯ ಶುದ್ಧಿಕರಣಕ್ಕಾಗಿ ಪ್ರತಿ ವರ್ಷ ತಪ್ಪದೆ ಉದಕಶಾಂತಿ ಮಾಡಿಸಬೇಕು** ಆ ಜಾಗೆಯಲ್ಲಿ ನಡೆಯುವ ಉದ್ಯೋಗ, ವೃತ್ತಿಯಲ್ಲಿ ಬರುವ ಎಲ್ಲ ಸಮಸ್ಯೆಗಳು ನಿವಾರಣೆ ಆಗುತ್ತದೆ, ಅಂದರೆ ಕಾರ್ಮಿಕರ ಸಮಸ್ಯೆಯಾಗಲಿ ಮಶಿನರಿ ಸಮಸ್ಯೆಗಳಾಗಲೀ ಉತ್ಪಾದನಾ ಸಮಸ್ಯೆಯೇ ಇರಲಿ ಪಾಲುಗಾರಿಕೆ ಸಮಸ್ಯೆಯಿರಲಿ ಬಂಡವಾಳದ ಸಮಸ್ಯೆ ಇರಲಿ, ಗಿರಾಕಿಗಳ ಸಮಸ್ಯೆಯಿರಲಿ ಮಾರಾಟದ ಸಮಸ್ಯೆವಿರಲಿ ಕಚ್ಚಾ ಸಾಮಗ್ರಿಗಳ ಸಮಸ್ಯೆ ಇರಲಿ ಯಾವುದೊಂದು ಸ್ವತಂತ್ರ ಉದ್ಯೋಗ ವೃತ್ತಿ ಕೈಕೊಳ್ಳುವರು ತಮ್ಮ ಜಾಗೆಯಲ್ಲಿ ಪ್ರತಿ ವರುಷ ತಪ್ಪದೇ ಉದಕಶಾಂತಿ ಮಾಡಿಸಬೇಕು.

ಯಾವುದೇ ಪ್ರಕಾರದ ಸ್ವತಂತ್ರ ವ್ಯಾಪಾರ, ಉದ್ಯಮ ಕೈಗಾರಿಕೆ ವೃತ್ತಿ ಅಂಗಡಿ ಮೊದಲಾದ ಯಾವುದೊಂದು ವೃತ್ತಿ ಕೈಕೊಳ್ಳುವ ಜಾತಕರು ತಾವು ಉದ್ಯೋಗ ಮಾಡುವ ಜಾಗೆಯಲ್ಲಿ ಪ್ರತಿವರುಷ ಭಾದ್ರಪದ ಶುದ್ಧ ಚವತಿದಿನ ಗಣೇಶ ಚವತಿ ದಿನ ಗಣಪತಿ ಮೂರ್ತಿಯನ್ನು ಕೂಡ್ರಿಸಿ ಪೂಜೆಯನ್ನು ಮಾಡಿದರೆ ನೌಕರರ ಸಮಸ್ಯೆಗಳಾಗಲಿ ವಾಣಿಜ್ಯ ಸಮಸ್ಯೆಯಾಗಲಿ ಮಶಿನರಿ ಸಮಸ್ಯೆಗಳಾಗಲೀ ನಿವಾರಣೆಯಾಗುತ್ತದೆ.

4) ಇದೇ ಗ್ರಂಥ ಪುಟ 88 ಹಾಗೂ 89 ಪುಟಗಳಲ್ಲಿ ಬರೆದಂತೆ ಲಕ್ಷ್ಮೀ ಪ್ರಾರ್ಥನೆ, ದುರ್ಗಾ ಸಪ್ತಶತಿಯ ವಿಧಾನವನ್ನು ಅನುಸರಿಸಿದರೆ ಬಂಡವಾಳ ಸಮಸ್ಯೆ, ಉತ್ಪಾದನಾ ಸಮಸ್ಯೆ, ಮಾರಾಟದ ಸಮಸ್ಯೆ, ಹಣಕಾಸು ಒದಗಿಸುವ ಸಂಸ್ಥೆಗಳ ಸಮಸ್ಯೆಗಳು ನಿವಾರಣೆಯಾಗುವುದಲ್ಲದೇ ಕಳವು-ತುಡುಗುಗಳ ತೊಂದರೆಗಳು ನಿವಾರಣೆ ಆಗುತ್ತವೆ.

ಒಟ್ಟಿನಲ್ಲಿ ಸ್ವತಂತ್ರ ವ್ಯಾಪಾರ, ಉದ್ಯೋಗ, ವೃತ್ತಿಯ ತೊಂದರೆ ನಿವಾರಣೆ ಆಗಲು ಮೇಲೆ ಬರೆದ ಪರಿಹಾರ ಕ್ರಮಗಳನ್ನು ಕೈಕೊಳ್ಳಬೇಕು. 1] ಸೂರ್ಯನ ಪ್ರಾರ್ಥನೆಯಿಂದ ಸರಕಾರದ ಆಡಳಿತ ವರ್ಗದ ಸಮಸ್ಯೆಗಳು ನಿವಾರಣೆ 2] ಲಕ್ಷ್ಮೀ ಸ್ತೋತ್ರದಿಂದ ಆರ್ಥಿಕ ಅನುಕೂಲತೆ 3] ಗಣಪತಿ ಪ್ರಾರ್ಥನೆಯಿಂದ ಎಲ್ಲ ಪ್ರಕಾರದ ವಿಘ್ನಗಳು ದೂರಾಗುತ್ತವೆ 4] ದುರ್ಗಾ ಸ್ತುತಿಯಿಂದ ಮಾಲಿಕರೀ ಸಮಸ್ಯೆ ಕಳವು ತುಡುಗುಗಳ ಸಮಸ್ಯೆ ಶತ್ರುಪೀಡೆ ನಿವಾರಣೆಯಾಗುತ್ತವೆ 5] ಉದಕಶಾಂತಿಯಿಂದ ವೃತ್ತಿಕೈಕೊಳ್ಳುವ ಜಾಗೆ ಶುದ್ಧಿಕರಣವಾಗುತ್ತದೆ.



# ಷಷ್ಟಮ ದಳ
## ಕುಟುಂಬ — ಪರಿಹಾರ
### ಪತಿ, ಪತ್ನಿ — ಪರಿಹಾರ

ಪರಿಹಾರ ಜ್ಯೋತಿಷ್ಯದ ಆರನೇಯ ಅಧ್ಯಾಯದಲ್ಲಿ ಕುಟುಂಬ ಪರಿಹಾರದ ಬಗೆಗೆ ಪ್ರಸ್ತಾಪಿಸುತ್ತೇನೆ. ವಿಷಯ ಪ್ರವೇಶದಲ್ಲಿ ಈ ಅಧ್ಯಾಯಕ್ಕೆ ಪತಿ, ಪತ್ನಿ–ಪರಿಹಾರ ಎಂಬ ಶೀರ್ಷಿಕೆ ಕೊಡಲಾಗಿದೆ. ಕುಟುಂಬ ಈ ಶಬ್ದವು ಬಹಳ ವ್ಯಾಪಕ ಅರ್ಥವುಳ್ಳದ್ದಿರುತ್ತದೆ. ಫಲ ಜ್ಯೋತಿಷ್ಯಶಾಸ್ತ್ರದಲ್ಲಿ ಜಾತಕದ (ಕುಂಡಲೀಯ)ಸಪ್ತಮ ಸ್ಥಾನಕ್ಕೆ ಕುಟುಂಬ ಸ್ಥಾನವೆಂದೂ ಕರೆಯುತ್ತಾರೆ. ವ್ಯವಹಾರದಲ್ಲಿ ಪತ್ನಿಗೆ ಕುಟುಂಬವೆಂದು ಕರೆಯುವ ವಾಡಿಕೆ. ಯಾರೊಬ್ಬರ ವಿವಾಹದ ವಿಷಯವಾಗಿ, ವೈವಾಹಿಕ ಜೀವನದ ವಿಷಯವಾಗಿ ಪತಿ-ಪತ್ನಿಯರ ಪ್ರಶ್ನೆಗಳಿಗೆ ಜಾತಕದ ಸಪ್ತಮ ಸ್ಥಾನವನ್ನು ಪ್ರಮುಖ್ಯವಾಗಿ ಪರಿಶೀಲಿಸುತ್ತಾರೆ. ಇವಲ್ಲದೆ ಯಾರೊಬ್ಬರು ಪತಿ-ಪತ್ನಿ ಆಗುವ ಪೂರ್ವದಲ್ಲಿ ವಧೂ–ವರರಿರುತ್ತಾರೆ. ವಿವಾಹ ಬಂಧನವು ವಧೂ–ವರರನ್ನು ಪತಿ–ಪತ್ನೀಯರನ್ನಾಗಿ ಮಾಡುತ್ತದೆ. ಈ ಅಧ್ಯಾಯದಲ್ಲಿ ವಿವಾಹಕ್ಕೆ ಸಂಬಂಧಿಸಿದ ಪ್ರಶ್ನೆಗಳ ಬಗೆಗೆ ವಧೂ–ವರರ ಸಂಬಂಧಿಸಿದ ಪ್ರಶ್ನೆಗಳಿಗೆ, ಪತಿ–ಪತ್ನಿಯರ ಸಂಬಂಧಿಸಿದ ಪ್ರಶ್ನೆಗಳಿಗೆ ಏಕತ್ರ ಕುಟುಂಬಕ್ಕೆ ಸಂಬಂಧಿಸಿದ ಪ್ರಶ್ನೆಗಳಿಗೆಲ್ಲ ಉತ್ತರ ಕೊಡಲಾಗಿದೆ.

ವಿವಾಹ ಹಾಗೂ ವೈವಾಹಿಕ ಜೀವನಕ್ಕೆ ಸಂಬಂಧಿಸಿದ ಪ್ರಶ್ನೆ ಸಮಸ್ಯೆಗಳು ಹಿಂದಿನಗಿಂತಲೂ ಈಗ ಹೆಚ್ಚಾಗಿವೆ. ಆದುದರಿಂದ ವಿವಾಹ ಹಾಗೂ ವೈವಾಹಿಕ ಜೀವನದ ಪ್ರಶ್ನೆ–ಸಮಸ್ಯೆಗಳಾವವು ? ಹೇಗಿರುತ್ತವೆ ಎಂಬುದನ್ನು ಮೊದಲು ವಿವರಿಸಿ ಆ ಬಳಿಕ ಅವುಗಳಿಗೆ ಮುಂಜಾಗ್ರತೆ ಹಾಗೂ ಪರಿಹಾರದ ಕ್ರಮಗಳನ್ನು ಪರಿಶೀಲಿಸೋಣ.

ಮಕ್ಕಳು ಶಿಕ್ಷಣ ಪೂರೈಸಿ ಉದ್ಯೋಗ–ನೌಕರಿಗೆ ಅಂಟಿಕೊಂಡಕೂಡಲೇ ತಂದೆ-ತಾಯಿಗಳು ಪಾಲಕರು ತಮ್ಮ ಮಕ್ಕಳ ವಿವಾಹದ ಬಗೆಗೆ ಆಲೋಚಿಸುತ್ತಾರೆ ಹಾಗೂ ಜ್ಯೋತಿಷಿಗಳ ಬಳಿಗೆ ತಮ್ಮ ಮಕ್ಕಳ ಜಾತಕದೊಂದಿಗೆ ಬಂದು ಪ್ರಪ್ರಥಮವಾಗಿ ಪೃಚ್ಛಿಸುವ ಪ್ರಶ್ನೆಯೆಂದರೆ ತಮ್ಮ ಮಗನಿಗೆ ಇಲ್ಲವೆ ಮಗಳಿಗೆ ವಿವಾಹ ಯೋಗ ಈಗ ಒದಗಿ ಬಂದಿದೆಯೋ ಹೇಗೆ ? ಕಂಕಣ ಬಲ ಕೂಡಿ ಬಂದಿದೆಯೋ ಹೇಗೆ ? ಮಾಂಗಲ್ಯ ಕೂಡಿ ಬಂದಿದೆಯೋ ಹೇಗೆ ? ಹೀಗೆ ವಿವಾಹದ ಕಾಲಮಿತಿಯ ಬಗೆಗೆ ವಿಚಾರಿಸುತ್ತಾರೆ. ಈಗ ವಿವಾಹ ಯೋಗ ಬಲ ಹತ್ತಿರವಿದೆ ಎಂದು ಜ್ಯೋತಿಷಿಗಳು ಉತ್ತರಿಸಿದ ಕೂಡಲೆ ಮತ್ತೆ ಪ್ರಶ್ನೆ ಕೇಳುತ್ತಾರೆ. ಮಗಳ ಬಗೆಗೆ ವಿಚಾರಿಸುವವರು ವರ ಹೇಗಿರುತ್ತಾನೆ ನೌಕರಿ ಮಾಡುವ ವರನೋ ಸ್ವತಂತ್ರ ಉದ್ಯೋಗದ ವರನೋ ? ನೌಕರಿ ಎಂದು ಉತ್ತರ ಸಿಕ್ಕರೆ ಯಾವ ಖಾತೆಯ ಯಾವ ಹುದ್ದೆಯ ಎಷ್ಟು ಸಮೀಪ ಯಾವದಿಕ್ಕು ಮೊದಲಾದವುಗಳನ್ನು ವಿಚಾರಿಸುತ್ತಾರೆ. ಮಗನ ಬಗೆಗೆ ವಿಚಾರಿಸುವುದಿದ್ದರೆ ಬರುವ ಕನ್ಯೆಯ ಗುಣ ಸ್ವಭಾವ ರೂಪ, ಸೌಂದರ್ಯ, ಶಿಕ್ಷಣ, ಮನೆತನ ಅಂತಸ್ತುಗಳ ಬಗೆಗೆ ವಿಚಾರಿಸುತ್ತಾರೆ. ಇನ್ನು ಕೆಲ ತಂದೆ–ತಾಯಿಗಳ ಪ್ರಶ್ನೆಗಳೆಂದರೆ ತಮ್ಮ ಮಗ ಅಥವಾ ಮಗಳಿಗೆ ಬಳಗ, ನೆಂಟಸ್ತಿಕೆಯಲ್ಲಿ ಸಂಬಂಧ ಕೂಡಿ ಬರುತ್ತದೆಯೋ ಅಥವಾ ಹೊಸದಾಗಿ ಬೀಗತನವಾಗುವುದೋ ಹೇಗೆ ? ಎಂದು ವಿಚಾರಿಸುತ್ತಾರೆ.

ಇನ್ನು ಕೆಲ ಸ್ವತಂತ್ರ ಡಾಕ್ಟರ ವೃತ್ತಿ ಇರುವ ತಮ್ಮ ಮಗ ಅಥವಾ ಮಗಳಿಗೆ ಡಾಕ್ಟರ ವೃತ್ತಿಯ ಸೊಸೆ ಅಥವಾ ಅಳಿಯ ಇರುವ ವಧೂ-ವರರೊಡನೆ ನೆಂಟಸ್ತಿಕೆ ಬೆಳೆಸಲು ಇಚ್ಛಿಸುತ್ತಾರೆ ಅಂದರೆ ಮಾತ್ರ ಅವರ ವೃತ್ತಿಗೆ ಪೂರಕವಾಗುತ್ತದೆ ಹಾಗೂ ಇಬ್ಬರೂ ಕೂಡಿಕೊಂಡು ದೊಡ್ಡ ಪ್ರಮಾಣದ ಆಸ್ಪತ್ರೆ, ನರ್ಸಿಂಗಹೋಮ ಪ್ರಾರಂಭಿಸಲು ಅನುಕೂಲವಾಗುತ್ತದೆ. ಅದಕ್ಕಾಗಿ ಮೆಡಿಕಲ್ ಶಿಕ್ಷಣ ಪಡೆದ ಅಥವಾ ಡಾಕ್ಟರ ಇರುವ ವಧೂ ವರರನ್ನು ತಮ್ಮ ಮಕ್ಕಳಿಗೆ ಕೂಡಿ ಬರುತ್ತದೆಯೋ ಹೇಗ ? ಎಂದು ವಿಚಾರಿಸುತ್ತಾರೆ ಇದರಂತೆ ವಕೀಲರು, ಇಂಜನೀಯರು, ಉದ್ದಿಮೆದಾರರು, ಕಲಾವಿದರು

ಆರ್ಕಟೆಕ್ಟರು ಮೊದಲಾದ ಬುದ್ಧಿಜೀವಿ ವರ್ಗದವರು ತಮ್ಮ ವೃತ್ತಿಗೆ ಸಹಾಯವಾಗುವ ವಧೂ-ವರರ ಬಗೆಗೆ ಪ್ರಶ್ನಿಸುತ್ತಾರೆ.

ಮತ್ತೆ ಕೆಲವರು ತಾವು ಇಚ್ಛಿಸಿದ ಮನೆತನದ ವಧೂ-ವರರ ಸಂಬಂಧ ವಾಗಲಿ ಮೆಚ್ಚಿದ ವಧೂವರ ವಿಷಯವಾಗಿಯೂ ವಿಚಾರಿಸುತ್ತಾರೆ. ನೀವು ಇಚ್ಛಿಸಿದ ಮನೆತನ ಹಾಗು ಮೆಚ್ಚಿದ ವಧೂ-ವರರೊಂದಿಗೆ ಸಂಬಂಧ ಕೂಡಿ ಬರುವ ಸಂಭವವಿದೆ ಎಂದು ಹೇಳಿದರೆ ಸಾಕು, ತಾವೇ ಅವರನ್ನು ವಿಚಾರಿಸಬೇಕೋ ? ಅಥವಾ ಅವರೆ ಹೇಳಿಕಳಿಸುವರೋ ? ಅಥವಾ ತಾವೇ ಖುದ್ದಾಗಿ ವಿಚಾರಿಸಬೇಕೋ ಅಥವಾ ತಮ್ಮ ಪ್ರತೀನಿಧಿಯನ್ನಾದರೂ ಕಳಿಸಬೇಕೋ ಎಂದು ಪ್ರಶ್ನಿಸುತ್ತಾರೆ

ಇನ್ನು ಕೆಲ ಧನ ಪಿಶಾಚಿಯ ಪಾಲಕರು ತಂದೆ-ತಾಯಿಗಳು ವಧೂ-ವರರ ರೂಪ ಸೌಂದರ್ಯ. ಶಿಕ್ಷಣ. ಮನೆತನಕ್ಕಿಂತ ಹಣ ಸಂಬಂಧವಾಗಿಯೇ ವಿಚಾರಿಸುತ್ತಾರೆ. ವರದಕ್ಷಿಣೆ ಅಥವಾ ತೆರವು ಈ ಶಬ್ದಗಳು ಕಾಯಿದೆಯ ವ್ಯಾಪ್ತಿಯಲ್ಲಿ ಬರುವುದರಿಂದ ಪರ್ಯಾಯವಾಗಿ ಅದೇ ಅರ್ಥ ಬರುವ ಶಬ್ದ ಪ್ರಯೋಗ ಮಾಡುತ್ತಾರೆ. ಶ್ರೀಮಂತ ಮನೆತನದ ವಧೂ-ವರರ ಬಗೆಗೆ ವಿಚಾರಿಸುತ್ತಾರೆ. ತಮ್ಮ ಅಂತಸ್ತಿಗೆ ತಕ್ಕ ಸಂಬಂಧ ಕೂಡಿ ಬರುತ್ತದೆಯೋ ? ಹಾಗೂ ತಮ್ಮ ಅಂತಸ್ತಿಗೆ ತಕ್ಕ ಮದುವೆ ಮಾಡಿಕೊಡು ವರೊ ತಾವು ಇಚ್ಛಿಸಿದ ವಸ್ತು. ವಡವೆಗಳೊಂದಿಗೆ ಸಂಭ್ರಮದಿಂದ ವಿವಾಹ ಮಾಡಿಕೊಡುವರೋ ಹೇಗೆ? ಎಂದು ವಿಚಾರಿಸುತ್ತಾರೆ.

ಇನ್ನು ಕೆಲವರು ಪ್ರತಿನಿತ್ಯ 8-10 ಜಾತಕದೊಂದಿಗೆ ಬಂದು ಈ ಜಾತಕ ಹೇಗೆ ? ಆ ಜಾತಕ ಹೇಗೆ ? ಯಾವ ಜಾತಕ ತಮ್ಮ ಮಕ್ಕಳಿಗೆ ಯೋಗ್ಯ ಯಾವ ಯಾವ ಜಾತಕದಲ್ಲಿ ಯಾವ ದೋಷಗಳಿವೆ ಯಾವ ಪೂರಕ ಪೋಷಕ ಅಂಶಗಳಿರುತ್ತವೆ. ಮೊದಲಾದ ಸಾಲಾವಳಿಯ ಬಗೆಗೆ ವಿಚಾರಿ ಸುತ್ತಾರೆ. ಇನ್ನು ಒಬ್ಬನೇ ಮಗ ಅಥವಾ ಮಗಳು ಇರುವ ತಂದೆ-ತಾಯಿ ಗಳು ತಮ್ಮ ವೃದ್ಧಾಪ್ಯದಲ್ಲಿ ಸಾಕಿ ಸಲುಹುವ ಸೊಸೆ ಅಥವಾ ಅಳಿಯನ ಬಗೆಗೆ ವಿಚಾರಿಸುತ್ತಾರೆ. ಈ ಜಾತಕದವರು ನಿಮ್ಮನ್ನು ಸಲಹುತ್ತಾರೆ

ಎಂದು ಉತ್ತರಿಸಿದರೆ ಸಾಕು ಉಳಿದ ಯಾವ ವಿಷಯವನ್ನು ವಿಚಾರಿಸದೆ ಸಂಬಂಧ ಬೆಳೆಸಲು ಇಚ್ಛಿಸುತ್ತಾರೆ.

ಇನ್ನು ಕೆಲವರು ತಮ್ಮ ಮಗನಿಗೆ ಅಥವಾ ಮಗಳಿಗೆ ನಿರ್ದಿಷ್ಟ ವೃತ್ತಿಯ, ನಿರ್ದಿಷ್ಟ ಖಾತೆಯ, ನಿರ್ದಿಷ್ಟ ಶಿಕ್ಷಣಾರ್ಹತೆಯ ನಿರ್ದಿಷ್ಟ ಹುದ್ದೆಯ ವಧೂವರರ ಬಗೆಗೆ ವಿಚಾರಿಸಿದರೆ ಇನ್ನು ಕೆಲಜಾತಕರು ನೌಕರಿ ಮಾಡುತ್ತಿರುವ ವಧೂ-ವರರ ಬಗೆಗೆ ವಿಚಾರಿಸುತ್ತಾರೆ.

ರಾಜಕೀಯ, ಸಾಮಾಜಿಕ ಕ್ಷೇತ್ರಗಳಲ್ಲಿ ಬದಲಾವಣೆಗಳಿಗನುಗುಣವಾಗಿ ವಧೂ-ವರರ ಆಯ್ಕೆಯ ಪ್ರಾಶಸ್ತ್ಯವಿರುತ್ತದೆ. ಸ್ವತಂತ್ರ ಪೂರ್ವದಲ್ಲಿ ಜಮೀನದಾರರ ಮಕ್ಕಳೊಂದಿಗೆ ಸಂಬಂಧ ಬೆಳೆಸಲು ತಂದೆ-ತಾಯಿಗಳು ಇಚ್ಛಿಸುತ್ತಿದ್ದರು. ಇದರಂತೆ ವಕೀಲ ವೃತ್ತಿಯಲ್ಲಿರುವ ವಕೀಲ ಮಕ್ಕಳೊಂದಿಗೆ ಹಾಗೂ ಪ್ರಾಥಮಿಕ ಶಿಕ್ಷಕರೊಂದಿಗೆ ತಮ್ಮ ಮಕ್ಕಳ ಸಂಬಂಧ ಬೆಳೆಸಲು ಹಾತೊರೆಯುತ್ತಿದ್ದರೆ 1947 ರಿಂದ 1957ರ ಈ ಕಾಲದಲ್ಲಿ ಸರಕಾರಿ ಸಿವಿಲ್ ಇಂಜನಿಯರರ ಮಕ್ಕಳೊಂದಿಗೆ ಸಂಬಂಧ ಬೆಳೆಸಲು ಇಚ್ಛಿಸುತ್ತಿದ್ದರು. 1957 ರಿಂದ 1977 ರ ಕಾಲದಲ್ಲಿ ಕಾಲದಲ್ಲಿ ಡಾಕ್ಟರ ವೃತ್ತಿಯಲ್ಲಿರುವ ವಧೂವರರೊಂದಿಗೆ ಸಂಬಂಧ ಕುದುರಿಸಲು ಹಾತೊರೆಯುತ್ತಿದ್ದರು. 1957 ರ ಈಚೆಗೆ ಜೀವವಿಮೆಯಲ್ಲಿ ಕೆಲಸ ಮಾಡುತ್ತಿರುವ ವಧೂವರರರೊಂದಿಗೂ 1969ರಲ್ಲಿ ಬ್ಯಾಂಕು ರಾಷ್ಟ್ರೀಕರಣವಾದ ಬಳಿಕ ಅಂದರೆ 1969 ರಿಂದ 1994ರ ಈ ಅವಧಿಯಲ್ಲಿಬ್ಯಾಂಕಿನಲ್ಲಿ ಕೆಲಸವಲ್ಲಿರುವ ವರ ಉದ್ಯಮದಾರರ ಹಾಗೂ ಮಶೀನರಿ ಇಂಜನೀಯರ ವರರ ಬಗೆಗೆ ಆಯ್ಕೆಯ ಪ್ರಾಶಸ್ತ್ಯ ಬಂದಿತು. 1971ರ ಈಚೆಗೆ ಶಿಕ್ಷಕ ವೃತ್ತಿಯ ವಧೂವರರ ಆಯ್ಕೆಗೆ ಪ್ರಾಶಸ್ತ್ಯ ಬಂದಿತು. I.A.S., I P.S., K.A.S. ಅಧಿಕಾರಿಗಳ ಆಯ್ಕೆಗೆ ಪ್ರಾಶಸ್ತ್ಯ ನಿತ್ಯಹಸಿರು ಹೀಗೆ ಆಯಾ ವರುಷವಲ್ಲಿ ಆಯಾ ವೃತ್ತಿಯ ವಧೂವರರೊಂದಿಗೆ ಸಂಬಂಧ ಕೂಡಿ ಬರುತ್ತಿದಿಯೋ ಹೇಗೆ ? ಎಂದು ಜ್ಯೋತಿಷಿಗಳನ್ನು ವಿಚಾರಿಸಹತ್ತಿದರು.

ಈ ವರೆಗೆ ತಂದೆ—ತಾಯಿಗಳು ಪಾಲಕರು ತಮ್ಮ ಮಕ್ಕಳ ವಿವಾಹದ ವಿಷಯವಾಗಿ ಯಾವರೀತಿ ಪ್ರಶ್ನಿಸುತ್ತಾರೆ ಎಂಬುದನ್ನು ವಿವರಿಸಲಾಯಿತು

ಇನ್ನು ವಧೂ ವರರೇ ನೇರವಾಗಿ ಯಾವ ಯಾವ ಪ್ರಕಾರದ ಪ್ರಶ್ನೆಗಳನ್ನು ಕೇಳುತ್ತಾರೆ ಅವರ ಪ್ರಶ್ನೆಗಳ ವೈವಿಧ್ಯ ಓದಿರಿ. ಈ ವಿಷಯವನ್ನು ಇಲ್ಲಿ ಏಕೆ ಪ್ರಸ್ತಾಪಿಸುತ್ತೇನೆ ಅಂದರೆ ಹಿಂದಿನ ಕಾಲದಲ್ಲಿ ವಧೂ-ವರರು ಚಿಕ್ಕವರಿದ್ದಾಗಲೇ ಅವರ ತಂದೆ ತಾಯಿಗಳು ಪಾಲಕರು ವಿವಾಹದ ವಿಷಯವಾಗಿ ವಿಚಾರಿಸುತ್ತಿದ್ದರು ಮದುವೆ ನೆರವೇರಿಸುತ್ತಿದ್ದರು ಈಗ ಕಾಲ ಬದಲಾಗಿದೆ ವಧೂ–ವರ ಪ್ರೌಢಾವಸ್ಥೆಯಲ್ಲಿ ಬಂದಾಗ ವಿವಾಹ ಜರುಗುತ್ತಿವೆ ವಯಸ್ಸಿನ 25ರಿಂದ30ರ ವಯಸ್ಸಿನವರೆಗೆ ಕೆಲ ಸಂದರ್ಭದಲ್ಲಿ 35 ವರುಷದವರೆಗೆ ವಧೂ–ವರರಿರುತ್ತಾರೆ ಈ ಕಾರಣದಿಂದಲೂ ಅಥವಾ ಶಿಕ್ಷಣದ ಪ್ರಭಾವ ದಿಂದಲು ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವವು ಸಿನಿಮಾ ಟೀವಿ ಪೇಪರಗಳ ಧಾರವಾಹಿಗಳ ಪ್ರಭಾವವೂ ಅಂತೂ ವಧೂ–ವರರು ನೇರವಾಗಿ ನಮ್ಮ ಬಳಿ ಬಂದು ವಿವಾಹದ ವಿಷಯವಾಗಿ ಯಾವ ಸಂಕೋಚವಿಲ್ಲದೆ ಪ್ರಶ್ನೆಗಳನ್ನು ಸಮಸ್ಯೆಗಳ ಬಗ್ಗೆ ವಿಚಾರಿಸುತ್ತಾರೆ. ಇತ್ತೀಚಿಗೆ ವಧೂ-ವರರು ತಾವೇ ಸ್ವತಃ ಬಂದು ತಮ್ಮ ವಿವಾಹ ವಿಷಯವಾಗಿ ವಿಚಾರಿಸುತ್ತಿರುವ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚಾಗಿದೆ ಕೆಲ ಒಮ್ಮೆ ಅವರು ವಿಚಾರಿಸುವ ಪ್ರಶ್ನೆ ಸಮಸ್ಯೆಗಳಿಗೆ ಉತ್ತರಕೊಡುವುದು ಕಠಿಣವಾಗುತ್ತದೆ ಹಾಗಾದರೆ ಓದಿರಿ ಅವರಪ್ರಶ್ನೆಗಳನ್ನು ಮೊಟ್ಟ ಮೊದಲು ಅವರ ಪ್ರಶ್ನೆಗಳೆಂದರೆ ತಮ್ಮ ಇಚ್ಛೆಯಂತೆ ವಿವಾಹವು ಜರುಗುವುದೋ ? ಅಥವಾ ತಮ್ಮ ತಂದೆ–ತಾಯಿಗಳ ಇಚ್ಛೆಯಂತೆ ಜರುಗುವುದೋ ಸಂಪ್ರದಾಯಕವಾಗಿ ವಿವಾಹ ಜರುಗುವುದೋ ? ಅಥವಾ ರಜಿಷ್ಟರ ಕಚೇರಿಗಳಲ್ಲಿ ನೊಂದಣಿಯಾಗಿ ವಿವಾಹ ಜರುಗುವುದೋ ಎಂದು ? ವಿಚಾರಿಸುತ್ತಾರೆ ತಮ್ಮ ವಿವಾಹ ಎಂದು ಜರಗುವದು ಎಂಬುದನ್ನು ಸರ್ವಸಾಧಾರಣ ಎಲ್ಲ ವಧೂ–ವರರ ಪ್ರಶ್ನೆ ಇದ್ದೇ ಇರುತ್ತದೆ

ಇನ್ನು ಕೆಲವರು ತಾವು ಪ್ರೇಮಿಸಿದ ಪ್ರೇಮಿಸುತ್ತಿರುವ ವಧೂ–ವರರನ್ನು ವಿವಾಹವಾಗಲು ಬಯಸುತ್ತಾರೆ. ಅದಕ್ಕಾಗಿ ಪ್ರಶ್ನೆಗಳ ಸರಮಾಲೆ ಇರುತ್ತದೆ. ಅವು ಪ್ರೇಮಿಸುತ್ತಿರುವ ವ್ಯಕ್ತಿಗಳ ನಿಜವಾದ ಪ್ರೇಮ ತಮ್ಮ ಮೇಲೆ ಇದೆಯೋ ಹೇಗೆ ? ಎಂದು ವಿಚಾರಿಸಿದರೆ ಮತ್ತೆ ಕೆಲವರು ತಮ್ಮನ್ನು ಇಬ್ಬರು ಪ್ರೇಮಿಸುತ್ತಾರೆ. ಇವರಲ್ಲಿ ಯಾರನ್ನು ಮದುವೆ ಆದರೆ ಹೇಗೆ ?

ಎಂದು ವಿಚಾರಿಸುತ್ತಾರೆ. ಮತ್ತೆ ಕೆಲವರು ತಮ್ಮ ಪ್ರೇಮ ಪ್ರಕರಣಕ್ಕೆ ಮನೆಯವರ ಸಂಬಂಧಿಕರ ತಂದೆ-ತಾಯಿಗಳ ಒಪ್ಪಿಗೆ ಸಿಗುವುದೋ ಹೇಗೆ? ಅವರು ಒಂದು ವೇಳೆ ಒಪ್ಪದಿದ್ದರೆ ಅವರನ್ನು ಒಪ್ಪಿಸುವ ಬಗೆಗೆ ವಿಚಾರಿಸುತ್ತಾರೆ. ಮತ್ತೆ ಕೆಲವರು ಅಂತರ ಜಾತಿಯ ವಿವಾಹದ ಬಗೆಗ ತಮ್ಮ ಜಾತಿಯಲ್ಲಿಯ ವಿವಿಧ ಪಂಗಡಗಳ ಬಗೆಗೆ ವಿಚಾರಿಸುತ್ತಾರೆ. ಇನ್ನು ಕೆಲವರು ತಮ್ಮ ಶಿಕ್ಷಣದ ಅರ್ಹತೆಯ ತಕ್ಕ ವಧೂ-ವರ ಸಿಗುವುದೋ ಹೇಗೆ? ಎಂದು ವಿಚಾರಿಸಿದರೆ ಮತ್ತೆ ಕೆಲವರು ಜಾತಕಾದಿಗಳನ್ನು ಯಾಕೆ ಪರಿಶೀಲಿಸಬೇಕು. ಜಾತಕ ನೋಡದೆ ಕೂಡಿಸಿನೋಡದೆ ವಿವಾಹವಾದರೆ ಏನಾಗುತ್ತದೆ? ಎಂದು ವಿಚಾರಿಸುತ್ತಾರೆ. ಮತ್ತೆ ಕೆಲವರು ಏಕನಾಡಿ ದೋಷ, ಮಂಗಳ ದೋಷ, ಮನುಷ್ಯ ಗಣ-ರಾಕ್ಷಸಗಣ, ಅತ್ತೆ, ಮಾವ, ಭಾವ, ಮೈದುನ ರಹಿತ ಮನೆ ಮೊದಲಾದ ಜಾತಕದಲ್ಲಿಯ ನಿರ್ಬಂಧನೆಇದ್ದು ವಿವಾಹಮಾಡಿಕೊಂಡರೆ ಹೇಗೆ ? ಎಂದು ವಿಚಾರಿಸುತ್ತಾರೆ. ಮತ್ತೆ ಕೆಲವರು ಸಾಹಸಮಯ ಹಾಗೂ ಕ್ರಾಂತಿಕಾರಕ ವಿಚಾರದ ವಧೂ-ವರರ ಪ್ರಶ್ನೆಗಳೆಂದರೆ ಅಂತರ್ ಜಾತೀಯ ವಿವಾಹ ಮಾಡಿಕೊಂಡರೆ ಹೇಗೆ ? ಎಂದು ವಿಚಾರಿಸುತ್ತಾರೆ. ಸ್ವಗೋತ್ರದ ವಿವಾಹ ಮಾಡಿಕೊಂಡರೆ ಹೇಗೆ ? ಎಂದು ವಿಚಾರಿಸುತ್ತಾರೆ. ಕೆಲ ವಧೂಗಳು ತಮಗಿಂತ ಕಿರಿಯ ವಯಸ್ಸಿನ ವರನನ್ನು ವಿವಾಹವಾದರೆ ಏನಾಗುತ್ತದೆ ಎಂದು ವಿಚಾರಿಸಿದರೆ, ವಿಧುರ ವಿಧವಾ ವಿವಾಹ ಹೇಗೆ? ಎಂದು ವಿಚಾರಿಸುತ್ತಾರೆ ಮತ್ತು ಕೆಲವರು ವಿವಾಹಿತ ಸ್ತ್ರೀ-ಪುರುಷರೊಂದಿಗೆ ದೈಹಿಕಸಂಬಂಧ ಬೆಳಸಿ ಗುಟ್ಟಾಗಿ ದೇವಸ್ಥಾನದಲ್ಲಿಯಾಗಲಿ, ಮಠದಲ್ಲಿಯಾಗಲಿ,ತೀರ್ಥಕ್ಷೇತ್ರಗಳಲ್ಲಿಯಾಗಲೀ, ಗುಟ್ಟಾಗಿ ಪರಸ್ಪರ ಮಾಲಾರ್ಪಣೆ ವಿಧಾನದಿಂದಗುಟ್ಟಾಗಿ ವಿವಾಹ ಮಾಡಿಕೊಂಡು, ಆ ಸಂಬಂಧದಿಂದ ಬಂದ ತೊಂದರೆನಿವಾರಣೆಗಾಗಿ ಪ್ರಶ್ನಿಸುತ್ತಾರೆ.

ಇನ್ನು ಕೆಲವರು ಧಾರ್ಮಿಕವಾಗಿಯೂ, ಕಾಯಿದೆಯಾಗಿಯೂ ನಿಷೇದವಿರುವ ಕಟ್ಟಳೆಗಳನ್ನು ಉಲ್ಲಂಘಿಸಿ ಪರಸ್ಪರ ಅನುರಾಗ ಪ್ರೇಮಪರವರಾಗಿರುತ್ತಾರೆ. ಇಂಥವರು ತಮ್ಮ ಪ್ರಶ್ನೆಗಳ ಬಗೆಗೆ ವಿಚಾರಿಸುತ್ತಾರೆ. ಉದಾಹರಣೆಗಾಗಿ 18 ವರುಷದೊಳಗಿನ ವಧೂ 21 ವರುಷದ ಒಳಗಿನ ವರ

ಇದು ಕಾಯುದೆಯಂತೆ ನಿಷೇಧ ಆದಾಗ್ಯೂ ಪರಸ್ಪರ ಪ್ರೇಮಿಸಿರುತ್ತಾರೆ. ಆ ವಯಸ್ಸು ಬರುವವರೆಗಿನ ತೊಂದರೆ-ತಾಕಲಾಟಗಳ ಬಗೆಗೆ ವಿಚಾರಿಸುತ್ತಾರೆ. ಇನ್ನೊಂದು ಉದಾಹರಣೆ ಹಿಂದು ಸಂಪ್ರದಾಯದ ಪ್ರಕಾರ ತಾಯಿಯ ತಂಗಿಯ ಮಗನೊಂದಿಗೆ ವಿವಾಹಮಾಡಿಕೊಳ್ಳುವುದು ಕಕ್ಕನ ಮಗನೊಂದಿಗೆ ವಿವಾಹವಾಗುವುದು ಧಾರ್ಮಿಕ ನಿಷೇಧವಿದೆ. ಆದಾಗ್ಯೂ ಪರಸ್ಪರ ಪ್ರೇಮಿಗಳ ಪ್ರಶ್ನೆಗಳಿರುತ್ತವೆ.

ಹೀಗೆ ವಿವಾಹ ಹಾಗೂ ವೈವಾಹಿಕ ಜೀವನದ ವಿಷಯವಾಗಿ ತಂದೆ-ತಾಯಿಗಳು ಪಾಲಕರು ಪ್ರಶ್ನಿಸುವ ಪ್ರಶ್ನೆಗಳಿಗೂ ವಧೂ-ವರರೇ ನೇರವಾಗಿ ಎಂತೆಂಥ ಪ್ರಶ್ನೆಗಳನ್ನು ವಿಚಾರಿಸುತ್ತಾರೆ ಎಂಬುದನ್ನು ಓದಿದ್ದಾಯಿತು. ವ್ಯಕ್ತಿ ಜ್ಯೋತಿಷಿಗಳಿಗೂ ಇಂಥ ಪ್ರಶ್ನೆ ಸಮಸ್ಯೆಗಳಿಗೆ ಉತ್ತರಿಸಬೇಕಾಗುತ್ತದೆ ಪ್ರಸ್ತುತಃ ಈ ಅಧ್ಯಾಯದಲ್ಲಿ ಮೇಲೆ ಬರೆದ ಈ ಕೆಲ ಪ್ರಶ್ನೆ ಸಮಸ್ಯೆಗಳಿಗೆ ನಾವು ಈಗಾಗಲೇ ಬರೆದು ಪ್ರಕಟಿಸಿದ **“ವಧೂವರರ ಜ್ಯೋತಿಷ್ಯ ಹಾಗೂ ಸ್ತ್ರೀ ಜ್ಯೋತಿಷ್ಯ” ಈಎರಡು ಗ್ರಂಥಗಳಲ್ಲಿ**ವಿವರವಾಗಿ ವಿವರಿಸಲಾಗಿದ್ದರಿಂದ ಈ ಗ್ರಂಥದ ಈ ಅಧ್ಯಾಯದಲ್ಲಿ ಕೆಲ ಪ್ರಶ್ನೆಗಳಾಗಿಉತ್ತರಿಸಲಾಗಿದ್ದು, ವಿವಾಹ ಹಾಗೂ ವೈವಾಹಿಕ ಜೀವನದ ಬಗೆಗೆ ಮುಂಜಾಗ್ರತೆಯ ಕ್ರಮ ಹಾಗೂ ಪರಿಹಾರದ ಕ್ರಮಗಳಿಗೆ ಮಾತ್ರ ಹೆಚ್ಚು ಒತ್ತು ಕೊಡಲಾಗಿದೆ.

ಯಾರೊಬ್ಬರ ವಿವಾಹ ಎಂದು ಜರುಗುತ್ತದೆ ? ಹಾಗೂ ವೈವಾಹಿಕ ಜೀವನ ಹೇಗಿದೆ ? ಎಂಬ ಎರಡೇ ಎರಡು ಪ್ರಶ್ನೆಗಳಿಗೆ ಉತ್ತರಿಸಲು ಎರಡು ಸಂಗತಿಗಳನ್ನು ಪರಿಶೀಲಿಸ ಬೇಕಾಗುತ್ತದೆಮೊದಲನೇಯದಾಗಿ ಯಾರೊಬ್ಬರು ಜನಿಸುವ ಸಮಯದಲ್ಲಿಯ ಜಾತಕದಲ್ಲಿಯ ಗ್ರಹಸ್ಥಿತಿ ಹೇಗೆ ? ಎರಡನೇದಾಗಿ ಗೋಚರೀ ಗ್ರಹಗಳ ಪರಿಭ್ರಮಣದ ಪರಿಣಾಮ ಹಾಗೂ ಮಹಾದಶೆ ಅಂತರರ್ದಶೆಗಳ ಪ್ರಭಾವ ಈ ಎರಡೇ ಎರಡು ಸಂಗತಿಗಳನ್ನು ಕುಲಂಕುಷವಾಗಿ ಅಭ್ಯಸಿಸಿದರೆ ಮೇಲಿನ ಎರಡು ಪ್ರಶ್ನೆಗಳಿಗೆ ಉತ್ತರಿಸಲು ಸುಲಭವಾಗುತ್ತದೆ.

ಯಾರೊಬ್ಬರ ವಿವಾಹವಾಗುವ ಕಾಲ ಯಾವುದು ಎಂಬುದನ್ನು ತಿಳಿದು

ಕೊಳ್ಳುವ ಮೊದಲು ಆ ಜಾತಕನ ಜಾತಕವನ್ನು ಸೂಕ್ಷ್ಮವಾಗಿಪರಿಶೀಲಿಸಬೇಕು. ಲಗ್ನ ಸರಿಯಾಗಿ ಇದೆಯೋ ಹೇಗೆ ? ಚಂದ್ರನು ಎಷ್ಟು ಅಂಶದವನಿದ್ದಾನೆ ಜಾತಕದಲ್ಲಿಯು ಗ್ರಹಸ್ಥಿತಿಯು ಬಗೆಗೆ ಪರಿಶೀಲಿಸಿ ಈ ಜಾತಕವು ಬೇಗ ವಿವಾಹ ವಾಗುವ ಜಾತಕವೋ? ತಡವಾಗಿ ವಿವಾಹ ಆಗುವಜಾತಕವೋ? ಎಂಬುದನ್ನು ಮೊದಲು ಖಚಿತ ಪಡೆದುಕೊಳ್ಳಬೇಕು ಅವುಗಳ ಸಂಕ್ಷಿಪ್ತ ವಿವರ ಹೀಗಿದೆ.

**1) ವಿವಾಹಕ್ಕೆ ಪೋಷಕ ಹಾಗೂ ಮಾರಕ ಗ್ರಹಗಳು :—**

ವಿವಾಹಕ್ಕೆ ಪೋಷಕ ಗ್ರಹವೆಂದರೆ ಶುಕ್ರನು. ಯಾರ ಜಾತಕದಲ್ಲಿ !ಶುಕ್ರನು ಬಲಾಢ್ಯನಿರುತ್ತಾನೋ ಅಂಥವರವಿವಾಹ ಬೇಗ ಜರುಗುತ್ತದೆ. ಶುಕ್ರನ ತರುವಾಯ ಗುರುವು ವಿವಾಹಕ್ಕೆ ಪೋಷಕ ಗ್ರಹವು ಏಕೆಂದರೆ ಗುರುವು ಸಂತತಿಕಾರಕ ಗ್ರಹವು ಆದುದರಿಂದ ಶುಕ್ರ ಗುರುಗಳು ಬಲಾಢ್ಯರಿದ್ದ ಜಾತಕರ ವಿವಾಹ ಬೇಗ ಜರಗುತ್ತದೆ. ಗುರು.ಶುಕ್ರರ ನಂತರ ಚಂದ್ರನ ಬಲಾಬಲ ಪರಿಶೀಲಿಸಬೇಕು ಚಂದ್ರನು ಬಲಾಢ್ಯ ನಿದ್ದ ಜಾತಕರ ವಿವಾಹ ಬೇಗ ಜರಗುತ್ತದೆ ಆದರೆ ಚಂದ್ರನು ದುರ್ಬಲ ನಿರ್ಬಲರಿದ್ದ ಜಾತಕರ ವಿವಾಹಕ್ಕೆ ತೊಂದರೆ ಬಹಳ. ವಿವಾಹಕ್ಕೆ ಮಾರಕ ಗ್ರಹಗಳೆಂದರೆ ಮಂಗಳ. ರಾಹು. ಕೇತು, ಶನಿ ಅನುಕ್ರಮವಾಗಿ ಮಾರಕರು. ಈ ಗ್ರಹಗಳು ಸಪ್ತಮ. ಪಂಚಮ, ಲಗ್ನ, ಚತುರ್ಥದಲ್ಲಿದ್ದ ಜಾತಕರ ವಿವಾಹವು ತಡವಾಗಿ ಆಗುತ್ತದೆ,

**2) ವಿವಾಹ ಹಾಗೂ ವೈವಾಹಿಕ ಜೀವನದ ಪೋಷಕ ಸ್ಥಾನಗಳು :**

ಯಾರೊಬ್ಬರ ವಿವಾಹ ಹೇಗಾಗುತ್ತದೆ ? ಬೇಗ ಆಗುತ್ತದೆಯೋ ತಡವಾಗಿ ಆಗುತ್ತದೆಯೋ ಹಾಗು ಅವರ ವೈವಾಹಿಕ ಜೀವನ ಹೇಗೆ ಇದೆ? ಎಂಬುದನ್ನು ತಿಳಿಯಲು ಜಾತಕದ ಸಪ್ತಮ ಸ್ಥಾನವನ್ನೇ ಪ್ರಮುಖವಾಗಿ ಪರಿಶೀಲಿಸಬೇಕಾಗುತ್ತದೆ. ಯಾರ ಸಪ್ತಮ ಸ್ಥಾನ ಪೂರಕವಿರುತ್ತದೆಯೋ ಆ ಜಾತಕನ ವಿವಾಹ ಬೇಗ ಜರುಗುತ್ತದೆ. ಪೂರಕ ಅಂದರೆ ಯಾರ ಸಪ್ತಮ ಸ್ಥಾನದಲ್ಲಿ ಶುಭ ಗ್ರಹಗಳಾದ ಶುಕ್ರ, ಗುರು, ಚಂದ್ರರು ಬಲಾಢ್ಯರಾಗಿತ್ತಾರೋ ಹಾಗೂ ಯಾರ ಸಪ್ತಮೇಶ ಬಲಾಢ್ಯನಿರುತ್ತಾನೋ ಅವರ ವಿವಾಹ ಬೇಗ ಜರುಗುತ್ತದೆ ಯಾರ ಸಪ್ತಮ ಸ್ಥಾನ ದೂಷಿತವಿದ್ದರೆ ಅವರ ವಿವಾಹ ತಡವಾಗಿಯೂ ತೊಂದರೆಯಿಂದಲೂ ಜರುಗುವದು ದೂಷಿತವೆಂದರೆ ಸಪ್ತಮ

ಸ್ಥಾನದಲ್ಲಿ ಪಾಪ ಗ್ರಹಗಳಾದ ಮಂಗಳ, ರಾಹು, ಶನಿ, ಕೇತು ಯಾವುದೇ ಗ್ರಹವಿದ್ದು. ಅಥವಾ ಗ್ರಹಗಳಿದ್ದು ಸಪ್ತಮೇಶನೂ ದುರ್ಬಲ ನಿರ್ಬಲನಿದ್ದ ಜಾತಕನ ವಿವಾಹ ತಡವಾಗಿಯೂ ತೊಂದರೆಯಿಂದಲೂ ಜರುಗುವುದು.

ಯಾರೊಬ್ಬರ ವಿವಾಹ ಹಾಗು ವೈವಾಹಿಕ ಜೀವನ ಹೇಗಿದೆ ಎಂಬುದನ್ನು ತಿಳಿಯಲು ಸಪ್ತಮದ ನಂತರ ಪಂಚಮಸ್ಥಾನವನ್ನು ಪರಿಶೀಲಿಸಬೇಕಾಗುತ್ತದೆ ಏಕೆಂದರೆ ಪಂಚಮಸ್ಥಾನವಿದು ಸಂತತಿಸ್ಥಾನವಿರುತ್ತದೆ. ಯಾರೊಬ್ಬರ ಸಂತಾನ ಹಾಗೂ ಸಂತತಿ ಸೌಖ್ಯದ ಬಗೆಗೆ ವಿಚಾರಿಸುವಾಗ ಪಂಚಮಸ್ಥಾನವನ್ನು ಪರಿಶೀಲಿಸಬೇಕಾಗುತ್ತದೆ. ಪಂಚಮದಲ್ಲಿ ಬಲಾಢ್ಯ ಗ್ರಹ ಹಾಗು ಪಂಚಮೇಶ ಬಲಾಢ್ಯರಿದ್ದರೆ ಸಂತತಿ ಸೌಖ್ಯಸಿಗುತ್ತದೆ. ವಿವಾಹದ ಉದ್ದೇಶಗಳಲ್ಲಿ ಪ್ರಜೋತ್ಪತ್ತಿಯು ಒಂದು ಉದ್ದೇಶ ಆದುದರಿಂದ ಯಾರೊಬ್ಬರ ವಿವಾಹದ ಬಗೆಗೆ ಪಂಚಮಸ್ಥಾನವನ್ನು ಪರಿಶೀಲಿಸಬೇಕಾಗುತ್ತದೆ. ವಿವಾಹ ಹಾಗು ವೈವಾಹಿಕ ಜೀವನದ ಬಗೆಗೆ ವಿಚಾರಿಸುವಾಗ ಸಪ್ತಮ, ಪಂಚಮ ಸ್ಥಾನಗಳ ನಂತರ ತನು ಸ್ಥಾನವನ್ನು ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ತನು ಸ್ಥಾನವಿದು ಸಪ್ತಮಸ್ಥಾನದ ಸಪ್ತಮದಲ್ಲಿರುವುದರಿಂದ ಲಗ್ನದಲ್ಲಿರುವ ಗ್ರಹಗಳ ನೇರದೃಷ್ಟಿ ಸಪ್ತಮದ ಮೇಲೆ ಬೀಳುವದರಿಂದ ವಿವಾಹ ಹಾಗೂ ವೈವಾಹಿಕ ಜೀವನದ ಮೇಲೆ ಆ ಗ್ರಹಗಳ ಪರಿಣಾಮವಾಗು ತ್ತದೆ. ಲಗ್ನದಲ್ಲಿ ಶುಭ ಗ್ರಹಗಳಿದ್ದರೆ ಶುಭ ಪರಿಣಾಮವು ಪಾಪ ಗ್ರಹಗಳಿದರೆ ಅಶುಭ ಪರಿಣಾಮವೂ ಆಗುತ್ತದೆ.

**3) ವಿವಾಹ ಹಾಗು ವೈವಾಹಿಕ ಜೀವನಕ್ಕೆ ಪೋಷಕವಿರುವ ಭಾವೇಶರ ಫಲ :** ಯಾರೊಬ್ಬ ಜಾತಕನ ವಿವಾಹ ಬೇಗ ಜರುಗಲು ಹಾಗೂ ವೈವಾಹಿಕ ಜೀವನ ಸುಖಕರವಾಗಿರಲು ಭಾವೇಶನ ಬಲಾಬಲದ ಮೇಲೆ ಅವಲಂಬಿಸಿರುತ್ತದೆ. ಆದರಲ್ಲಿಯೂ ಸಪ್ತಮೇಶ, ಪಂಚಮೇಶರು ಬಲಾಢ್ಯರಿದ್ದ ಜಾತಕನ ವಿವಾಹ ಬೇಗ ಜರುಗುವುದಲ್ಲದೇ ವೈವಾಹಿಕ ಜೀವನ ಸುಖಕರವಿರುತ್ತದೆ. ಆದರೆ ಅದೇ ಸಪ್ತಮೇಶ, ಪಂಚಮೇಶರು ದುರ್ಬಲ ನಿರ್ಬಲರಿದ್ದ ಜಾತಕನ ವಿವಾಹವು ತಡವಾಗಿಯೂ ತೊಂದರೆಯಿಂದಲೂ ಜರುಗುವುದಲ್ಲದೇ ವೈವಾಹಿಕ ಜೀವನ ಸುಖಕರವಿರುವುದಿಲ್ಲ.

**4) ವಿವಾಹ ಹಾಗೂ ವೈವಾಹಿಕ ಜೀವನದ ಪೋಷಕ ಲಗ್ನಗಳು:—** ನಿರ್ದಿಷ್ಟ ಲಗ್ನದವರ ವಿವಾಹ ಬೇಗ ಆಗುತ್ತದೆ. ಹಾಗೂ ವೈವಾಹಿಕ ಜೀವನ ಸುಖಕರವಿರುತ್ತದಿಲ್ಲವೆಂದು ಹೇಳಲು ಬಾರದಿದ್ದರೂ ಮೇಷ, ವೃಶ್ಚಿಕ, ಮಿಥುನ, ಕನ್ಯಾ, ಮಕರ ಈ ಲಗ್ನಗಳಿದ್ದು ಶುಕ್ರ, ಗುರು, ಚಂದ್ರರು ಬಲಾಢ್ಯರಾಗಿದ್ದ ಜಾತಕದವರ ವಿವಾಹ ಬೇಗ ಜರುಗುತ್ತದೆ ಹಾಗೂ ವೈವಾಹಿಕ ಜೀವನ ಸುಖಕರವಿರುತ್ತದೆ.

**5) ವಿವಾಹ ಹಾಗೂ ವೈವಾಹಿಕ ಜೀವನಕ್ಕೆ ಪೋಷಕ ಹಾಗೂ ಮಾರಕ ಯೋಗಗಳು**

**1)** ಶುಕ್ರ, ಗುರು, ಚಂದ್ರ ಸಪ್ತಮೇಶ, ಪಂಚಮೇಶರು ಬಲಾಢ್ಯರಿದ್ದ ಜಾತಕನ ವಿವಾಹ ಬೇಗ ಜರುಗುವುದಲ್ಲದೇ ವೈವಾಹಿಕ ಜೀವನ ಸುಖಕರವಿರುತ್ತದೆ.

**2)** ಸಪ್ತಮೇಶ, ಶುಕ್ರ, ಪಂಚಮೇಶ, ಗುರು, ಈ ನಾಲ್ಕು ಗ್ರಹಗಳು ಬಲಾಢ್ಯರಿದ್ದ ಜಾತಕನ ವಿವಾಹ ಬೇಗ ಜರುಗುವುದು ಹಾಗೂ ವೈವಾಹಿಕ ಜೀವನ ಸುಖಕರವಿರುತ್ತದೆ

**3)** ಶನಿ–ಮಂಗಳ, ಶನಿ–ಚಂದ್ರ, ಶನಿ–ರವಿ, ರವಿ–ಕೇತು ಚಂದ್ರ–ರಾಹು ರಾಹು–ಮಂಗಳ ಈ ಗ್ರಹಗಳ ಯುತಿಯೋಗವು ಗ್ರಹಯೋಗವು ಸಮಸಪ್ತಕ ಯೋಗವು ಸಪ್ತಮ, ಲಗ್ನ, ಚತುರ್ಥ,ದಶಮ, ಪಂಚಮ,ಲಾಭ, ಈ ಯಾವುದೊಂದು ಸ್ಥಾನದಲ್ಲಿದ್ದ ಜಾತಕನ ವಿವಾಹ ತಡವಾಗಿ ಜರುಗುವು ದಲ್ಲದೇ ವೈವಾಹಿಕ ಜೀವನ ಸುಖಕರವಿರುವುದಿಲ್ಲ.

**4)** ಲಗ್ನ, ಚತುರ್ಥ ಸಪ್ತಮದಲ್ಲಿ ಪಾಪ ಗ್ರಹಗಳಿದ್ದ ಜಾತಕನ ವಿವಾಹವು ತಡವಾಗಿಯೂ ಜರುಗುವುದಲ್ಲದೇ ವೈವಾಹಿಕ ಜೀವನ ಸುಖಕರವಿರುವುದಿಲ್ಲ.

5) ಗುರು ಚಂದ್ರ, ಗುರು ಶುಕ್ರ, ಚಂದ್ರ ಶುಕ್ರರು ಬಲಾಢ್ಯರಿದ್ದು ಅವರ ಯುತಿ ಯೋಗ ಪ್ರತಿಯೋಗ ಲಗ್ನ, ಸಪ್ತಮ, ಚತುರ್ಥ, ದಶಮ,ಪಂಚಮ,

ಲಾಭ ಈ ಯಾವದೊಂದು ಸ್ಥಾನದಲ್ಲಿದ್ದು ಜಾತಕನ ವಿವಾಹವು ಬೇಗ ಜರಗುತ್ತದೆ ಹಾಗೂ ವೈವಾಹಿಕ ಜೀವನ ಸುಖಕರ ವಿರುತ್ತದೆ.

6) ಚತುರ್ಥದಲ್ಲಿ ಮಂಗಳ ಸಪ್ತದಲ್ಲಿ ಶನಿ ಅಥವಾ ಲಗ್ನದಲ್ಲಿ ಮಂಗಳ ಸಪ್ತಮ ಇಲ್ಲವೆ ಚತುರ್ಥದಲ್ಲಿ ಶನಿ ಅಥವಾ ಚತುರ್ಥದಲ್ಲಿ ಮಂಗಳ ಸಪ್ತಮದಲ್ಲಿ ರಾಹು ಈ ಯಾವದೊಂದು ಯೋಗದಲ್ಲಿ ಜನಿಸಿದ ಜಾತಕನ ವಿವಾಹ ತಡವಾಗಿ ಜರುಗುವುದಲ್ಲದೇ ವೈವಾಹಿಕ ಜೀವನ ಸುಖಕರವಾಗಿರುವದಿಲ್ಲ.

7] ಲಗ್ನ, ಚತುರ್ಥ, ಸಪ್ತಮದಲ್ಲಿ ಶುಭ ಗ್ರಹವಿದ್ದು ಸಪ್ತಮೇಶನು ಬಲಾಢ್ಯನಿದ್ದ ಜಾತಕನ ವಿವಾಹ ಬೇಗ ಜರಗುವದಲ್ಲದೇ ವೈವಾಹಿಕ ಜೀವನ ಸುಖಕರವಿರುತ್ತದೆ.

8) ಬಲಾಢ್ಯ ಮಂಗಳನು ಲಗ್ನ, ಚತುರ್ಥ, ಸಪ್ತಮ ಅಷ್ಟಮ ವ್ಯಯ ಈ ಐದು 'ಸ್ಥಾನದಲ್ಲಿ' ಜಾತಕನ ವಿವಾಹವು ತಡವಾಗಿಯೂ ತೊಂದರೆಯಿಂದಲೂ ಜರುಗುತ್ತದೆ. ಮೇಲೆ ಬರೆದ ಐದು ಸ್ಥಾನಗಳಲ್ಲಿ ಮಂಗಳ ಇರುವಿಕೆ ಅಂದರೆ ಕುಜ ದೋಷದ ಜಾತಕವು.

9) ಕೃತ್ತಿಕಾ, ಆಶ್ಲೇಷಾ, ಮಘಾ, ಚಿತ್ರಾ, ವಿಶಾಖ ಜೇಷ್ಠಾ ಮೂಲಾ ಈ ಏಳು ನಕ್ಷತ್ರದಲ್ಲಿ ಜನಿಸಿದ ಜಾತಕನ ವಿವಾಹವು ತಡವಾಗಿ ಜರುಗುತ್ತದೆ

10) ಜಾತಕದಲ್ಲಿ ಬಲಾಢ್ಯ ಸಪ್ತಮೇಶ ಅಥವಾ ಬಲಾಢ್ಯ ಪಂಚಮೇಶನಿದ್ದು ವಯಸ್ಸಿನ 25ರವರೆಗೆ ಅವರದೇ ಮಹರ್ದಶಿ ಅಂತರ್ದಶಿ ನಡೆಯುತ್ತಿದ್ದರೆ ಅವರ ವಿವಾಹ ಬೇಗ ಜರುಗುತ್ತದೆ.

1) **ವಿವಾಹ ಹೇಗಾಗುತ್ತದೆ ?** ಶೀಘ್ರವಾಗಿ ಹಾಗೂ ತಡವಾಗಿ ವಿವಾಹವಾಗುವ ಯೋಗಗಳ ಬಗೆಗೆ ಸಂಕ್ಷಿಪ್ತವಾಗಿ ವಿವರಿಸಿದ್ದಾಯಿತು. ಇನ್ನು ಯಾರೊಬ್ಬರ ವಿವಾಹ ಹೇಗಾಗುತ್ತದೆ ಎಂಬುದನ್ನು ಮೊದಲು ವಿವರಿಸುವಾ ಏಕೆಂದರೆ ಹಿಂದಿನ ಪುಟದಲ್ಲಿ ವಿವರಿಸಿದಂತೆ ಇತ್ತೀಚಿಗೆ ವಧೂವರರೇ ನೇರವಾಗಿ ತಮ್ಮ ವಿವಾಹ ಹೇಗಾಗುತ್ತದೆ. ತಮ್ಮ ಇಚ್ಛೆಯಂತೆ ತಾವು ನೋಡಿದ ತಾವು ಪ್ರೇಮಿಸಿದ ವ್ಯಕ್ತಿಯೊಂದಿಗೆ ಜರುಗುತ್ತದೆಯೋ ಅಥವಾ ತಂದೆ-ತಾಯಿಗಳು

ಪಾಲಕರು ನೋಡಿದ ವ್ಯಕ್ತಿಯೊಂದಿಗೆ ಜರುಗುತ್ತದೆಯೋ ಎಂದು ಅನೇಕರು ವಿಚಾರಿಸುತ್ತಿರುವುದರಿಂದ ಈ ಪ್ರಶ್ನೆಗೆ ಪ್ರಥಮ ಪ್ರಾಶಸ್ತ್ಯಕೊಟ್ಟು ವಿವರಿಸುತ್ತಿದ್ದೇವೆ.

1] ಚಂದ್ರ— ಮಂಗಳ. ಚಂದ್ರ— ಶನಿ ಚಂದ್ರ—ರಾಹು ಶುಕ್ರ— ಶನಿ ಶುಕ್ರ–ಮಂಗಳ ಇವರ ಯುತಿ ಯೋಗವು ಲಗ್ನ ಪಂಚಮ, ಸಪ್ತಮ,ಅಷ್ಟಮ ವ್ಯಯ ಈ ಯಾವುದೊಂದು ಸ್ಥಾನದಲ್ಲಿದ್ದ ಜಾತಕನಿಗೆ ಬಳಗದಲ್ಲಿ ಸಂಬಂಧ ಅಥವಾ ತೀರ ಪರಿಚಿತ ಅಥವಾ ಸಹಪಾಠಿ ಅಥವಾ ನೆರೆಹೊರೆಯ ಅದೆ ಊರಿನ ಅಥವಾ ಒಂದೇ ಸಂಸ್ಥೆ ಒಂದೇ ಖಾತೆಯಲ್ಲಿ ಕೂಡಿ ಕೆಲಸಮಾಡುವ ಅಥವಾ ಪ್ರೇಮ ವಿವಾಹ ಜರಗುತ್ತದೆ,

2) ಶನಿ–ಚಂದ್ರ ಶನಿ–ಶುಕ್ರ ಚಂದ್ರ–ಮಂಗಳ ಶುಕ್ರ–ಮಂಗಳ ಈ ಗ್ರಹಗಳ ಪ್ರತಿಯೋಗವು ಲಗ್ನ, ಸಪ್ತಮ, ಲಾಭ–ಪಂಚಮ–ದ್ವಿತೀಯ–ಅಷ್ಟಮ–ಷಷ್ಠ ವ್ಯಯ ಈ ಸ್ಥಾನಗಳಲ್ಲಿ ಆದರೆ ಗುರುತು ಪರಿಚಿತ ಬಳಗದಲ್ಲಿಯ ಸಂಬಂಧ ಜರುಗುತ್ತದೆ ಅಥವಾ ಸಹಪಾಠಿ ಕೂಡಿ ಕೆಲಸ ಮಾಡುವ ಅದೇ ಊರಿನ ನೆರೆಹೊರೆಯ ಅಥವಾ ಪ್ರೇಮವಿವಾಹ ಜರುಗುತ್ತದೆ.

3) ಚಂದ್ರನು ಲಗ್ನ. ಪಂಚಮ, ಸಪ್ತಮ, ಅಷ್ಟಮ, ವ್ಯಯ ಈ ಯಾವುದೊಂದು ಸ್ಥಾನದಲ್ಲಿದ್ದ ಶನಿ ಇಲ್ಲವೇ ಮಂಗಳನಿಂದ ನೋಡಲ್ಪಡುತ್ತಿದ್ದ ವ್ಯಕ್ತಿಗಳ ವಿವಾಹವು ಮೇಲಿನಂತೆಯೇ ಅಂದರೆ ಗುರುತು, ಪರಿಚಯ ಬಳಗ ಅಥವಾ ನೆರೆಹೊರೆಯ ಅದೇ ಊರಿನ ಅಥವಾ ಸಹಪಾಠಿ ಯಾವುದೊಂದು ಸಂಸ್ಥಾ ಖಾತೆಯಲ್ಲಿ ಕೂಡಿ ಕೆಲಸ ಮಾಡುವ ಅಥವಾ ಪ್ರೇಮ ವಿವಾಹ ಜರಗುತ್ತದ.

4) ಶುಕ್ರನು ಲಗ್ನ. ಪಂಚಮ,ಸಪ್ತಮ. ಅಷ್ಟಮ, ವ್ಯಯ ಈ ಯಾವುದೊಂದು ಸ್ಥಾನದಲ್ಲಿದ್ದು ಶನಿ ಇಲ್ಲವೇ ಮಂಗಳನಿಂದ ನೋಡಲ್ ಪಡುತ್ತಿದ್ದರೆ. ಇಂಥ ವ್ಯಕ್ತಿಗಳ ವಿವಾಹವು ಗುರುತು ಪರಿಚಿತ ಬಳಗದಲ್ಲಿಯ ಅಥವಾ ನೆರೆಹೊರೆಯ ಅದೇ ಊರಿನ ಅಥವಾ ಸಹಪಾಠಿ ಒಂದೇ ಸಂಸ್ಥೆಯಲ್ಲಿ ಒಂದೇ

ಬಾತೆಯಲ್ಲಿ ಕೂಡಿ ಕೆಲಸ ಮಾಡುತ್ತಿರುವ ವ್ಯಕ್ತಿಯೊಂದಿಗೆ ವಿವಾಹ ಜರುಗುತ್ತದೆ. ಹೀಗೆ ನಾಲ್ಕು ಯೋಗಗಳಲ್ಲಿ ಜನಿಸಿದ ವಧೂವರರ ವಿವಾಹವು ಇಚ್ಛೆಯಪ್ರಕಾರ ಜರುಗುತ್ತದೆ. ಇದು ಪ್ರೇಮ ವಿವಾಹವು ಆಗಬಹುದು. ಬಳಗದಲ್ಲಿ ಸಂಬಂಧವು ಆಗಬಹುದು ಅಥವಾ ತೀರ ಪರಿಚಿತರೊಂದಿಗೆ ಆಗಬಹುದು ಅಥವಾ ತಂದೆ-ತಾಯಿ ಹಾಗೂ ವಧೂ–ವರರಿಬ್ಬರ ಒಪ್ಪಿಗೆ ಒಂದೇ ಆಗಿರಬಹುದು.

ಯಾರ ಜಾತಕದಲ್ಲಿ ರವಿ. ಮಂಗಳ, ಗುರುಗಳು ನಿರ್ಬಲರಿದ್ದು ಚಂದ್ರ ಶುಕ್ರ ಶನಿಯರು ಬಲಾಢ್ಯರಿದ್ದ ಅಥವಾ ಅನೇಕ ಗ್ರಹಗಳು ಸ್ತ್ರೀ ರಾಶಿಯಲ್ಲಿ ಅಥವಾ ಲಗ್ನೇಶ ಮತ್ತು ಚಂದ್ರ ಸ್ತ್ರೀ ರಾಶಿಯಲ್ಲಿದ್ದು ರವಿ–ಮಂಗಳರು ದುರ್ಬಲರಿರುವ ವಧೂ–ವರರ ತಂದೆ–ತಾಯಿಗಳು ಸೂಚಿಸಿದ ವಧೂ ವರರನ್ನೆ ವಿವಾಹ ಮಾಡಿಕೊಳುತ್ತಾರೆ. ಇಲ್ಲಿ ವಧೂ–ವರರ ಇಚ್ಛೆಯಂತೆ ವಿವಾಹ ಜರುಗದೇ ತಂದೆ–ತಾಯಿಗಳ ಇಚ್ಛೆಯಂತೆ ವಿವಾಹ ಜರಗುತ್ತದೆ.ಇದು ಅಲ್ಲದೇ ಮೇಲೆ ಬರೆದ ಯೋಗಗಳು ವಧೂ–ವರರಲ್ಲಿದ್ದು ಅವರ ಪಾಲಕರ ತಂದೆ–ತಾಯಿಗಳ ಜಾತಕದಲ್ಲಿ ಅನೇಕ ಗ್ರಹಗಳು ಪುರುಷ ರಾಶಿಯಲ್ಲಿ ಅಥವಾ ರವಿ, ಮಂಗಳ, ಗುರುಗಳು ಪುರುಷ ರಾಶಿಯಲ್ಲಿದ್ದು ಲಗ್ನೇಶ ಹಾಗೂ ಚಂದ್ರ ಪುರುಷ ರಾಶಿಯಲ್ಲಿದ್ದ ಅಂಥ ತಂದೆ–ತಾಯಿಗಳು ತಮ್ಮ ಇಚ್ಛೆಯಂತೆ ತಾವು ಒಪ್ಪಿದ ವಧೂ–ವರರನ್ನು ತಮ್ಮ ಮಕ್ಕಳಿಗೆ ಬಲಾತ್ಕಾರವಾಗಿ ವಿವಾಹ ವಾಗಲು ಆದೇಶಿಸುತ್ತಾರೆ ಹಾಗೂ ಆ ಮಕ್ಕಳು ಅದನ್ನು ಪಾಲಿಸುತ್ತಾರೆ

3) **ಭಾವೀ ಪತಿ—ಪತ್ನೀ ಹೇಗೆ :—** ವಧೂ–ವರರು ತಾವೇ ಪ್ರಶ್ನಿಸು ಎರಡನೇ ಪ್ರಶ್ನೆ ಎಂದರೆ ತಮ್ಮ ಭಾವಿ ಪತಿ–ಪತ್ನೀ ಹೇಗೆ ? ಇದಕ್ಕೆ ಸಂಕ್ಷೀಪ್ತವಾಗಿ ಉತ್ತರಿಸಲಾಗುತ್ತದೆ. ಏಕೆಂದರೆ ಈ ವಿಷಯವಾಗಿ ನಾವು ಈಗಾಗಲೆ ಬರೆದು ಪ್ರಕಟಿಸಿರುವ ವಧೂ–ವರರ ಜ್ಯೋತಿಷ್ಯ ಹಾಗೂ ಸ್ತ್ರೀ ಜ್ಯೋತಿಷ್ಯ ಈ ಎರಡು ಗ್ರಂಥಗಳಲ್ಲಿ ವಿವರ ವಿವರವಾಗಿ ವಿವೇಚಿಸಿದೆ ಆದಾಗ್ಯೂ ಆ ಗ್ರಂಥಗಳಲ್ಲಿ ಬಿಟ್ಟ ಕೆಲ ವಿಷಯಗಳನ್ನು ಮಾತ್ರ ಇಲ್ಲಿ ವಿವರಿಸಲಾಗಿದೆ.

(1)ಯಾರ ಜಾತಕದಲ್ಲಿ ರವಿಯು ಬಲಾಢ್ಯನಾಗಿ ಸಪ್ತಮದಲ್ಲಿರುವನೋ ಅಥವಾ ರವಿಯು ಸಪ್ತಮೇಶನಾಗಿ ಬಲಾಢ್ಯನಿರುವನೋ ಅಂಥ ಜಾತಕರ ಭಾವಿ ಪತಿ-ಪತ್ನಿಯರು ಸಧೃಢ ಪ್ರಕೃತಿಯರು, ಅಧಿಕಾರಿಗಳು ವಿಧ್ಯಾವಂತರರು,ಡಾಕ್ಟರ, ವಕೀಲ,ಇಂಜನೀಯರ, ನ್ಯಾಯವಾದಿಗಳು, ಅಧ್ಯಾಪಕರಿರುತ್ತಾರೆ. ಅಥವಾ ಅವರ ಮಕ್ಕಳಿರುತ್ತಾರೆ. ಇನ್ನೊಂದು ಮಹತ್ವದ ಅಂಶವೆಂದರೆ ರವಿಯು ಸಪ್ತಮೇಶನಾಗಿ ಬಲಾಢ್ಯನಿರಲಿ ಅಥವಾ ಬಲಾಢ್ಯನಾಗಿ ಸಪ್ತಮದಲ್ಲಿರಲಿ ಇವರ ಜೇಷ್ಠ ಪುತ್ರ, ಜೇಷ್ಠಪುತ್ರಿ ಅಥವಾ ಮನೆಯಲ್ಲಿ ಇವರದೇ ಕಾರಭಾರ ಅಥವಾ ಇವರಿಗೆ ಮಹತ್ವ ಬಹಳ.

(2) ಯಾರ ಜಾತಕದಲ್ಲಿಚಂದ್ರ ಅಥವಾ ಶುಕ್ರರು ಬಲಾಢ್ಯರಾಗಿ ಸಪ್ತಮದಲ್ಲಿರುತ್ತಾರೋ ಅಥವಾ ಸಪ್ತಮೇಶನಾಗಿ ಬಲಾಢ್ಯರಿರುತ್ತಾರೋ ಅಂಥ ಜಾತಕರಭಾವಿಪತಿ-ಪತ್ನಿಯರು ರೂಪವಂತರೂ ಸೌಂದರ್ಯವಂತರೂ ಆಕರ್ಷಕ ವ್ಯಕ್ತಿತ್ವಉಳ್ಳವರು ರೂಪ-ಸೌಂದರ್ಯದಲ್ಲಿ ರತಿದೇವಿ ಕಾಮನಂತೆ ಇರುತ್ತಾರೆ. ಉಳಿದೆಲ್ಲ ಗುಣಗಳಿಗಿಂತ ರೂಪ, ಸೌಂದರ್ಯ ಪ್ರದಾನ ಅಂಶವಿರುತ್ತದೆ.

3) ಯಾರಜಾತಕದ ಸಪ್ತಮದಲ್ಲಿ ಬಲಾಢ್ಯ ಬುಧನಿದ್ದರೆಅಥವಾ ಬುಧನ ಸಪ್ತಮೇಶನಾಗಿ ಬಲಾಢ್ಯನಿದ್ದರೆ ಸ್ವತಂತ್ರ ಉದ್ಯೋಗಸ್ಥನು ಇದ್ದು ಕಿರಿಯ ವಯಸ್ಸಿನವರಿರುತ್ತಾನೆ. ಆದರೆ ಸಪ್ತಮದಲ್ಲಿ ಬಲಾಢ್ಯ ಗುರುವಿದ್ದರೆ ಅಥವಾ ಗುರುವು ಸಪ್ತಮೇಶನಾಗಿ ಬಲಾಢ್ಯನಾಗಿದ್ದರೆ ಇಂಥ ಜಾತಕರ ವಿವಾಹ ಬೇಗ ಆಗುತ್ತದೆ. ವೈವಾಹಿಕ ಜೀವನ ಸುಖಕರ ವಿರುತ್ತದೆ. ಇವರಭಾವಿ ಪತಿ ಅಥವಾ ಪತ್ನಿ ಬುದ್ಧಿವಾನ ವಿಧ್ವಾಸರಿರುತ್ತಾರೆ.

4) ಯಾರ ಜಾತಕದಲ್ಲಿ ಸಪ್ತಮದಲ್ಲಿ ಬಲಾಢ್ಯ ಶನಿ ಅಥವಾ ಕೇತು ಇರುತ್ತಾನೋ ಅಥವಾ ಶನಿಯು ಕೇತುಗಳು ಸಪ್ತಮೇಶನಾಗಿ ಬಲಾಢ್ಯನಿದ್ದರೆ ಇವರ ಭಾವಿ ಪತಿ ಅಥವಾ ಪತ್ನಿಯು ಬಣ್ಣ ಕುಸು ಕಪ್ಪು ಇರುತ್ತದೆ ಹಾಗೂ ಹೆಚ್ಚು ವಯಸ್ಸಾದವರು ಇರುತ್ತಾರೆ.

5) ಯಾರ ಜಾತಕದಲ್ಲಿ ಬಲಾಢ್ಯ ರಾಹುಇಲ್ಲವೇ ಮಂಗಳರು ಸಪ್ತಮದಲ್ಲಿದ್ದರೆಅಥವಾ ಸಪ್ತಮೇಶರಾಗಿ ಬಲಾಢ್ಯರಾಗಿದ್ದರೆ ಇಂಥ ಜಾತಕರ ಭಾವಿ ಪತಿ

ಅಥವಾ ಪತ್ನಿಯು ಸ್ವತಂತ್ರ ಉದ್ಯೋಗಸ್ಥ ಹಾಗೂ ತುಸು ಜಗಳಗಂಟಿಯರು ತ್ತಾರೆ ಹೀಗೆ ಭಾವಿ ಪತಿ, ಪತ್ನಿ ಹೇಗಿರುತ್ತಾರೆ ಎಂಬುದರ ಸಂಕ್ಷಿಪ್ತ ವಿವರ ವಿರುತ್ತದೆ.

3] **ವೈವಾಹಿಕ ಜೀವನ ಹೇಗೆ ?** ಯಾರೊಬ್ಬರ ವೈವಾಹಿಕ ಜೀವನ ಸುಖಕರವಿರುವುದಿಲ್ಲ ಎಂಬುದನ್ನು ತಿಳಿದುಕೊಳ್ಳಲು ಜಾತಕದ ಅನೇಕ ಸ್ಥಾನಗಳನ್ನು ಅನೇಕ ಗ್ರಹಗಳ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಯಾರೊಬ್ಬರ ವಿವಾಹ ಬೇಗ ಜರುಗುವುದೋ ? ತಡವಾಗಿ ಜರುಗುವುದೋ ಎಂಬುದನ್ನು ತಿಳಿಯಲು ಹಿಂದಿನ ಪುಟದಲ್ಲಿ ವಿವರಿಸಿದಂತೆ ಸಪ್ತಮ ಸ್ಥಾನ, ಪಂಚಮಸ್ಥಾನ ಹಾಗೂ ಆ ಎರಡು ಸ್ಥಾನಗಳಲ್ಲಿರುವ ಗ್ರಹಗಳ ಬಲಾಬಲ ಮತ್ತು ಆ ಎರಡು ಸ್ಥಾನಾಧೀಶರ ಬಲಾಬಲ ಮಾತ್ರ ಪರಿಶೀಲಿಸಿದರೆ ಸಾಕು ಲಗ್ನದಲ್ಲಿರುವ ಗ್ರಹಗಳ ನೇರ ದೃಷ್ಟಿ ಸಪ್ತಮದ ಮೇಲೆ ಬೀಳುವುದರಿಂದ ವಿವಾಹ ಬೇಗ ಹಾಗೂ ತಡವಾಗಿ ಜರುಗಲು ಕಾರಣವಾಗುತ್ತದೆ ವಿನಃ ನೇರ ಸಂಬಂಧವಿರುವುದಿಲ್ಲ. ಆದರೆ ಯಾರೊಬ್ಬರ ವೈವಾಹಿಕ ಜೀವನ ಸುಖಕರ ಇಲ್ಲದಿರುವುದಕ್ಕೆ ಅನೇಕ ಸ್ಥಾನಗಳನ್ನು ಅನೇಕ ಗ್ರಹಗಳನ್ನು ಅನೇಕ ಯೋಗಗಳನ್ನು ಪರಿಶೀಲಿಸಬೇಕಾಗುತ್ತದೆ, ಇವುಗಳ ವಿವರಣೆ ಈ ಕೆಳಗಿನಂತಿದೆ.

1) ಯಾರ ಜಾತಕನ ಚತುರ್ಥ, ಪಂಚಮ, ಸಪ್ತಮ, ಸ್ಥಾನಗಳು ದೂಷಿತ ವಿರುವುವೋ ಅವರ ವೈವಾಹಿಕ ಜೀವನ ಸುಖಕರವಿರುವುದಿಲ್ಲ. ದುಷಿತ ವೆಂದರೆ ಆ ಸ್ಥಾನಗಳಲ್ಲಿ ದುರ್ಬಲ, ನಿರ್ಬಲ, ಶತೃಕ್ಷೇತ್ರಗಳಲ್ಲಿಯ ಗ್ರಹ ಇರುವಿಕೆ ಹಾಗೂ ಆ ಸ್ಥಾನಾಧೀಶರು ದುರ್ಬಲ ನಿರ್ಬಲ ಇರುವಿಕೆ.

2) ಶನಿ, ಮಂಗಳ, ರಾಹು, ಈ ಗ್ರಹಗಳು ಸ್ಥಾನಾಧೀಶರದ ಪಂಚಮ, ಸಪ್ತಮ, ಅಷ್ಟಮ, ಈ ಸ್ಥಾನಗಳಲ್ಲಿದ್ದ ಜಾತಕನ ವೈವಾಹಿಕ ಜೀವನ ಸುಖಕರವಿರುವುದಿಲ್ಲ.

3) ಲಗ್ನದಲ್ಲಿ ಶನಿ–ಮಂಗಳ, ರಾಹು ಗ್ರಹಗಳಿದ್ದ ಜಾತಕನ ವೈವಾಹಿಕ ಜೀವನ ಸುಖಕರವಿರುವುದಿಲ್ಲ.

4) ಶನಿ–ಮಂಗಳ, ಶನಿ–ರವಿ, ಶನಿ–ಚಂದ್ರ, ಮಂಗಳ–ರಾಹು, ರವಿ–ಕೇತು, ಚಂದ್ರ-ರಾಹು ಈ ಗ್ರಹಗಳ ಯುತಿಯೋಗವು ಲಗ್ನ, ಪಂಚಮ, ಸಪ್ತಮ, ಅಷ್ಟಮ, ಚತುರ್ಥ, ಈ ಯಾವುದೊಂದು ಸ್ಥಾನದಲ್ಲಿ ಇದ್ದರೆ ಇಂಥ ಜಾತಕನ ವೈವಾಹಿಕ ಜೀವನ ಸುಖಕರವಿರುವುದಿಲ್ಲ.

5) ಶನಿ-ಮಂಗಳ, ಶನಿ-ರವಿ, ಶನಿ–ಚಂದ್ರ ರವಿ–ಕೇತು, ಮಂಗಳ–ರಾಹು, ಈ ಗ್ರಹಗಳ ಪ್ರತಿಯೋಗವು ಲಗ್ನ–ಸಪ್ತಮ, ಚತುರ್ಥ–ದಶಮ, ಲಾಭ-ಪಂಚಮ, ದಶಮ–ಅಷ್ಟಮ ಈ ಸ್ಥಾನಗಳಲ್ಲಿದ್ದ ಜಾತಕನ ವೈವಾಹಿಕ ಜೀವನ ಸುಖಕರವಿರುವುದಿಲ್ಲ. 6) ಚತುರ್ಥದಲ್ಲಿ ಪಾಪ ಗ್ರಹಗಳಿದ್ದರೆ ಇವರ ವೈವಾಹಿಕ ಜೀವನ ಸುಖಕರವಿರುವುದಿಲ್ಲ.

ಯಾರೊಬ್ಬರ ವೈವಾಹಿಕ ಜೀವನ ಸುಖಕರವಿರುವುದಿಲ್ಲವೆಂದರೆ ಪತಿ–ಪತ್ನಿಯರಲ್ಲಿ ಹೊಂದಾಣಿಕೆ ಇರುವುದಿಲ್ಲ ಯಾವುದೊಂದು ವಿಷಯದ ಮೇಲೆ ಮಾತ ಭೇದವಿರುತ್ತದೆ. ತನ್ ಮೂಲಕ ನಿತ್ಯ ಕಲಹ, ಜಗಳ ಮನಸ್ತಾಪವಾಗುತ್ತದೆ. ಪತಿ-ಪತ್ನಿಯರಲ್ಲಿಯಾರೊಬ್ಬರ ಮೇಲಿಂದ ಮೇಲೆ ಆಜಾರಿ ಬೀಳುವಿಕೆ ಅಪರಿಹಾರವಾಗದ ಬೇನೆ ಇರುವಿಕೆ, ಯಾರೊಬ್ಬರು ಅಥವಾ ಇಬ್ಬರು ಹಟವಾದಿ, ಶೀಘ್ರಕೋಪಿ ಅಹಂಮನ್ಯ, ಏನೇ ಸಾಚಾ ತನ್ನದೇ ಖರೆ ಎಂದುವಾದಿಸುವಿಕೆ, ಸಾಧಿಸುವಿಕೆ, ಪ್ರತಿಪಾದಿಸುವಿಕೆ, ಅಥವಾ ಕೌಟುಂಬಿಕ ಹೊಣೆಗಾರಿಕೆ ಜವಾಬದಾರಿಕೆಯನ್ನು ಇಬ್ಬರೂ ಕೂಡಿ ನೆರವೇರಿಸದೇ ಒಬ್ಬರಿಗೆ ಹಚ್ಚುವಿಕೆ ಇಬ್ಬರಲ್ಲಿ ಒಬ್ಬರು ಅತಿಮಿತವ್ಯಯ, ದಿಂದ ಸಂಸಾರ ನಡೆಸಲು ಪ್ರಯತ್ನಿಸುತ್ತಿದ್ದರೆ ಇನ್ನೊಬ್ಬರು ಧಾರಾಳವಾಗಿ ಖರ್ಚು ಮಾಡುವ ವಿಲಾಸಮಯ ಖರ್ಚು ಮಾಡುವ ಅನವಶ್ಯಕವಾಗಿ ಖರ್ಚು ಮಾಡುವ ಸ್ವಭಾವದವರಿರುವಿಕೆ ಕಲೆ, ಸಾಹಿತ್ಯ, ಕ್ರೀಡೆ, ನಾಟಕ ಸಿನೇಮಾ ರಾಜಕೀಯ, ಸಾಂಸ್ಕೃತ ವಿಷಯಗಳಲ್ಲಿ ವಿರುದ್ಧ ಗುಣ ಸ್ವಭಾವ ದವರಿರುವಿಕೆ, ಒಬ್ಬರು ಉಡುಗೆ ತೊಡುಗೆಗಳಲ್ಲಿ ಅಚ್ಚುಕಟ್ಟುತನ, ಶಿಸ್ತು ಸ್ವಚ್ಛ ಇದ್ದರೆ ಇನ್ನೊಬ್ಬರು ಅಸ್ತವ್ಯಸ್ತ ಗಬಾಳ ಇದಲ್ಲದೆ ಯಾರೊಬ್ಬರು

ವ್ಯಸನಾಧೀನರಾಗುವಿಕೆ, ಅಥವಾ ಶಿಕ್ಷಣದಲ್ಲಿ ಒಬ್ಬರು ಹೆಚ್ಚು ಕಲಿತವರು ಇನ್ನೊಬ್ಬರು ಏನೂ ಕಲಿಯದೇ ಇದ್ದವರು, ಒಬ್ಬರು ಸುರದ್ರೂಪಿ ಸುಂದರ ಗೌರವರ್ಣ ಆಕರ್ಷಕ ವ್ಯಕ್ತಿತ್ವವಿದ್ದರೆ ಇನ್ನೊಬ್ಬರದು ಇದರ ತದ್ವಿರುದ್ಧ ಅಲ್ಲದೇ ಅತ್ತೆ, ಮಾವ, ಭಾವ, ಮೈದುನ, ನಾದಿನಿ, ನೆಗೆಣ್ಣಿಯರ ಕಾಟ, ಅಣ್ಣ, ತಮ್ಮಂದಿರ ಅಕ್ಕಂದಿರ ಕಾಟ ತಂದೆ-ತಾಯಿಗಳೊಂದಿಗೆ ಮೊದಲಾದ ಬಂಧು-ಬಳಗದವರಲ್ಲಿಯ ವೈಮನಸ್ಸು ಅಥವಾ ಇಬ್ಬರೂ ನೌಕರಿ-ಉದ್ಯೋಗ ಮಾಡುತ್ತಿದ್ದರೆ ಅಥವಾ ಇಬ್ಬರೂ ಶ್ರೀಮಂತ ಮನೆತನದಿಂದ ಬಂದಿದ್ದರೆ ಅಥವಾ ಇಬ್ಬರು ಅಧಿಕಾರಿಗಳಿದ್ದರೆ ಅಥವಾ ಸರಿಸಮಾನ ಶಿಕ್ಷಣ ಪದವಿ ಪಡೆದಿದ್ದರೆ ಹೀಗೆ ಅನೇಕ ಕಾರಣಗಳಿಂದ ಪತಿ-ಪತ್ನಿಯರಲ್ಲಿ ವಿಚಾರ ಭೇದ ಮತಭೇದದಿಂದ ಭಿನ್ನಾಭಿಪ್ರಾಯ ಉಂಟಾಗುತ್ತದೆ. ಇವುಗಳನ್ನು ಹೊಂದಾಣಿಕೆಯ ಮನೋವೃತ್ತಿಯಿಂದಲೂ ಸಹನಶೀಲತೆಯಿಂದಲೂ ವ್ರತ, ನಿಯಮ ಉಪಾಸನೆಗಳಿಂದಲೂ ತೊಂದರೆಗಳು ನಿವಾರಣೆಯಾಗುತ್ತವೆ. ಆದರೆ ಇಬ್ಬರಲ್ಲಿ ಒಬ್ಬರಿಗೆ ಅಪರಿಹಾರವಾಗದ ಬೇನೆ ಉದಾ— ನಪುಂಸಕತನ ಮೂಲರೋಗ ಬರುವಿಕೆ ಮೊದಲಾದವುಗಳಿಂದಲೂ ಪತಿ-ಪತ್ನಿಯರಲ್ಲಿ ಯಾರೊಬ್ಬರು ಪರಪುರುಷ, ಪರಸ್ತ್ರೀಯರೊಂದಿಗೆ ಅನೈತಿಕ ಸಂಬಂಧ ಬೆಳೆಸಿಕೊಂಡಿದ್ದರೆ ಅಥವಾ ವೈಧವ್ಯಯೋಗ ವಿದುರಯೋಗ ಘಟಸ್ಫೋಟಗಳಂಥ ಬಹಳ ಅಶುಭಯೋಗಗಳಿದ್ದರೆ ವೈವಾಹಿಕ ಜೀವನಕ್ಕೆ ತೊಂದರೆಯಾಗುತ್ತದೆ.

ಆದುದರಿಂದ ಯಾರೊಬ್ಬರ ವೈವಾಹಿಕ ಜೀವನಕ್ಕೆ ವ್ಯತ್ಯಯ, ತೊಂದರೆ ಅಂದರೆ ಮೇಲೆ ಬರೆದ ಕಾರಣಗಳು ಇರುತ್ತವೆ ಎಂದು ಅರ್ಥ ಮಾಡಬೇಕೇ ವಿನಃ ಶಬ್ದ ಸಹ ಅರ್ಥ ಮಾಡಬಾರದು ಇನ್ನು ಸರಿಪಡಿಸಲಾರದ ವೈವಾಹಿಕ ಜೀವನದ ತೊಂದರೆಗಳು ಕಾರಣಗಳು ಇಂತಿವೆ. ಯಾರ ಜಾತಕನ ವೈವಾಹಿಕ ಜೀವನ ಸುಖಕರವಿರುವುದಿಲ್ಲ ಎಂಬುದನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾಯಿತು. ಇವುಗಳ ಹೆಚ್ಚಿನ ವಿವರಣೆ ನಾವು ಬರೆದು ಪ್ರಕಟಿಸಿದ ಎರಡು ಗ್ರಂಥಗಳಿಂದ 1) ವಧೂವರರ ಜ್ಯೋತಿಷ್ಯ 2) ಸ್ತ್ರೀ ಜ್ಯೋತಿಷ್ಯ ಈ ಎರಡು ಗ್ರಂಥಗಳಲ್ಲಿ ವಿವರ ವಿವರವಾಗಿ ವಿವರಿಸಲಾಗಿದೆ ಆ ಗ್ರಂಥಗಳನ್ನು ಓದಿದರೆ ಹೆಚ್ಚಿನ ಜ್ಞಾನ ಬರುತ್ತದೆ. ಉದಾ— ಸ್ತ್ರೀಯರ

ಸ್ವಭಾವ,, ಸೌಂದರ್ಯ, ಪ್ರೇಮವಿವಾಹ, ಪುನರ್‌ವಿವಾಹ ಅಂತರ್–ಜಾತೀಯ ವಿವಾಹ ಆಜನ್ಮಕುಮಾರಿಯೋಗ ಮೊದಲಾದ ಎಲ್ಲ ವಿಷಯಗಳ ಸುದೀರ್ಘ ವಿವರಣೆಯು ಸ್ತ್ರೀಜ್ಯೋತಿಷ್ಯಗ್ರಂಥದಲ್ಲಿ ಅಡಕವಾಗಿದೆ. ಇದರಂತೆ ವಧೂವರರ ಜ್ಯೋತಿಷ್ಯ ಗ್ರಂಥದಲ್ಲಿ ವಿವಾಹಪೂರ್ವದಲ್ಲಿಯ ಜಾತಕಗಳನ್ನು ಏಕೆ ಹಾಗೂ ಹೇಗೆ ನೋಡಬೇಕು ಏಕನಾಡಿ, ಮಂಗಳ ದೋಷ ಮೊದಲಾದ ದೋಷಗಳ ಅಶುಭ ಫಲಗಳೇನೆಂಬುದನ್ನು ಆ ಗ್ರಂಥದಲ್ಲಿ ವಿವರಿಸಲಾಗಿದೆ.

ಇನ್ನು ಸುಖಿರೂಪದ ವೈವಾಹಿಕ ಜೀವನದ ಬಗೆಗೆ ಈ ಕೆಳಗಿನಂತೆ ವಿವರಿಸಲಾಗಿದೆ.

1) ಯಾರ ಜಾತಕನ ಸಪ್ತಮ, ಪಂಚಮ, ಚತುರ್ಥ, ಲಗ್ನದಲ್ಲಿ ಬಲಾಢ್ಯ ಶುಭ ಗ್ರಹವಿರುವವೋ ಅವರ ವೈವಾಹಿಕ ಜೀವನ ಸುಖಕರ ವಿರುತ್ತದೆ

2) ಪಂಚಮೇಶ, ಸುಖೇಶ, ಸಪ್ತಮೇಶರು ಬಲಾಢ್ಯರಾಗಿದ್ದ ಜಾತಕನ ವೈವಾಹಿಕ ಜೀವನ ಸುಖಕರವಿರುತ್ತದೆ

3) ಗುರು, ಶುಕ್ರ, ಚಂದ್ರ, ಈ ಮೂರು ಗ್ರಹಗಳು ಬಲಾಢ್ಯರಿರುವ ಜಾತಕನ ವೈವಾಹಿಕ ಜೀವನ ಸುಖಕರವಿರುತ್ತದೆ.

4) ಸಪ್ತಮೇಶ, ಶುಕ್ರ, ಪಂಚಮೇಶ, ಗುರು ಸುಖೇಶ, ಚಂದ್ರ ಈ ಆರು ಸಂಗತಿಗಳು ಪೂರಕವಿದ್ದ ಜಾತಕನ ವೈವಾಹಿಕ ಜೀವನ ಅತ್ಯಂತ ಸುಖಕರವಿರುತ್ತದೆ. ಈ ಆರರಲ್ಲಿ ಕನಿಷ್ಟ ನಾಲ್ಕು ಸಂಗತಿಗಳು ಪೂರಕ ವಿದ್ದರು ಆ ಜಾತಕನ ವೈವಾಹಿಕ ಜೀವನ ಸುಖಕರವಿರುತ್ತದೆ. ಹೀಗೆ ವೈವಾಹಿಕ ಜೀವನ ಸುಖಕರವಿರುವವನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾಯಿತು.

**4) ಏಕತ್ರಿಕುಟುಂಬಕ್ಕೆ ಹೊಂದಾಣಿಕೆ ಹೇಗೆ ? ಹಾಗೂ ಏಕೆ ?**

ಇತ್ತೀಚಿಗೆ ಏಕತ್ರಕುಟುಂಬ ಪದ್ಧತಿಯು ನಶಿಸಹತ್ತಿದೆ ಆದಾಗ್ಯೂ ಕೆಲ ತಂದೆ ತಾಯಿಗಳು ಬರುವ ಸೊಸೆ ಏಕತ್ರಕುಟುಂಬಕ್ಕೆ ಹೊಂದಿಕೊಂಡಿರಬೇಕೆಂಬ ಅಪೇಕ್ಷೆಯುಳ್ಳವರಿರುತ್ತಾರೆ. ಒಬ್ಬನೇ ಮಗನಿರುವ ತಂದೆ–ತಾಯಿಗಳ ಅಪೇಕ್ಷೆ ಸ್ವಾಭಾವಿಕವು ಹೌದೂ ಇದರ ವಿರುದ್ಧ ಕೆಲ ತಂದೆ–ತಾಯಿಗಳು ತಮ್ಮ

ಮಗಳಿಗೆ ವರಹುಡುಕುವಾಗ ಏಕತ್ರಕುಟುಂಬದ ಜಂಜಾಟ ಇಲ್ಲದ ಸಂಬಧವೊ ಡನೆ ವಿವಾಹ ಕುವರಿಸಲು ಹವಣಿಸುತ್ತಾರೆ ಅದರಲ್ಲಿಯೂ ಒಬ್ಬಳೇ ಮಗಳು ಇರುವ ತಂದೆ-ತಾಯಿಗಳ ನಿರೀಕ್ಷೆ ಸಹಜವಾದದು ಆದುದರಿಂದ ಏಕತ್ರಕುಟುಂ ಬಕ್ಕೆ ಪೋಷಕವಿರುವ ಜಾತಕ ಹೇಗಿರುತ್ತದೆ ಯಾವ ಜಾತಕ ಪೋಷಕವಿರು ವುದಿಲ್ಲ. ಎಂಬುದರ ವಿವರ ಈ ಕೆಳಗಿನಂತಿದೆ.

1) ಏಕತ್ರಕುಟುಂಬಕ್ಕೆ ಪೂರಕವಿರುವ ಸ್ಥಾನವೆಂದರೆ ಚತುರ್ಥ. ಏಕತ್ರಕುಟುಂಬಕ್ಕೆ ಪೂರಕವಿರುವ ಗ್ರಹವೆಂದರೆ ಚಂದ್ರನು ಆದುದರಿಂದ ಯಾರ ಜಾತಕದಲ್ಲಿ ಚತುರ್ಥದಲ್ಲಿ ಶುಭ ಗ್ರಹ ಚತುರ್ಥೇಶ ಹಾಗೂ ಚಂದ್ರ ಬಲಾಢ್ಯರಿರುವ ಜಾತಕದವರು ಏಕತ್ರಕುಟುಂಬಕ್ಕೆ ಹೊಂದಿಕೊಂಡು ಇರುತ್ತಾರೆ.

2) ಏಕತ್ರಕುಟುಂಬಕ್ಕೆ ಮಾರಕ ಗ್ರಹವೆಂದರೆ ಮಂಗಳನು ಆದುದ ರಿಂದ ಮಂಗಳನು ಚತುರ್ಥದಲ್ಲಿದ್ದರೆ ಏಕತ್ರಕುಟುಂಬಕ್ಕೆ ಹೊಂದಾಣಿಕೆ ಇರುವುದಿಲ್ಲ ಮಂಗಳನಷ್ಟೇ ಏಕೆ ಶನಿ, ರಾಹು, ರವಿ ಚತುರ್ಥದಲ್ಲಿರುವುದು ಏಕತ್ರಕುಟುಂಬಕ್ಕೆ ಪ್ರತಿಕೂಲ ಅಂಶವು.

3) ಯಾರ ಜಾತಕದಲ್ಲಿ ಅನೇಕ ಗ್ರಹಗಳು ಪುರುಷ ರಾಶಿಯ ಲ್ಲಿರುವವೋ ಅವರು ಏಕತ್ರಕುಟುಂಬದಲ್ಲಿ ಹೊಂದಿಕೊಂಡು ಇರುವುದಿಲ್ಲ. ಯಾರ ಜಾತಕದಲ್ಲಿ ಅನೇಕ ಗ್ರಹಗಳು ಸ್ತ್ರೀರಾಶಿಯಲ್ಲಿರುವವೋ ಅವರು ಏಕತ್ರಕುಟುಂಬಕ್ಕೆ ಹೊಂದಿಕೊಂಡಿರುತ್ತಾರೆ.

4) ಮೇಷ, ಸಿಂಹ, ವೃಶ್ಚಿಕ, ಧನು, ಮಕರ ಈ ರಾಶಿಯು ಮಂಗಳನು ಜಾತಕದ ಯಾವುದೇ ಸ್ಥಾನದಲ್ಲಿದ್ದು. ಲಗ್ನೇಶ ಹಾಗೂಚಂದ್ರರು ಪುರುಷ ರಾಶಿಯಲ್ಲಿದ್ದರೆ ಇಂಥ ವ್ಯಕ್ತಿಗಳು ಏಕತ್ರಕುಟುಂಬದಲ್ಲಿ ಹೊಂದಿ ಕೊಂಡು ಇರಲಾರರು.

5) ಮೇಷ ಲಗ್ನವಿದ್ದು ಚಂದ್ರ ಬಲಾಢ್ಯನಿದ್ದರೆ ಕನ್ಯಾ ಹಾಗೂ ಧನುಲಗ್ನವಿದ್ದು ಗುರು ಬಲಾಢ್ಯನಿದ್ದರೆ ಕರ್ಕ ಹಾಗೂ ಕುಂಭಲಗ್ನಗಳಿದ್ದು ಶುಕ್ರನು ಬಲಾಢ್ಯನಿದ್ದರೆ ಇಂಥ ವ್ಯಕ್ತಿಗಳು ಏಕತ್ರಕುಟುಂಬದಲ್ಲಿ ಹೊಂದಿ ಕೊಂಡು ಇರುತ್ತಾರೆ.

6 ರವಿ, ಮಂಗಳರು ನಿರ್ಬಲರಿದ್ದ ಜಾತಕರು ಏಕತ್ರಕುಟುಂಬದಲ್ಲಿ ಹೊಂದಿಕೊಂಡು ಇರುತ್ತಾರೆ.

7) ಅನೇಕ ಗ್ರಹಗಳು ಸ್ತ್ರೀ ರಾಶಿಯಲ್ಲಿದ್ದರೆ ಇಂಥ ವ್ಯಕ್ತಿಗಳು ಏಕತ್ರಕುಂಟುಬದಲ್ಲಿ ಹೊಂದಿಕೊಂಡು ಇರುತ್ತಾರೆ.

8) ಗುರು, ಚಂದ್ರ, ಶುಕ್ರರು ಬಲಾಢ್ಯರಾಗಿ ಚತುರ್ಥದಲ್ಲಿದ್ದರೆ ಏಕತ್ರಕುಟುಂಬಕ್ಕೆ ಹೊಂದಿಕೊಂಡಿರುತ್ತಾರೆ.

9) ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಮೀನ ಲಗ್ನಗಳಿದ್ದು ಲಗ್ನೇಶನು ಬಲಾಢ್ಯನಿದ್ದ ಜಾತಕರು ಏಕತ್ರಕುಟುಂಬದಲ್ಲಿ ಹೊಂದಿಕೊಂಡು ಇರುತ್ತಾರೆ.

10) ಮೇಷ, ಮಿಥುನ, ಸಿಂಹ, ವೃಶ್ಚಿಕ, ಧನು, ಮಕರ, ಕುಂಭ, ಈ ಲಗ್ನಗಳಿದ್ದು ಲಗ್ನೇಶ ಬಲಾಢ್ಯನಿದ್ದರೆ ಏಕತ್ರಕುಟುಂಬದಲ್ಲಿ ಹೊಂದಿ ಕೊಂಡು ಇರಲಾರರು.

ಈ ವರೆಗೆ ಯಾವ ಜಾತಕನು ಏಕತ್ರಕುಟುಂಬಕ್ಕೆ ಹೊಂದಿಕೊಂಡು ಇರುತ್ತಾನೆ. ಯಾವ ಜಾತಕ ಏಕತ್ರಕುಟುಂಬಕ್ಕೆ ಹೊಂದಿಕೊಂಡು ಇರುವುದಿಲ್ಲ ಎಂಬುದನ್ನು ವಿವರಿಸಿದ್ದಾಯಿತು.

**5) ಪುನರ್ ವಿವಾಹ, ವಿದುರ-ವಿಧವಾ ವಿವಾಹ, ಸಹವರ್ತಿ ವಿವಾಹ :** ಪುರುಷ ಪ್ರಧಾನವಾದ ಈ ಸಮಾಜದಲ್ಲಿ ಸಾಮಾನ್ಯವಾಗಿ ಹೆಂಡತಿ ಗತಿಸಿದ ಬಳಿಕ ಎರಡನೇ ವಿವಾಹ ಮಾಡಿಕೊಳ್ಳುತ್ತಾರೆ. ಕೆಲವರು ಮೂರನೇ ಮದುವೆ ಮಾಡಿಕೊಂಡವರು ಇದ್ದಾರೆ. ಕೆಲವರು ಮೊದಲನೇ ಹೆಂಡತಿಗೆ ಸಂತಾನವಾಗದಿದ್ದಾಗ ಅಥವಾ ಮೊದಲನೇ ಹೆಂಡತಿಗೆ ಅಪರಿಹಾರವಾದ ಬೇನೆ ತಗಲಿದರೆ ಎರಡನೇ ವಿವಾಹ ಮಾಡಿಕೊಳ್ಳುತ್ತಿದ್ದರು. ಹಿಂದಿನ ರಾಜ-ಮಹಾ ರಾಜರ ಕಾಲದಲ್ಲಿ ಜಮೀನದಾರಿಕೆಯ ಕಾಲದಲ್ಲಿ 2-3 ಹೆಂಡತಿ ಸಂಗಡ ಸಂಸಾರ ಸಾಗಿಸುವುದು ಸಾಮಾನ್ಯ ಸಂಗತಿಯಾಗಿತ್ತು. ಆದರೆ ಈಗ ಕಾಲ ಬದಲಾಗಿದೆ ಕಾಯಿದೇಶೀರ ಒಬ್ಬ ಹೆಂಡತಿ ಇದ್ದಾಗ ಇನ್ನೊಂದು ವಿವಾಹ ಮಾಡಿಕೊಳ್ಳಲು ಬರುವುದಿಲ್ಲ. ಆದುದರಿಂದ ಮೊದಲನೇ ಹೆಂಡತಿಯೊಂದಿಗೆ

ಘಟಸ್ಫೋಟ ಪಡೆದುಕೊಂಡು ಎರಡನೇ ಮದುವೆ ಮಾಡಿಕೊಳ್ಳ ಹತ್ತಿದ್ದಾರೆ ಅಥವಾ ಅನಧಿಕೃತವಾಗಿ ಎರಡನೇ ಹೆಂಡತಿಯೊಂದಿಗೆ ಸಂಸಾರ ಸಾಗಿಸುತ್ತಿದ್ದಾರೆ. ಹೆಣ್ಣು ಮಕ್ಕಳು ಸಹ ಪುನರ್‌ವಿವಾಹ ಮಾಡಿಕೊಳ್ಳ ಹತ್ತಿದ್ದಾರೆ. ಈ ಎಲ್ಲ ಸಂಗತಿಗಳು ಸರ್ವಸಾಮಾನ್ಯವಾಗಿವೆ ಆದರೆ ಈಗ ನಾನು ಪ್ರಸ್ತಾಪಿಸುತ್ತಿರುವ ವಿಷಯವೆಂದರೆ ವರನು ವಿಧವಾ ವಿವಾಹ ಮಾಡಿಕೊಂಡರೆ ಹೇಗೆ? ಎಂದು ವಿಚಾರಿಸ ಹತ್ತಿದ್ದಾರೆ ವಿದುರನು ವಿಧವಾ ವಿವಾಹ ಮಾಡಿಕೊಂಡರೆ ಆಶ್ಚರ್ಯವಿಲ್ಲ ಒಂದು ದೃಷ್ಟಿಯಿಂದ ಸಮದುಃಖಿಗಳು ಸಮ ಸುಖಿಗಳಾಗಲು ಯತ್ನಿಸುವುದು ತಪ್ಪೇನಿಲ್ಲ ಆದರೆ ವರನೆಂಬುವರು (ಬ್ರಹ್ಮಚಾರಿ ಇದ್ದವರು) ತಮ್ಮ ಮೊದಲನೆಯ ವಿವಾಹವನ್ನು ವಿಧವೆಯೊಂದಿಗೆ ಮಾಡಿಕೊಂಡರೆ ಹೇಗೆ ಎಂದು ಪ್ರಶ್ನಿಸ ಹತ್ತಿದ್ದಾರೆ ಕೆಲ ಸಂಧರ್ಭದಲ್ಲಿ ಆವಳು ಅವನಿಗಿಂತಲೂ ವಯಸ್ಸಿನಲ್ಲಿ ಹಿರಿಯಳಾಗುತ್ತಾಳೆ ಇನ್ನು ಇತ್ತೀಚಿಗೆ ಕೆಲ ಜನರು ಕಾಂತ್ರಿಕಾರಕ ವಿಷಯದ ಪ್ರಶ್ನೆಗಳನ್ನು ಕೇಳ ಹತ್ತಿದ್ದಾರೆ ಅದಾವುದೆಂದರೆ ಮೊದಲನೇ ಹೆಂಡತಿಗತಿಸಿದಾಗ ಮಕ್ಕಳು, ಮೊಮ್ಮಕ್ಕಳು, ಸೊಸೆಯಂದಿರೊಂದಿಗೆ ಹೊಂದಿಕೊಂಡಿರಲಾರದೇ 65 ರಿಂದ 75ರ ವಯಸ್ಸಿನ ವಿದುರ ವಿಧವೆಯರಾದ ವೃದ್ಧರು **ಸಹವರ್ತನ ವಿವಾಹ, ಜೊತೆಗಾರ-ಜೊತೆಗಾರ್ತಿಯ ವಿವಾಹ** (companion) conpanionship) ವಿವಾಹ ಮಾಡಿಕೊಂಡರೆ ಹೇಗೆ ಎಂದು ಜ್ಯೋತಿಷಿಗಳನ್ನು ಕೇಳ ಹತ್ತಿದ್ದಾರೆ ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವವೊ ಸಿನೀಮಾ, ಟೀವಿ ಕಾದಂಬರಿ ಪತ್ರಿಕೆಗಳ ಧಾರಾವಾಹಿಗಳ ಪ್ರಭಾವವೊ ಅಥವಾ ಏಕತ್ರಕುಂಟುಬ ಪದ್ಧತಿ ನಶಿಸ ಹತ್ತಿದೆ ಪರಿಣಾಮವೋ ಅಂತೂ ಈ ಪ್ರಶ್ನೆ-ಸಮಸ್ಯೆಗಳಿಗೆ ಉತ್ತರಿಸಬೇಕಾಗಿದೆ ಆದುದರಿಂದ ಇಂಥ ಪ್ರಶೆಗಳಿಗ್ನೆ ಹೇಗೆ ಉತ್ತರಿಸಬೇಕೆಂಬುವನ್ನು ಪರಿಶಿಲಿಸುವಾ.

**ವಿಧವಾ ವಿವಾಹ:–** ಪ್ರೇಮವಿವಾಹ, ಪುನರ್‌ವಿವಾಹ, ಅಂತರ ಜಾತೀಯ ವಿವಾಹ, ವಿದುರವಿವಾಹ, ವಿಧವಾ ವಿವಾಹ, ಗಂಧರ್ವವಿವಾಹ, ಅಪಹರಣ ವಿವಾಹ ಅನುಲೋಮ ಪ್ರತಿಲೋಮ ವಿವಾಹ ಮೊದಲಾದ ಅನೇಕ ಪ್ರಕಾರಗಳಿವೆ ಹಾಗೂ ಅನೇಕ ಪ್ರಕಾರಗಳನ್ನಾಗಿ ವಿಂಗಡಿಸಬಹುದು ವಿವಾಹಗಳಲ್ಲಿ ಎಷ್ಟೇ ಪ್ರಕಾರಗಳಿರಲಿ ಪದ್ಧತಿಯಲ್ಲಿ ಮಾತ್ರ ಎರಡೇ ಎರಡು ಪ್ರಕಾರಗಳು

ಪಾಲಕರು ಗುರುಹಿರಿಯರು, ತಂದೆ-ತಾಯಿಗಳು ತಾವು ನೋಡಿದ ವಧೂವರರನ್ನು ತಮ್ಮ ಮಕ್ಕಳೊಂದಿಗೆ ಸಂಬಂಧ ಬೆಳೆಸಿಕೊಳ್ಳುವುದು ಒಂದು ವಿಧಾನ ವಧೂವರರೇ ತಾವೇ ಪರಸ್ಪರ ಪ್ರೀತಿಸಿ ಮೆಚ್ಚಿ ವಿವಾಹ ಮಾಡಿಕೊಳ್ಳುವುದು ಎರಡನೇಯ ಪ್ರಕಾರ ತಾವೆ ಮೆಚ್ಚಿ ಪ್ರೀತಿಸಿ ವಿವಾಹ ಮಾಡಿಕೊಳ್ಳುವುದರಲ್ಲಿ ವಿಧವಾ ವಿವಾಹವೂ ಒಂದು ಏಕೆಂದರೆ ತಂದೆ-ತಾಯಿಗಳು ವಿಧವೆಯನ್ನು ಸೊಸೆಯನ್ನಾಗಿ ಮಾಡಿಕೊಳ್ಳುವುದು ಬಹಳ ಅಪರೂಪ ಅಪವಾದಗಳಾಗಿ ಎಲ್ಲೋ ಒಂದೆರಡು ಉದಾಹರಣೆ ನೋಡಬಹುದು ಅಷ್ಟೆ ಆದುದರಿಂದ ಈ ವಿಧವಾ ವಿವಾಹ ಮಾಡಿಕೊಳ್ಳುವವರ ಜಾತಕ ಹೇಗಿರುತ್ತದೆ ಎಂಬುದನ್ನು ಪರಿಶಿಲಿಸುವಾ.

ಸಾಮಾನ್ಯವಾಗಿ ವಿಧವೆಯೊಂದಿಗೆ ವಿವಾಹ ಮಾಡಿಕೊಳ್ಳುವರನು ವಯಸ್ಸಿನಲ್ಲಿ ಕಿರಿಯನಿರುವುದೇ ಹೆಚ್ಚು ಅಥವಾ ಈರ್ವರ ವಯಸ್ಸಿನ ಅಂತರ ಕಡಿಮೆ ಇಲ್ಲವೆ ಸಮಾನ ವಯಸ್ಸಿನವರಿರುತ್ತಾರೆ. ವಿಧುವೆಯೊಂದಿಗೆ ವಿವಾಹ ಮಾಡಿಕೊಳ್ಳುವವರಲ್ಲಿ ಎರಡು ಉದ್ದೇಶಗಳಿರುತ್ತವೆ (1) ಅನುಕಂಪ (2) ಪ್ರೇಮ ಇವರಲ್ಲಿ ಅನುಕಂಪದ ದೃಷ್ಟಿಕೋನದಿಂದ ವಿವಾಹ ಮಾಡಿಕೊಳ್ಳುವ ವರನ ಜಾತಕದಲ್ಲಿ ಅನೇಕ ಗ್ರಹಗಳು ಸ್ತ್ರೀ ರಾಶಿಯಲ್ಲಿರುತ್ತವೆ ವಿಶೇಷವಾಗಿ ಲಗ್ನೇಶ, ಚತುರ್ಥೇಶ, ಚಂದ್ರ ಈ ಮೂರುಗ್ರಹಗಳು ಸ್ತ್ರೀರಾಶಿಯಲ್ಲಿರುತ್ತವೆ. ಇನ್ನು ಮೆಚ್ಚಿ ಪ್ರೀತಿಸಿ ಪ್ರೇಮ ವಿವಾಹ ಮಾಡಿಕೊಳ್ಳುವ ವರನ ಜಾತಕದಲ್ಲಿ ಶುಕ್ರ-ಮಂಗಳ, ಶುಕ್ರ-ಶನಿ, ಚಂದ್ರ-ಮಂಗಳ, ಚಂದ್ರ-ಶನಿ ಈ ಗ್ರಹಗಳ ಯುತಿಯೋಗ ಪ್ರತಿಯೋಗಗಳು ಲಗ್ನ, ಪಂಚಮ, ಸಪ್ತಮ, ಅಷ್ಟಮ, ವ್ಯಯ ಈ ಯಾವುದೊಂದುಸ್ಥಾನದಲ್ಲಿರುತ್ತವೆ ಅನುಕಂಪದಿದಾಗಲೀ ಪ್ರೇಮದಿದಾಗಲಿ ಯಾವುದೇ ಕಾರಣ ವಯಸ್ಸಿನ ಕಿರಿಯನೊಡನೆ ವಿವಾಹ ಮಾಡಿಕೊಳ್ಳುವ ಜಾತಕನ ಜಾತಕದಲ್ಲಿ ಬಲಿಷ್ಟ ಶನಿಯು ಸಪ್ತಮದಲ್ಲಿರುತ್ತಾನೆ ಅಥವಾ ಸಪ್ತಮೇಶನಾಗಿ ಬಲಿಷ್ಟನಿರುತ್ತಾನೆ ಅಥವಾ ಬಲಿಷ್ಟಶನಿಯ ದೃಷ್ಟಿಯು ಸಪ್ತಮದ ಮೇಲೆ ಇರುತ್ತದೆ ಹೀಗೆ ಮೇಲೆ ಬರೆದ ಯೋಗಗಳಿದ್ದ ಜಾತಕರು ವಿಧವಾ ವಿವಾಹ ಮಾಡಿಕೊಳ್ಳುತ್ತಾರೆ. ಜಾತಕರು ಎಂದು ಏಕೆ ಬರೆದಿರುವೆ ಎಂದರೆ ವಿದುರನು ವಿಧವಾವಿವಾಹ ಮಾಡಿಕೊಳ್ಳುತ್ತಾನೆ. ವರನು ವಿಧವಾ ವಿವಾಹ

ಮಾಡಿಕೊಳ್ಳುತ್ತಾನೆ ವ್ಯತ್ಯಾಸವಿಷ್ಟೆ, ವಿವರಸು ವಿಧವಾ ವಿವಾಹ ಮಾಡಿಕೊಳ್ಳುವುದೆಂದರೆ ಮೊದಲನೇ ಹೆಂಡತಿಯನ್ನು ಕಳೆದುಕೊಂಡವ ಅರ್ಥಾತ ಇವರ ಸಪ್ತಮ ಸ್ಥಾನ ದೂಷಿತವಿರುತ್ತದೆ ಅಂತೆಯೇ ಮೊದಲನೇ ಹೆಂಡತಿಯನ್ನು ಕಳೆದುಕೊಂಡಿರುತ್ತಾನೆ.

ಪ್ರೇಮ ವಿವಾಹ, ಪುನರ್ ವಿವಾಹ, ಅಂತರ ಜಾತೀಯ ವಿವಾಹ ಮೊದಲಾದವುಗಳಬಗೆಗೆ ನಾವು ಈಗಾಗಲೇ ಬರೆದು ಪ್ರಕಟಿಸಿದ **ವಧೂವರರ ಜ್ಯೋತಿಷ್ಯ, ಸ್ತ್ರೀ ಜ್ಯೋತಿಷ್ಯ ಈ ಎರಡು ಗ್ರಂಥಗಳಲ್ಲಿ ವಿವರವಾಗಿ ವಿವರಿಸಿದೆ.**

## 2) ಸಹವರ್ತಿ ವಿವಾಹ (companion)

ಇತ್ತೀಚಿಗೆ ಸಹವರ್ತಿ ವಿವಾಹ ಬಗೆಗೆ ಅನೇಕರು ಪ್ರಶ್ನಿಸುತ್ತಾರೆ ಸಹವರ್ತಿ ವಿವಾಹಕ್ಕೆ ಜೊತೆಗಾರ ಜೊತೆಗಾರ್ತಿ ವಿವಾಹವೆಂತಲೂ ಸಂಗಾತಿ ವಿವಾಹವೆಂತಲೂ ಕರೆಯುತ್ತಾರೆ. **ಕಂಪ್ಯಾನೀಯನ್** ಎಂಬುದೇ ಬಳಕೆಯಲ್ಲಿ ಕರೆಯುವ ವಾಡಿಕೆ ಉಂಟು ಈ ವಿವಾಹ ಮಾಡಿಕೊಳ್ಳುವವರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚಾಗ ಹತ್ತಿದೆ ಇದಕ್ಕೆ ಅನೇಕ ಕಾರಣಗಳಿವೆ. ಈ ವಿಷಯದ ಉಪೋದ್ಘಾತದಲ್ಲಿ ವಿವರಿಸಿದಂತೆ ಸೊಸೆಯಂದಿರು ಮಕ್ಕಳು ಮೊಮ್ಮಕ್ಕಳ ಸಂಗಡ ಹೊಂದಾಣಿಕೆ ಮನೋವೃತ್ತಿಯ ಅಭಾವವೇ ಕಾರಣ ಅಲ್ಲದೇ ಇಂದು ಏಕತ್ರಕುಟುಂಬ ಪದ್ಧತಿಯು ದಿನದಿಂದ ದಿನಕ್ಕೆ ಕಡಿಮೆ ಆಗ ಹತ್ತಿದೆ ಕಾರಣ ಎನೇಇರಲಿ ಕಂಪ್ಯಾನೀಯನ್ ವಿವಾಹದ ಪ್ರಶ್ನೆಯ ಬಗೆಗೆ ಉತ್ತರಿಸ ಬೇಕಾಗುತ್ತದೆ ಆದುದರಿಂದ ಈ ಕಂಪ್ಯಾನೀಯನ್ ವಿವಾಹದ ವಿಷಯವಾಗಿ ಜ್ಯೋತಿಷ್ಯದ ವಿಚಾರವೇನೆಂಬುದನ್ನು ಪರಿಶಿಲಿಸುವಾ.

ಕಂಪ್ಯಾನೀಯನ್ ವಿವಾಹ ಮಾಡಿಕೊಳ್ಳುವವರು ಹೆಚ್ಚಾಗಿ 65ರಿಂದ75 ವಯಸ್ಸಿನ ವರೆಗಿನ ವಿಧುರ, ವಿಧವೆಯರಾಗಲೀ ಘಟಸ್ಫೋಟ ಪಡೆದವರಾಗಲೀ ಇರುವುದೆಹೆಚ್ಚು ಈ ಕಂಪ್ಯಾನೀಯನ್ ವಿವಾಹ ಮಾಡಿಕೊಳ್ಳುವರೆಗೆ ಮಕ್ಕಳನ್ನು ಪಡೆಯುವ ಉದ್ದೇಶವಾಗಲೀ ಹಾಗೂ ಸಾಮರ್ಥ್ಯವಾಗಲೀ ಲೈಂಗಿಕ ಕ್ರೀಯೆಯಲ್ಲಿಯ ಆಸಕ್ತಿಯಾಗಲಿ ಶಕ್ತಿಯಾಗಲೀ ಇರುವದು ಕಡಿಮೆ ಒಂದೆ

ಜೀವನ ಕಳೆಯುವುದು ಏಕಾಂತವಾಸದಿಂದ ಇರುವುದು ಇವರಿಗೆ ಒಗ್ಗುವುದಿಲ್ಲ. ಇದು ಅಲ್ಲದೇ ವೃದ್ಧಾಪ್ಯದಲ್ಲಿ ಜೀವನ ಸಂಗಾತಿ ಮಾಡುವಷ್ಟು ಆರೈಕೆ, ಉಪಚಾರ ಸಾಂತ್ವನ ಪರಮಾತನ್ನು ಬೇರೆ ಯಾವ ಸಮೀಪದ ಬಂಧು ಬಾಂಧವರಿಂದಾಗಲೀ ಆಪ್ತೇಷ್ಟರಿಂದಾಗಲೀ ಸ್ನೇಹಿತರಿಂದಾಗಲೀ ನೌಕರ-ಚಾಕರಿಂದಾಗಲಿ ಇತ್ತೀಚಿನ ವೈಜ್ಞಾನಿಕ ಉಪಕರಣದಿಂದಾಗಲೀ ಗ್ರಂಥಗಳಿಂದಾಗಲೀ ದೊರೆಯಲಾರದು. ಆದರೆ ಅಧ್ಯಾತ್ಮ ಚಿಂತನೆಯಿಂದ ಮಾತ್ರ ಪಡೆದುಕೊಳ್ಳುವುದುಸಾಧ್ಯವಿದೆ ಆದರೆ ಈ ಅಧ್ಯಾತ್ಮಕಚಿಂತನೆಸರ್ವರಿಗೂ ಸಾಧಿಸದು ಅಂತೆಯೇ ಇಂದಿನ ವೃದ್ಧ ವಿದುರ, ವಿಧವೆಯರು ವೃದ್ಧಾಪ್ಯದಲ್ಲಿ ಬಾಳಸಂಗಾತಿಯನ್ನು ಪಡೆಯಲು ಇಚ್ಛಿಸುತ್ತಾರೆ. ಆದರೆ ಒಂದು ಸಂಗತಿ ಈ ಕಂಪ್ಯಾನೀಯನ ವಿವಾಹವು ಕೂಡ ಎಲ್ಲ ಜಾತಕರು ಯಶಸ್ವಿಯಾಗುತ್ತಾರೆ ಎಂದು ಹೇಳಲುಬಾರದು ಅಂತೆಯೇ ಇವರ ಬಗೆಗೆ ಜ್ಯೋತಿಷ್ಯಿಗಳನ್ನು ಪ್ರಶ್ನಿಸುತ್ತಾರೆ ಆದುದರಿಂದ **ಈ ಕಂಪ್ಯಾನೀಯನ್ ವಿವಾಹ** ಅರ್ಥಾತ್‌ಜ್ಯೊತೆಗಾರ ಜ್ಯೊತೆಗಾರ್ತಿವಿವಾಹ ಮಾಡಿಕೊಳ್ಳುವವರ ಗ್ರಹಗತಿ ಹೇಗಿರುತ್ತದೆ ಎಂಬುದನ್ನು ಪರೀಶಿಲಿಸುವಾ.

ಈ ಸಹವರ್ತಿ ವಿವಾಹ ಅಥವಾ ಜೊತೆಗಾರ ಜೊತೆಗಾರ್ತಿ ವಿವಾಹ ಮಾಡಿಕೊಳ್ಳುವ ಸಂಧರ್ಭ ಯಾವ ಜಾತಕನಿಗೆ ಇರುತ್ತದೆಂದರೆ ಯಾವ ಜಾತಕನ ಸಪ್ತಮ, ಚತುರ್ಥ, ಪಂಚಮ, ಸ್ಥಾನಗಳು ದೂಷಿತವಿರುವವೋ ಆ ಜಾತಕನಿಗೆ ಮಾತ್ರ ಮೇಲೆ ಬರೆದ ವಿವಾಹ ಮಾಡಿಕೊಳ್ಳುವ ಸಂಧರ್ಭ ಅಥವಾ ಪ್ರಸಂಗ ಬರುತ್ತದೆ, ದೂಷಿತವೆಂದರೆ ಮೇಲೆ ಬರೆದ ಸ್ಥಾನಗಳಲ್ಲಿ ದುರ್ಬಲ, ನಿರ್ಬಲ ಗ್ರಹಗಳಿರುವಿಕೆ ಹಾಗೂ ಈ ಸ್ಥಾನಾಧಿಶರಾದ ಪಂಚಮೇಶ ಸಪ್ತಮೇಶ ಸೌಖೇಶರು ನಿರ್ಬಲ ದುರ್ಬಲರಿರುತ್ತಾರೆ ಅಂತೆಯೇ ಇವರಿಗೆ ವೈವಾಹಿಕ ಜೀವನದ ಸೌಖ್ಯಸಿಗುವುದಿಲ್ಲ ಇದಲ್ಲದೇ ಇವರ ಜಾತಕದಲ್ಲಿ ಪುರುಷಗ್ರಹಗಳೇ ಹೆಚ್ಚು ಬಲಾಢ್ಯವಿದ್ದು, ಸ್ತ್ರೀಗ್ರಹಗಳು ದುರ್ಬಲ ನಿರ್ಬಲರಿರುತ್ತವೆ ಆದುದರಿಂದ ವೈವಾಹಿಕ ಜೀವನವಾಗಲೀ ಏಕತ್ರಕುಟುಂಬದ ಸೌಖ್ಯವಾಗಲೀ ಪತಿ, ಪತ್ನಿ ಮಕ್ಕಳು ಮೊಮ್ಮಕ್ಕಳು ಸೊಸೆಯಂದಿರು ಬಂಧು ಬಾಂಧವರು ಆಪ್ತೇಷ್ಟರು ಹೇಗೆ ಕುಟುಂಬದ ಯಾವ ಸದಸ್ಯ

ರೊಂದಿಗೆ ಇವರ ಹೊಂದಾಣಿಕೆ ಇರುವುದಿಲ್ಲ ತಾನ್ ಮೂಲಕ ವೃದ್ಧಾಪ್ಯದಲ್ಲಿ ಒಂಟಿ ಜೀವನವು ಏಕಾಂತವಾಸವಿರುವುದು ಅನಿವಾರ್ಯವಾಗುವುದರಿಂದ ಸಹವರ್ತಿ ವಿವಾಹ ಮಾಡಿಕೊಳ್ಳಲು ಅನಿವಾರ್ಯವಾಗುತ್ತದೆ ಮೇಲೆ ಬರೆದ ಎರಡು ಗ್ರಹ ಯೋಗಗಳಿಂದ ಇವರು ಕಂಪ್ಯಾನಿಯನ ವಿವಾಹವಾಗಲು ಬಯಸುತ್ತಾರೆ. ಆದರೆ ಈ ವಿವಾಹ ಮಾಡಿಕೊಳ್ಳುವ ಸಂದರ್ಭದಲ್ಲಿ ಗೋಚರೀಯಿಂದ ಗುರು-ಶನಿಯರು ಶುಭರಾಗಿ ಬಂದರೆ ಅಥವಾ ಜಾತಕದಲ್ಲಿಯು ಬಲಾಢ್ಯ ಗ್ರಹಗಳ ಮಹರ್ದಶೆ ಅಂತರ್ದಶೆ ಇದ್ದರೆ ಮಾತ್ರ ಈ ಪ್ರಕಾರದ ವಿವಾಹವು ಯಶಸ್ವಿಯಾಗುತ್ತದೆ. ಇಲ್ಲದಿದ್ದರೆ ಈ ಪ್ರಯೋಗವು ಕೂಡ ಅಯಶಸ್ವಿಯಾಗುತ್ತದೆ.

2) ಯಾರೊಬ್ಬರ ವೈವಾಹಿಕ ಜೀವನ ಹೇಗಿರುತ್ತದೆ ? ವಿವಾಹ ಹೇಗಿರುತ್ತದೆ ಭಾವಿ ಪತಿ-ಪತ್ನಿ ಹೇಗೆ, ವಿಧವಾ ವಿವಾಹ ಯಾರು ಮಾಡಿಕೊಳ್ಳುತ್ತಾರೆ. ಸಹವರ್ತಿ ವಿವಾಹವೆಂದರೇನು? ಈ ಮೊದಲಾದ ವಿಷಯಗಳನ್ನು ವಿವೇಚಿಸಿದ್ದಾಯಿತು ಆದರೆ ವಧೂ-ವರರ ಜೀವನದಲ್ಲಿಯ ಅತ್ಯಂತ ಮಹತ್ವದ ವಿಷಯವಾದ ವಿವಾಹದ ಕಾಲಯಾವುದು ಎಂಬುದನ್ನು ಪರಿಶೀಲಿಸುವಾ

**ವಿವಾಹ ಎಂದಾಗುತ್ತದೆ ?** -: ಮಕ್ಕಳು ಬೆಳೆದು ದೊಡ್ಡವರಾದ ಹಾಗೆ ತಂದೆ-ತಾಯಿಗಳ ಚಿಂತೆ ಪ್ರಾರಂಭವಾಗುತ್ತದೆ. ಈ ಚಿಂತೆ ಮತ್ತೆ ಯಾವುದು ಅಲ್ಲಾ ಮದುವೆಯ ವಯಸ್ಸಿಗೆ ಬಂದ ಮಕ್ಕಳವಿವಾಹದ ವಿಷಯವಾಗಿ ವರಾನ್ವೇಷಣೆ ಕನ್ಯಾನ್ವೇಷಣೆ ಪ್ರಾರಂಭವಾಗುತ್ತದೆ. ತತ್ ಪೂರ್ವದಲ್ಲಿ ಜಾತಕಾದಿಗಳನ್ನು ಬರೆಯಿಸಿ ಮಕ್ಕಳ ವಿವಾಹದ ವಿಷಯವಾಗಿ ಜೋತಿಷಿಗಳನ್ನು ವಿಚಾರಿಸುವ ಪ್ರ ಪ್ರಥಮ ಪ್ರಶ್ನೆಯೆಂದರೆ ಮಗಳ ಅಥವಾ ಮಗನ ವಿವಾಹ ಎಂದಾಗುತ್ತದೆ. ಕಂಕಣಬಲ ಬಾಸಿಂಗಬಲ ಕೂಡಿ ಬಂದಿದೆಯೋ ಹೇಗೆ ? ಅರ್ಥಾತ ವಿವಾಹ ಯೋಗದ ವರುಷದ ಬಗೆಗೆ ವಿಚಾರಿಸುತ್ತಾರೆ. ಅಲ್ಲಿಂದ ಪ್ರಾರಂಭವಾಗುತ್ತದೆ ಪ್ರಶ್ನೆಗಳ ಸರಮಾಲೆ ಎಂಥ ವರ, ? ಎಂಥ ಕನ್ಯಾ? ಯಾವದಿಕ್ಕು? ಇತ್ಯಾದಿ ಇದರಂತೆ ವಧೂ-ವರರು ಕೂಡ ನೇರವಾಗಿ ವಿಚಾರಿಸುವ ಪ್ರಪ್ರಥಮ ಪ್ರಶ್ನೆಯೆಂದರೆ ತಮ್ಮ ವಿವಾಹದ ಕಾಲ ಮಿತಿಯ ಬಗೆಗೆ ಆದುದರಿಂದ ಯಾರೊಬ್ಬರ ವಿವಾಹ ಎಂದಾಗುತ್ತದೆ ವಿವಾಹದ ಕಾಲ

ಮಿತಿ ವಿವಾಹ ಯೋಗದ ವರುಷಗಳಾವವು ಎಂಬುದನ್ನು ಪರಿಶೀಲಿಸುವಾ ಯಾರೊಬ್ಬರ ವಿವಾಹ ಎಂದಾಗುತ್ತದೆ ಎಂಬ ಪ್ರಶ್ನೆಗೆ ಉತ್ತರಿಸುವ ಪೂರ್ವ ದಲ್ಲಿ ಈ ಕೆಳಗೆ ಬರೆದ ಸಂಗತಿಗಳನ್ನು ಪರಿಶೀಲಿಸಬೇಕು.

1) ಜಾತಕ ಸರಿಯಾಗಿ ಬರೆಯಿಸಿದ್ದಾರೋ ಹೇಗೆ ? ಎಂಬುದನ್ನು ಖಚಿತ ಪಡಿಸಿಕೊಳ್ಳಬೇಕು 2] ಬೇಗ ವಿವಾಹವಾಗುವ ಜಾತಕವೋ? ತಡವಾಗಿ ವಿವಾಹವಾಗುವ ಜಾತಕವೋ ? 3) ಸಪ್ತಮ, ಪಂಚಮ, ಚತುರ್ಥ, ತನು ಈ ಸ್ಥಾನಗಳು ಹೇಗಿವೆ 4] ಜನ್ಮ ನಕ್ಷತ್ರಾದಿಗಳ ವಿಚಾರ 5] ಕುಜ [ಮಂಗಳ] ದೋಷದ ವಿಚಾರ 6) ಗೋಚರೀ ಗ್ರಹಗಳ ಶುಭಾ ಅಶುಭ ಫಲಗಳ ವಿಚಾರ 7] ಮಹರ್ದಶೆ ಅಂತರರ್ದಶೆಗಳ ಫಲಗಳ ವಿಚಾರ ಈ ಏಳು ಸಂಗತಿಗಳನ್ನು ಪರಿಶೀಲಿಸಿದ ನಂತರ ಯಾರೊಬ್ಬರ ವಿವಾಹದ ಕಾಲ ಮಿತಿಯ ಬಗೆಗೆ ಅರ್ಥಾತ ವಿವಾಹ ಎಂದಾಗುತ್ತದೆ ಎಂಬುದನ್ನು ನಿರ್ದರಿಸಲು ಬರುತ್ತದೆ. ಇವುಗಳ ಸಂಕ್ಷಿಪ್ತ ವಿವರಣೆ ಈ ಕೆಳಗಿನಂತಿದೆ ಏಕೆಂದರೆ ಯಾರೊಬ್ಬರ ವಿವಾಹ ಯೋಗದ ವಿಷಯವಾಗಿ ನಾವು ಬರೆದು ಪ್ರಕಟಿಸಿದ ವಧೂ-ವರರ ಜೋತಿಷ್ಯದ ಆರನೇ ಅಧ್ಯಾಯದ 54ನೇ ಪುಟದಿಂದ 74ನೇ ಪುಟದ ವರೆಗೆ ವಿವರ ವಿವರ ವಾಗಿ ವಿವರಿಸಲಾಗಿದೆ.

1] ಯಾರೊಬ್ಬ ಜಾತಕನ ಜಾತಕ ಸರಿ ಇಲ್ಲದಿದ್ದರೆ ನುಡಿಯುವ ಭವಿಷ್ಯವು ತಪ್ಪುತ್ತದೆ ಆದ್ದರಿಂದ ಪ್ರಪ್ರಥಮವಾಗಿ ಜಾತಕನು ಜನಿಸಿದ ಹಳೆ ಪಂಚಾಂಗ ತೆಗೆದು ತಾವೇ ಸ್ವತ ತಯಾರಿಸಿ ಲಗ್ನ ಹಾಗೂ ರಾಶಿಗಳ ಬಗೆಗೆ ನಿರ್ದರಿಸಬೇಕು ಕೆಲವೊಮ್ಮೆ ಸಂದಿಗ್ದ ಲಗ್ನಗಳು ಸಂದಿಗ್ದ ರಾಶಿಗಳು ಬರುತ್ತವೆ ಅವುಗಳನ್ನು ಹೇಗೆ ನಿರ್ಣಯಿಸ ಬೇಕೆಂಬುದನ್ನು ನಾವು ಬರೆದು ಪ್ರಕಟಿಸಿದ **ಅಜ್ಞಾತ ಜಾತಕದರ್ಶನ** ಗ್ರಂಥವನ್ನು ಓದಿದರೆ ಅರ್ಥವಾಗುತ್ತದೆ [2] ಬೇಗ ವಿವಾಹವಾಗುವ ಜಾತಕವೋ ಅಥವಾ ತಡವಾಗಿ ವಿವಾಹವಾಗುವ ಜಾತಕವೋ ಎಂಬುದನ್ನು ಮೊದಲು ಖಚಿತ ಪಡಿಸಿಕೊಳ್ಳಬೇಕು ಇವುಗಳ ವಿವರಣೆ ಇದೇ ಗ್ರಂಥದ ಪುಟ 175ರಿಂದ185 ಪುಟದವರಗೆ ವಿವರಿಸಿದೆ ಇದು ಅಲ್ಲದೆ ನಮ್ಮ ವಧೂ-ವರರ ಜೋತಿಷ್ಯದ 62ನೇ ಪುಟದಿಂದ 70ನೇ ಪುಟದ

ವರೆಗೆ ವಿವರಿಸಲಾಗಿದೆ. [3] ಯಾರೊಬ್ಬ ಜಾತಕನ ವಿವಾಹದ ಕಾಲ ಮಿತಿಯ ಬಗೆಗೆ ವಿವಾಹ ಎಂದಾಗುತ್ತದೆ ಎಂಬುವನ್ನು ತಿಳಿಯಲು ಜಾತಕದಲ್ಲಿಯ ಸಪ್ತಮ ಸ್ಥಾನದಲ್ಲಿಯ ಗ್ರಹ,ಸಪ್ತಮೇಶನ ಬಲಾಬಲ ಪಂಚಮ ಸ್ಥಾನದಲ್ಲಿಯ ಗ್ರಹಗಳ ಬಲಾಬಲ ಪಂಚಮೇಶನ ಬಲಾಬಲ ಸುಖ ಸ್ಥಾನದಲ್ಲಿಯ ಗ್ರಹಗಳ ಬಲಾಬಲ ಸುಖೇಶನ ಬಲಾಬಲ ಹಾಗು ಲಗ್ನದಲ್ಲಿರುವ ಗ್ರಹಗಳ ಬಲಾಬಲ ಈ ಸಂಗತಿಗಳನ್ನು ಪರಿಶೀಲಿಸಿದರೆ ವಿವಾಹ ವಾಗುವ ಕಾಲದ ಬಗೆಗೆ ನಿರ್ಣಯಿಸಲು ಬರುತ್ತದೆ [4] ಯಾರೊಬ್ಬರ ವಿವಾಹ ಎಂದಾಗುತ್ತದೆ ಎಂಬುದನ್ನು ತಿಳಿಯಲು ಜಾತಕನ ನಕ್ಷತ್ರಾದಿ ದೋಷಗಳ ವಿಚಾರ ಮಾಡುವುದು ಅತ್ಯವಶ್ಯಕ ಏಕೆಂದರೆ ಆಶ್ಲೇಷಾ, ವಿಶಾಖಾ, ಜೇಷ್ಠಾ, ಮೂಲಾ ಈ ನಕ್ಷತ್ರಗಳಲ್ಲಿ ಜನಿಸಿದವರ ವಿವಾಹವು ಸಾಮಾನ್ಯವಾಗಿ ತಡವಾಗಿ ಜರಗುತ್ತದೆ.

[5] ವಿವಾಹದ ಕಾಲ ಮಿತಿಯ ಬಗೆಗೆ ತಿಳಿಯಲು ಜಾತಕದಲ್ಲಿಯ [ಮಂಗಳ] ಕುಜ ದೋಷದ ವಿಚಾರ ಪರಿಶೀಲಿಸುವದು ಅತ್ಯವಶ್ಯಕ ಸಾಮಾನ್ಯವಾಗಿ ಕುಜ ದೋಷವಿರುವ (ಮಂಗಳದೋಷ) ವಧೂ–ವರರ ವಿವಾಹವು ತಡವಾಗಿ ಜರಗುತ್ತದೆ. ಕುಜ ದೋಷ [ಮಂಗಳದೋಷ] ವಿದೆಯೋ ಹೇಗೆ ಎಂಬುದನ್ನು ಮೊದಲು ಖಚಿತ ಪಡೆಸಿಕೊಳ್ಳಬೇಕು ಏಕೆಂದರೆ ಕುಜ ದೋಷದಲ್ಲಿ ತಾರತಮ್ಯವಿದೆ, ಅಪವಾದಗಳಿವೆ ಇವುಗಳ ವಿವರಣೆ ನಾವು ಬರೆದು ಪ್ರಕಟಿಸಿದ ವಧೂ–ವರರ ಜೋತಿಷ್ಯದ 5ನೇ ಅಧ್ಯಾಯದಲ್ಲಿ ಮಂಗಳದೋಷದ ವಿಚಾರವಾಗಿ ಪುಟ 38ರಿಂದ43 ಪುಟದವರೆಗೆ ವಿವರ ವಿವರವಾಗಿ ವಿವರಿಸಲಾಗಿದೆ. [6] ಈ ಸಂಗತಿಗಳನ್ನು ಸುಕ್ಷ್ಮವಾಗಿ ಪರಿಶೀಲಿಸಿದ ನಂತರ ಮುಖ್ಯ ವಿಷಯವಾದ ಗೋಚರೀ ಗ್ರಹಗಳ ಪರಿಭ್ರಮಣದ ಪರಿಣಾಮವನ್ನು ಕುಲಂಕುಷವಾಗಿ ಪರಿಶೀಲಿಸಬೇಕು. ವಿಶೇಷವಾಗಿ ಗುರು, ಶನಿ, ರವಿ, ಶುಕ್ರ, ಈ ನಾಲ್ಕು ಗ್ರಹಗಳ ಗೋಚರೀ ಪರಿಭ್ರಮಣದ ಪರಿಣಾಮ ವಿವಾಹದ ಕಾಲ ಮಿತಿಯನ್ನು ನಿರ್ಧರಿಸುವಾಗ ಬಹಳ ಮಹತ್ವ ವಿರುತ್ತದೆ. ಅವರಲ್ಲಿಯು ಗುರುವಿನ ಗೋಚರಿ ಪರಿಭ್ರಮಣದ ಪರಿಣಾಮ ಬಹಳ ವಿರುತ್ತದೆ ಗುರುವು ಗೊಚರೀಯಿಂದ 2–5–7–9–11ನೇಯವನಾಗಿ ಬಂದಾಗ ಜೀವನದ ಎಲ್ಲ ದೃಷ್ಟಿಯಿಂದಲೂ ಶುಭ ಫಲವನ್ನು ಕೊಡುತ್ತಾನೆ.

ವಿಶೇಷವಾಗಿ 2–5–7–9–11 ನೇಯ ಗೋಚರಿ ಗುರುವು ಬಂದಾಗ ವಧೂ ವರರ ವಿವಾಹ ನಿಂಡಿತವಾಗಿ ಜರುಗುತ್ತದೆ. ಇದು ನೂರಕ್ಕೆ ನೂರರಷ್ಟು ಕರಣಬಲ ಬಾಸಿಂಗ ಬಲ, ವಿವಾಹ ಯೋಗ ಕೊಡುತ್ತಾನೆ. ಇವುಗಳ ನಂತರ 1–3–10ನೇ ಗುರುವು ಬಂದಾಗ ವಿವಾಹ ಯೋಗವೇನು ಕೊಡುತ್ತಾನೆ ಆದರೆ ತುಸು ತೊಂದರೆಯಿಂದ ವಿವಾಹ ಜರುಗುತ್ತದೆ ಆದರೆ ಅದೇ ಗೋಚರಿ ಗುರುವು 4–6–8–12 ನೇಯವನಾಗಿ ಬಂದಾಗ ಅಶುಭ ಫಲ ಕೊಡುತ್ತಾನೆ ವಿವಾಹಕ್ಕೆ ತೊಂದರೆ ಬಹಳ ಅನೇಕ ಸಲ ಗೊತ್ತು ಮಾಡಿದ, ನಿಶ್ಚಯಿಸಿದ ಮುಹೂರ್ತ ಠರಾಯಿಸಿದ ವಧೂ–ವರರ ವಿವಾಹ ಮುಂದೂಡ ಬಹುದಾಗಿದೆ ಮುರಗಡೆ ಆಗಬಹುದಾಗಿದೆ ಅದುದರಿಂದ 4–6–8–12ನೇ ಗುರುವು ಬಂದಾಗ ಮೂಹೂರ್ತ ಗೊತ್ತು ಮಾಡಬಾರದು ಇದರಂತೆ ಗೋಚರಿ ಗುರುವಿನ ಪರಿಭ್ರಮಣವು ಮೂಲ ಜಾತಕದ ಲಗ್ನ, ಪಂಚಮ, ಸಪ್ತಮ ನವಮ, ಲಾಭ, ತೃತಿಯ ಈ ಸ್ಥಾನಗಳ ಮೇಲಿಂದ ಆಗುವಾಗಲು ವಿವಾಹ ಯೋಗವನ್ನು ಕೊಡುತ್ತಾನೆ. ಶನಿಯ ಗೋಚರಿಯಿಂದ 3–6–10–11 ನೇಯವನಾಗಿ ಬಂದಾಗ ಜೀವನದವಿಲ್ಲ ದೃಷ್ಟಿಯಿಂದ ಶುಭ ಫಲ ಕೊಡುತ್ತಾನೆ ವಿವಾಹದ ವಿಷಯವಾಗಿಯೂ ಶುಭ ಫಲ ಕೊಡುತ್ತಾನೆ ಆದರೆ 12–1–2ನೇ ಗೋಚರಿ ಶನಿಯ ಸಾಡೇ ಸಾತಿಯ ಅಶುಭ ಫಲದಾಯಕ ಶನಿಯು 4–5 ನೇ ಪಂಚಮಾಷ್ಟಮ ಶನಿಯು ವಿವಾಹದ ವಿಷಯವಾಗಿ ಅಶುಭ ಫಲದಾಯಕನು ಈ ಸಾಡೇಸಾತಿ ಹಾಗೂ ಪಂಚಮಾಷ್ಟಮ ಶನಿ ಬಂದಾಗ ನಿಶ್ಚಯಿಸಿದ ಮುಹೂರ್ತ ಠರಾಯಿಸಿದ ಮದುವೆ ಮುಂದೂಡ ಬಹುದಾಗಿದೆ ಇಲ್ಲವೆ ಮುರಗಡೆ ಆಗಬಹುದಾಗದೆ ಅದ್ದರಿಂದಈ ಅವಧಿಯಲ್ಲಿ ವಿಶೇಷ ಎಚ್ಚರಿಕೆ ವಹಿಸಬೇಕು. 7ನೇ ಹಾಗೂ 9 ನೇ ಗೋಚರಿ ಶನಿಯು ತುಸು ತೊಂದರೆ ಯಿಂದ ಶುಭ ಫಲಕೊಡುತ್ತನೆ (ವಿವಾಹದ ವಿಷಯವಾಗಿ ಮಾತ್ರ)

ರವಿಯು ಗೋಚರಿಯಿಂದ 3–6–10–11ನೇಯವನಾಗಿ ಬಂದಾಗ ವಿವಾಹದ ವಿಷಯವಾಗಿ ಶುಭ ಫಲಕೊಡುತ್ತಾನೆ. ಆದರೆ ಅದೇ ರವಿಯು 4–8–12 ನೇಯವನಾಗಿ ಬಂದಾಗ ವಿವಾಹಕ್ಕೆ ತೊಂದರೆ ಬಹಳ ಆದರೆ 1–2–5–7–9 ನೆಯವನಾಗಿ ಬಂದಾಗ ವಿವಾಹದ ವಿಷಯವಾಗಿ ವಿಲಂಬ

ದಿಂದ ಕಾರ್ಯಸಿದ್ಧಿಯಾಗುತ್ತದೆ

ಶುಕ್ರನು ಗೋಚರಿಯಿಂದ1–2–3–5–7–9–10–11ನೇಯವನಾಗಿ ಬಂದಾಗ ಜೀವನದ ಎಲ್ಲ ದೃಷ್ಟಿಯಿಂದ ಶುಭ ಫಲಕೊಡುತ್ತನೆ. ವಿಶೇಷವಾಗಿ ವಿವಾಹಯೋಗ ಬಲವಿರುತ್ತದೆ. ಆದರೆ 4–6–8–12 ನೇಯವನಾಗಿ ಬಂದಾಗ ವಿವಾಹಕ್ಕೆ ತೊಂದರೆ ಬಹಳ.

7) ಯಾರೊಬ್ಬ ವಿವಾಹ ಯೋಗದ ಬಗೆಗೆ ಪರಿಶೀಲಿಸುವಾಗ ಗೋಚರೀಗ್ರಹದ ಪರಿಣಾಮದಂತೆ ಮಹರ್ದಶೆ ಅಂತರರ್ದಶೆಗಳ ಪರಿಣಾಮ ಬಹಳಷ್ಟು ಮುಖ್ಯವಾಗಿರುತ್ತದೆ. ಹಾಗಾದರೆ ವಿವಾಹಕ್ಕೆ ಯಾವ ಗ್ರಹಗಳ ಮಹರ್ದಶೆ ಅಂತರರ್ದಶೆಯು ಶುಭ ಫಲಕೊಡುತ್ತದೆ ಎಂಬ ಪ್ರಶ್ನೆ ಉದ್ಭವಿಸುತ್ತದೆ ಇದಕ್ಕೆ ಉತ್ತರವಿಷ್ಟೆ ಜಾತಕದಲ್ಲಿ ಯಾವ ಗ್ರಹವು ಗ್ರಹಗಳು ಬಲಾಢ್ಯವಿರುವವೊ ಆ ಗ್ರಹಗಳ ಮಹರ್ದಶೆ ಅಂತರರ್ದಶೆಗಳ ಫಲದ್ ಜೀವನದ ಎಲ್ಲ ದೃಷ್ಟಿಯಿಂದ ಶುಭ ಫಲಕೊಡುವಂತೆ ವಿವಾಹದ ವಿಷಯವಾಗಿಯೂ ಶುಭ ಫಲಕೊಡುತ್ತದೆ. ಎರಡನೇಯದಾಗಿ ಬಲಾಢ್ಯ ಸಪ್ತಮೇಶ ಪಂಚಮೇಶ ಮಹರ್ದಶೆ ಅಂತರರ್ದಶೆಗಳೂ ಸಪ್ತಮ ಹಾಗೂ ಪಂಚಮ ಸ್ಥಾನಗಳಲ್ಲಿರುವ ಬಲಾಢ್ಯ ಗ್ರಹಗಳ ಮಹರ್ದಶೆ ಅಂತರರ್ದಶೆಗಳಲ್ಲಿಯೂ ವಿವಾಹದ ವಿಷಯವಾಗಿ ಶುಭಫಲಕೊಡುತ್ತದೆ. ಮೂರನೇ ಹಾಗೂ ಮುಖ್ಯವಾಗಿ ಗುರು, ಶುಕ್ರರು ಬಲಾಢ್ಯರಿದ್ದು ಅವರ ಮಹರ್ದಶೆ ಅಂತರರ್ದಶೆಗಳಲ್ಲಿಯೂ ಬಲಾಢ್ಯ ಸಪ್ತಮೇಶ ಪಂಚಮೇಶ ಮಹರ್ದಶೆ ಅಂತರರ್ದಶೆಗಳಲ್ಲಿ ನೂರಕ್ಕೆ ನೂರರಷ್ಟು ವಿವಾಹದ ವಿಷಯವಾಗಿ ಶುಭ ಫಲಕೊಡುತ್ತವೆ ಅರ್ಥಾತ ಗುರು ಶುಕ್ರ ಸಪ್ತಮೇಶ ಬಲಾಢ್ಯರಿದ್ದು ಅವರ ಮಹರ್ದಶೆ ಅಂತರರ್ದಶೆಗಳಲ್ಲಿ ಖಂಡಿತವಾಗಿ ವಿವಾಹ ಜರುಗುತ್ತದೆ.

ಯಾರೊಬ್ಬರ ಕೌಟುಂಬಿಕ ವಿಷಯವಾಗಿ ವಧೂ-ವರರ ವಿವಾಹ ವಿಷಯವಾಗಿ ವಿವಾಹದಲ್ಲಿಯ ಪ್ರಕಾರಗಳ ವಿಷಯವಾಗಿ ಯಾವ ಯಾವ ಪ್ರಕಾರದ ಪ್ರಶ್ನೆ ಸಮಸ್ಯೆಗಳಿರುತ್ತವೆ ಎಂಬುದನ್ನು ವಿವರಿಸಿದ್ದಾಯಿತು.

ಇನ್ನು ಯಾವ ಯಾವ ಮುಂಜಾಗ್ರತೆ ಕ್ರಮಗಳನ್ನು ಯಾವ ಯಾವ ಪರಿಹಾರ ಕ್ರಮಗಳನ್ನು ಕೈಕೊಳ್ಳಬೇಕು ಎಂಬುವನ್ನು ಪರಿಶೀಲಿಸುವಾ,

1) **ಕೌಟುಂಬಿಕ ವಿಷಯವಾಗಿ ಮುಂಜಾಗ್ರತೆ ಕ್ರಮಗಳು:—** ಯಾರೊಬ್ಬ ಜಾತಕನ ಕೌಟುಂಬಿಕ ವಿಷಯವಾಗಿ ಯಾವ ಯಾವ ಮುಂಜಾಗ್ರತೆ ಕ್ರಮಗಳನ್ನು ಕೈಕೊಳ್ಳಬೇಕು ಎಂಬುದರ ಪೂರ್ವದಲ್ಲಿ ಮೊದಲು ಅವರ ಜಾತಕವನ್ನು ಸೂಕ್ಷ್ಮವಾಗಿ ಪರಿಶೀಲಿಸಬೇಕು ಮುಖ್ಯವಾಗಿ ಮೂರು ಸಂಗತಿಗಳಿಗೆ ಒತ್ತುಕೊಟ್ಟು ಪರಿಶೀಲಿಸಬೇಕು (1) ಜಾತಕದ ಲಗ್ನ ಸರಿಯಾಗಿದಿಯೋ ಹೇಗೆ (2) ಚಂದ್ರನು ಯಾವ ನಕ್ಷತ್ರ ಯಾವ ರಾಶಿಯಲ್ಲಿ ಎಷ್ಟು ಅಂಶದಲ್ಲಿದ್ದಾನೆ (3) ಜನನ ಸಮಯದಲ್ಲಿಯ ಮಹರ್ದಶೆ ಅಂತರರ್ದಾಶೆಯುವಿಚಾರ ಈ ಮೂರು ಸಂಗತಿಗಳನ್ನು ಪರಿಶೀಲಿಸಿದ ನಂತರ ಪ್ರಥಮವಾಗಿ ಯಾರೊಬ್ಬ ಜಾತಕನ ಸಪ್ತಮ, ಪಂಚಮ, ಚತುರ್ಥ ಈ ಸ್ಥಾನಗಳು ಹೇಗಿವೆ ಅಂದರೆ ಈ ಮೂರು ಸ್ಥಾನಗಳಲ್ಲಿಯ ಗ್ರಹಗಳ ಸ್ಥಿತಿ-ಗತಿ ಹಾಗೂ ಈ ಮೂರು ಸ್ಥಾನಗಳ ಬಲಾಬಲವನ್ನು ಪರಿಶೀಲಿಸಬೇಕು ಇದಾದ ನಂತರ ಜಾತಕದಲ್ಲಿಯ ಶುಕ್ರ, ಗುರುಗಳ ಬಲಾಬಲವನ್ನು ಪರಿಶೀಲಿಸಬೇಕು ಆ ಬಳಿಕ ಮಂಗಳ, ಶನಿಯರ ಬಲಾಬಲವನ್ನು ದೃಷ್ಟಿಯೋಗವನ್ನು ಪರಿಶೀಲಿಸಬೇಕು.

ಈ ಎಲ್ಲ ಸಂಗತಿಗಳು ಪೂರಕ ಪೋಷಕವಿದ್ದರೆ ಯಾವ ಮುಂಜಾಗ್ರತೆ ಕ್ರಮಗಳನ್ನು ಕೈಕೊಳ್ಳುವ ಅವಶ್ಯಕತೆ ಇರುವದಿಲ್ಲ ಈ ಎಲ್ಲ ಸಂಗತಿಗಳಲ್ಲಿ ಯಾವ ಯಾವ ಸಂಗತಿಗಳು ಮಾರಕ ಪ್ರತಿಕೂಲವೂ ಇದ್ದರೆ ಅವುಗಳ ನಿವಾರಣೆಗಾಗಿ ಮುಂಜಾಗ್ರತೆ ಕ್ರಮ ಕೈಕೊಳ್ಳುವುದು ಅವಶ್ಯವು ಅವುಗಳ ವಿವರಣೆ ಈಕೆಳಗಿನಂತಿದೆ

1) ಯಾರ ಜಾತಕದಲ್ಲಿ ವಿವಾಹವು ತಡವಾಗಿಯೂ ತೊಂದರೆಯಿಂದಲೂ ಜರುಗುತ್ತದೆ. ಹಾಗೂ ಯಾರ ವೈವಾಹಿಕ ಜೀವನ ಸುಖಕರವಿರುವುದಿಲ್ಲವೊ ಅವರ ಬಗೆಗೆ ಈ ರೀತಿ ಮುಂಜಾಗ್ರತೆ ಕ್ರಮಗಳನ್ನು ಕೈಕೊಳ್ಳಬೇಕು (ಅ) ಇಂಥ ವಧೂ-ವರರ ವಿವಾಹದ ವಿಷಯವಾಗಿ ವಯಸ್ಸಿಗೆ ಬಂದ

ಕೂಡಲೇ ಪ್ರಯತ್ನ ಪ್ರಾರಂಭಿಸಬೇಕು (ಬ) ಇಂಥ ವಧೂ-ವರರ ಒಪ್ಪಿಗೆ ಅನುಮತಿ ಇಲ್ಲದೇ ತಂದೆ-ತಾಯಿಗಳು ಪಾಲಕರು ಇಂಥ ವರನನ್ನೇ ಇಂಥ ವಧೂವನ್ನೇ ವಿವಾಹ ಮಾಡಿಕೋ ಎಂದು ಒತ್ತಾಯಿಸಬಾರದು ಆದೇಶ ಬಾರದು ಇಷ್ಟೇ ಅಲ್ಲಾ ಅವರ ಒಪ್ಪಿಗೆಯನ್ನು ಬರಹದಲ್ಲಿ ಪಡೆದುಕೊಂಡು ಆ ಬಳಿಕ ವಿವಾಹ ಮಾಡಿಕೊಡಬೇಕು (ಕ) ವರ ಗೊತ್ತಾದ ಕೂಡಲೇ ವಧು ಗೊತ್ತಾದ ಕೂಡಲೇ ವಿಲಂಬ ಮಾಡದೇ ಮಂಗಲಕಾರ್ಯ ನೆರವೇರಿಸಬೇಕು ಅಂದರೆ ನಿಶ್ಚಿತಾರ್ಥ (ಸಕ್ಕರೆ ಕಾರಣ ವೀಳೆ ಕಾರಣ) ವಾದ ಕೂಡಲೇ ಅಕ್ಷತಾಸಮಾರಂಭ ಕೈಕೊಳ್ಳಬೇಕು ವಿಲಂಬ ಮಾಡಿದಲ್ಲಿ ಗೊತ್ತು ಮಾಡಿದ ವರ, ವಧು ಗಳ ಮುರಗಡೆ (ಪ್ರಪೋಜಲಬ್ರೇಕ್) ಯಾಗಬಹುದಾಗಿದೆ ಆದ್ದರಿಂದ ರಜಿಸ್ಟರ ಮೊದಲು ಮಾಡಿಸಿ ಆ ಬಳಿಕ ಅಕ್ಷತಾಸಮಾರಂಭ ಕೈಕೊಳ್ಳಬೇಕು (ಇ) ಯಾರವೈವಾಹಿಕ ಜೀವನ ಸುಖಕರವಿರುವುದಿಲ್ಲವೋ ಅಂಥ ವಧೂ-ವರರ ಬಗೆಗೆ ತಂದೆ-ತಾಯಿಗಳು ಪಾಲಕರ ಇವರಿಗಾಗಿ ಪ್ರತೇಕ ಆರ್ಥಿಕ ವ್ಯವಸ್ಥೆ ಮಾಡಬೇಕು ಹಾಗೂ ಆದಷ್ಟು ಏಕತ್ರಕುಟುಂಬ ವಿರುವ ಮನೆತನದೊಂದಿಗೆ ನಂಟಸ್ತಿಕೆ ಬೆಳೆಸಬಾರದು.

ಈವರೆಗೆ ತಂದೆ-ತಾಯಿಗಳು ಪಾಲಕರು ಯಾವ ಯಾವ ಮುಂಜಾಗ್ರತೆ ಕ್ರಮಗಳನ್ನು ಕೈಕೊಳ್ಳಬೇಕು ಎಂಬುದನ್ನು ವಿವರಿಸಿದ್ದಾಯಿತು ಇನ್ನು ವಧೂ-ವರರೇ ಯಾವ ಯಾವ ಮುಂಜಾಗ್ರತೆ ಕರ್ಮಗಳನ್ನು ಕೈಕೊಳ್ಳಬೇಕೆಂಬುದನ್ನು ವಿವರಿಸುವಾ

2) ಯಾವ ವಧೂ-ವರರ ವಿವಾಹ ತಡವಾಗಿಯೂ ತೊಂದ ಯಿಂದಲೂ ಜರುಗುವುದಲ್ಲದೇ ವೈವಾಹಿಕ ಜೀವನ ಸುಖಕರವಿರುವುದಿಲ್ಲವೋ ಅಂಥ ವಧೂ-ವರರು ಈ ಮುಂದೆ ಬರೆದ ಮುಂಜಾಗ್ರತ ಕ್ರಮಗಳನ್ನು ಕೈಕೊಳ್ಳಬೇಕು (ಅ) ಇಂಥ ವಧೂ-ವರರು ತಮ್ಮ ಭಾವೀಪತಿ ಪತ್ನಿಯ ಬಗೆಗೆ ತಾವೇ ನಿರ್ಣಯ ತೆಗೆದುಕೊಳ್ಳದೇ ತಂದೆ-ತಾಯಿಗಳು ನೋಡಿದ ಒಪ್ಪಿದ ವಧೂ-ವರರನ್ನು ಇವರು ಒಪ್ಪಬೇಕು (ಬ) ಪ್ರೇಮ ವಿವಾಹ ಅಂತರ ಜಾತೀಯ ವಿವಾಹ ವಿಧುರ, ವಿಧವಾವಿವಾಹ ಮೊದಲಾ

ಕ್ರಮಗಳನ್ನು ಕೈಕೊಳ್ಳಬಾರದು. (ಕ) ಇವರು ಉದ್ಯೋಗ ನೌಕರಿ ಮುಂದುವರಿಸಬೇಕು. (ಡ) ಇವರೇ ಹೊಂದಾಣಿಕೆ ಮನೋವೃತ್ತಿ ಬೆಳೆಸಿಕೊಳ್ಳಬೇಕು. (ಇ) ಕುಟುಂಬದ ಸದಸ್ಯರೊಂದಿಗೆ ತಾಳ್ಮೆ ಸಹನ ಶೀಲತೆಯಿಂದ ಇರಬೇಕು ಹಾಗೂ ಎಲ್ಲ ವಿಷಯಗಳಲ್ಲಿ ಕೊಡುವ ತೆಗೆದು ಕೊಳ್ಳುವ ಮನೋವೃತ್ತಿ ಇರಬೇಕು ಹಾಗೂ ಎಲ್ಲವಕ್ಕೂ ತನ್ನ ಮಾತೇ ಸರಿ ಸತ್ಯ ಎಂದು ಸಾಧಿಸಲು ಹೋಗಬಾರದು ಪತಿ-ಪತ್ನಿ ಇಬ್ಬರು ನೌಕರಿ ಮಾಡುತ್ತಿದ್ದರೆ ಮನೆ ಕೆಲಸ ಮಕ್ಕಳು ಪಾಲನೆ ಕೆಲಸ ಇಬ್ಬರು ಕೂಡಿ ಮಾಡಬೇಕು.

3) ಗೋಚರಿಯಿಂದ 4-6-8-12 ನೇ ಗುರು ಬಂದಾಗ ವಧೂ-ವರರ ವಿವಾಹ ಮುಹೂರ್ತವನ್ನು ಗೊತ್ತುಮಾಡಬಾರದು ಇದರಂತೆ ಸಾಡೇ ಸಾತಿ ಹಾಗೂ ಪಂಚಮಾಷ್ಟಮ ಶನಿ ಬಂದಾಗ ಕೂಡ ವಧೂ-ವರರ ವಿವಾಹದ ಮುಹೂರ್ತ ಗೊತ್ತು ಮಾಡಬಾರದು. ಒಂದು ವೇಳೆ ಸಾಡೇಸಾತಿ ಪಂಚಮಾಷ್ಟಮ ಶನಿಯ ಅಶುಭ ಫಲವಿದ್ದರು ಗುರುವು 2-5-7-9-11 ನೇಯವನಾಗಿ ಬಂದಾಗ ಸಾಡೇಸಾತಿ ಪಂಚಮಾಷ್ಟಮ ಶನಿಯ ಅಶುಭ ಫಲ ನಿವಾರಣೆ ಆಗುತ್ತದೆ. ಆದರೆ 4-6-8-12 ನೇ ಗೋಚರಿ ಗುರುವು ಬಂದಾಗ ಮಾತ್ರ ವಿವಾಹಕ್ಕೆ ವಿಘ್ನಗಳು ಬರುತ್ತವೆ. ಗೋಚರೀ ಗುರುವಿನ ಅಶುಭ ಫಲ ನೋಡುವಾಗ ಅಂಶಾತ್ಮಕವಾಗಿ ನೋಡಬೇಕು ಇವುಗಳ ವಿವರಣೆ ನಾವು ಬರೆದು ಪ್ರಕಟಿಸಿದ **ಗ್ರಹಗತಿ** ಗ್ರಂಥದಲ್ಲಿ ವಿವರವಾಗಿ ವಿವರಿಸಿದೆ. ಇದರಿಂದ ಜಾತಕದಲ್ಲಿ ದುರ್ಬಲ, ನಿರ್ಬಲ ಗ್ರಹಗಳಿದ್ದು ಅವುಗಳ ಮಹರ್ದಶೆ ಅಂತರರ್ದಶೆಯಲ್ಲಿ ಕೂಡ ವಿವಾಹಕ್ಕೆ ವಿಘ್ನಗಳು ಬರುತ್ತವೆ

**(೨) ಕೌಟುಂಬಿಕ ವಿಷಯದ ಪರಿಹಾರ ಕ್ರಮಗಳು**

ಈವರೆಗೆ ಕೌಟುಂಬಿಕ ವಿಷಯವಾಗಿ ಯಾವ ಯಾವ ಮುಂಜಾಗ್ರತೆ ಕ್ರಮ ಗಳನ್ನು ಕೈಕೊಳ್ಳಬೇಕು ಎಂಬುದನ್ನು ವಿವರಿಸಿದ್ದಾಯಿತ್ತು ಇನ್ನು ಕೌಟುಂಬಿಕ ವಿಷಯಕ್ಕೆ ಬರುವ ತೊಂದರೆ ನಿವಾರಣೆಗಾಗಿ ಕೈಕೊಳ್ಳಬೇಕಾದ ಪರಿಹಾರ ಕ್ರಮಗಳ ಬಗೆಗೆ ಈ ಕೆಳಗಿನಂತೆ ವಿವರಿಸಲಾಗಿದೆ,

## 1) ಸ್ವರ್ಣಗೌರೀವ್ರತ ಹರಿತಾಲಿಕಗೌರೀವ್ರತ

ಇದೇ ಗ್ರಂಥದ ಪುಟ175ರಿಂದ185 ಪ್ರಕಟಿಸಿದವರೆಗೆ ವಿವರಿಸಿದಂತೆ ಯಾವ ವಧೂ-ವರರ ಜಾತಕದಲ್ಲಿ ತಡವಾಗಿ ವಿವಾಹವಾಗುವ ಯೋಗಗಳಿರುವವೋ ಹಾಗೂ ಯಾವ ವೈವಾಹಿಕ ಜೀವನ ಸುಖಿಕರವಿರುವುದಿಲ್ಲವೋ ಅಂಥ ಜಾತಕರು ಪ್ರತಿ ವರುಷ ಭಾದ್ರಪದ ಶುದ್ಧ ತದಿಗೆ ದಿನಬರುವ **ಹರಿತಾಲಿಕ ಗೌರಿವ್ರತ** ಇಲ್ಲವೇ **ಸ್ವರ್ಣಗೌರೀವ್ರತ**ವನ್ನು ತಪ್ಪದೇ ಆಚರಿಸಬೇಕು

**2) ರುಕ್ಮಿಣೀ ಸ್ವಯಂವರ, ಸೀತಾ ಸ್ವಯಂವರ ಪಾರ್ವತೀ ಸ್ವಯಂವರ ವೆಂಕಟೇಶ ಚರಿತ್ರೆ ಸೋಳಾಸೊಮವಾರವ್ರತ** ಯಾವ ವಧೂ-ವರರ ವಿವಾಹ ತಡವಾಗಿ ಜರುಗುವುದೊ ಅಂಥ ವಧೂ-ವರರು ಭಾಗವತದಲ್ಲಿಯ ರುಕ್ಮಿಣೀ ಸ್ವಯಂವರವಾಗಲೀ ಸೀತಾ ಸ್ವಯಂವರವಾಗಲೀ ಪಾರ್ವತಿ ಕಲ್ಯಾಣವಾಗಲೀ ವೆಂಕಟೇಶ ಸ್ತೋತ್ರವನ್ನು ನಿತ್ಯ ಪಠಿಸಬೇಕು. ಅಥವಾ ಸೋಳಾಸೋಮವಾರ ವ್ರತ ಆಚರಿಸಬೇಕು ಇದರಿಂದ ವಿವಾಹಕ್ಕೆ ಬರುವ ತೊಂದರೆಗಳು ನಿವಾರಣೆಯಾಗಿ ವಿವಾಹ ಬೇಗ ಆಗುತ್ತದೆ.

**3) ಪತಿ ಸಂಜೀವಿನಿ ವ್ರತ (ಭೀಮನ ಅಮವಾಸ್ಯೆ ವ್ರತ) ಮಂಗಳ ಗೌರಿ ವ್ರತ ವಟಸಾವಿತ್ರೀ ಪೂರ್ಣಿಮಾ ವ್ರತ** ಯಾರ ವೈವಾಹಿಕ ಜೀವನ ಸುಖಕರವಿರುವುದಿಲ್ಲವೋ ಯಾರ ಜಾತಕದಲ್ಲಿ ವಿದುರ ವೈಧವ್ಯಯೋಗವಿರುವುದೋ ಯಾರ ಜಾತಕದಲ್ಲಿ ಘಟಸ್ಫೋಟಯೋಗವಿರುವುದೋ ಇಂಥವರು ಮೇಲೆ ಬರೆದ ಆಷಾಢ ಬಹುಳ ಅಮವಾಸಿಗೆ ಬರುವ ಪತಿ ಸಂಜೀವಿನಿ ವ್ರತವಾಗಲಿ ಶ್ರಾವಣ ಮಾಸದಲ್ಲಿಯ ಮಂಗಳವಾರದ ಮಂಗಳಗೌರಿವ್ರತ ಈ ವ್ರತವಾಗಲೀ ಜ್ಯೇಷ್ಠ ಶುದ್ಧ ಪೌರ್ಣಿಮಾ ದಿನದಂದು ಬರುವ ವಟ ಸಾವಿತ್ರೀ ವ್ರತವನ್ನಾಗಲೀ ಆಚರಿಸಿದಲ್ಲಿ ವೈವಾಹಿಕ ಜೀವನಕ್ಕೆ ಬರುವ ತೊಂದರೆಗಳು ನಿವಾರಣೆ ಆಗುತ್ತವೆ.

**4) ಗಣಹೋಮ :—** ಯಾರ ವೈವಾಹಿಕ ಜೀವನ ಸುಖಕರ ವಿರುವು ದಿಲ್ಲವೋ ಅವರು ಪ್ರತಿ ವರ್ಷ ತಪ್ಪದೇ ಗಣಹೋಮ ಮಾಡಬೇಕು ಹಾಗೂ

ಇದೇ ಗ್ರಂಥದ 13ನೇ ಪುಟದಿಂದ15ನೇಪುಟದ ವರೆಗೆ ವಿವರಿಸಿದಂತೆ ಗ್ರಹಗಳ ಅಶುಭಫಲ ನಿವಾರಣೆಗಾಗಿ ಜಪ, ಸ್ತೋತ್ರ, ಧ್ಯಾನ, ದಾನ, ಆರಾಧಾನೆ ಮೊದಲಾದ ಕ್ರಮಗಳನ್ನು ಕೈ ಕೊಳ್ಳಬೇಕು ವಿಶೇಷವಾಗಿ ಹಾಗೂ ಸಪ್ತಮೇಶ ಚತುರ್ಥೇಶ, ಗುರು, ಶುಕ್ರ, ಈ ಗ್ರಹಗಳ ಜಪ, ಧ್ಯಾನ, ದಾನಾದಿಗಳನ್ನು ಕೈ ಕೊಳ್ಳಬೇಕು.

ಬೇಗ ವಿವಾಹ ಬೇಗ ಜರುಗಲು 1) **ಸ್ವರ್ಣ ಗೌರಿವ್ರತ** 2] **ಹರಿತಾಲಿಕಾಗೌರಿವ್ರತ** ಗಳನ್ನು ಪ್ರತಿ ವರ್ಷ ತಪ್ಪದೇ ಆಚರಿಸಬೇಕು ಹಾಗೂ 3) **ರುಕ್ಮಿಣೀ ಸ್ವಯಂವರ ಸೀತಾಸ್ವಯಂವರ ಪಾರ್ವತಿ ಕಲ್ಯಾಣ ಶ್ರೀ ವೆಂಕಟೇಶ ಸ್ತೋತ್ರ** ನಿತ್ಯ ಪಠಿಸಬೇಕು ಓದಬೇಕು. 4) ಯಾರ ವೈವಾಹಿಕ ಜೀವನ ಸುಖಕರ ಇರುವುದಿಲ್ಲವೋ ಆ ಜಾತಕರು **ಪತಿಸಂಜೀವಿನಿ ವ್ರತ ಶ್ರಾವಣ ಮಾಸದ ಮಂಗಳ ಗೌರಿ ವ್ರತ ವಟಸಾವಿತ್ರೀ ವ್ರತ**ವನ್ನು ಪ್ರತಿ ವರ್ಷ ಆಚರಿಸಬೇಕು ಹಾಗೂ ಪ್ರತಿ ವರ್ಷ ಗಣಹೋಮ ಮಾಡಬೇಕು.



# ಸಪ್ತಮದಳ

## ಮಕ್ಕಳ—ಪರಿಹಾರ

### (ತಂದೆ, ತಾಯಿ, ಮಕ್ಕಳ-ಪರಿಹಾರ)

ಪರಿಹಾರ ಜ್ಯೋತಿಷ್ಯದ ಏಳನೇಯ ಅಧ್ಯಾಯದಲ್ಲಿ **ಮಕ್ಕಳ-ಪರಿಹಾರದ** ಬಗೆಗೆ ಪ್ರಸ್ತಾಪಿಸುತ್ತೇನೆ ವಿಷಯ ಪ್ರವೇಶದಲ್ಲಿಯ ಈ ಅಧ್ಯಾಯಕ್ಕೆ ತಂದೆ,ತಾಯಿ, ಮಕ್ಕಳ-ಪರಿಹಾರ ಎಂಬ ಶೀರ್ಷಿಕೆ ಕೊಡಲಾಗಿದೆ ಅವರೆ ಈ ಅಧ್ಯಾಯದಲ್ಲಿ ಮಕ್ಕಳ ವಿಷಯವಾಗಿ ಎರಡು ಬಗೆಯ ಪ್ರಶ್ನೆ ಸಮಸ್ಯೆಗಳಿರುತ್ತವೆ ಮೊದಲನೇದಾಗಿ ಮಗು (ಮಕ್ಕಳು) ಜನಿಸುವ ಪೂರ್ವದಲ್ಲಿ ಮಕ್ಕಳನ್ನು ಪಡೆಯುವ ಸಲುವಾಗಿ ಯಾವ ಯಾವ ಪ್ರಕಾರ ಪ್ರಶ್ನೆ-ಸಮಸ್ಯೆಗಳಿರುತ್ತವೆ. ಎಂಬುದು ಒಂದು ವಿಧವಾದರೆ ಬೆಳೆದ ಮಕ್ಕಳು ವೃತ್ತಿಗೆ ಅಂಟಿಕೊಂಡು ವಿವಾಹ ಮಾಡಿಕೊಂಡು ತಂದೆ-ತಾಯಿಗಳನ್ನು ಬೀದಿ ಪಾಲು ಮಾಡುವ ಹೊಸ ಸಂಸ್ಕೃತಿಯ ಬಗೆಯ ಎರಡನೆ ಪ್ರಕಾರದ ಪ್ರಶ್ನೆ-ಸಮಸ್ಯೆಗಳ ವಿಷಯವಾಗಿರುತ್ತದೆ. ಆದುದರಿಂದ ಮಕ್ಕಳ ಪರಿಹಾರ ಎಂಬ ಶೀರ್ಷಿಕೆಯ ಅಡಿಯಲ್ಲಿ ವಿಶ್ಲೇಷಿಸಲಾಗಿದೆ.

ಯಾರೊಬ್ಬ ಜಾತಕನು ತಮ್ಮ ಮಕ್ಕಳ ಭವಿಷ್ಯದ ಬಗೆಗೆ ವಿಚಾರಿಸುವಾಗ ಪ್ರಪ್ರಥಮ ಪ್ರಶ್ನೆಯೆಂದರೆ ಮಕ್ಕಳ ಶಿಕ್ಷಣದ ಬಳಿಕ ಆ ಬಳಿಕ ಉದ್ಯೋಗ ವೃತ್ತಿ ನೌಕರಿಗೆ ಸಂಬಂಧಿಸಿದ ಪ್ರಶ್ನೆಗಳು ಇದರ ನಂತರ ಮಕ್ಕಳ ವಿವಾಹದ ಬಗೆಗೂ ಇದಾದ ನಂತರ ಮಕ್ಕಳಿಗೆ ಮಕ್ಕಳಾಗುವ ಬಗೆಗೂ ವಿಚಾರಿಸುತ್ತಾರೆ. ಅದಾದ ನಂತರ ಮಕ್ಕಳಿಗೆ ಸಂಬಂಧಿಸಿದ ಪ್ರಶ್ನೆಗಳ ಸರ

ಮಾಲೆ ಪ್ರಾರಂಭವಾಗುತ್ತದೆ. ಮಕ್ಕಳಿಗೆ ಸಂಬಂಧಿಸಿದ ಪ್ರಶ್ನೆ ಸಮಸ್ಯೆಗಳು ಹಿಂದಿನಕ್ಕಿಂತಲೂ ಈಗ ಹೆಚ್ಚಾಗಿವೆ ಆದುದರಿಂದ ಮಕ್ಕಳಿಗೆ ಸಂಬಂಧಿಸಿದ ಪ್ರಶ್ನೆ, ಸಮಸ್ಯೆಗಳು ಹೇಗಿರುತ್ತವೆ ಎಂಬುದನ್ನು ಮೊದಲು ವಿವರಿಸಿ ಆ ಬಳಿಕ ಅವುಗಳಿಗೆ ಮುಂಜಾಗ್ರತೆ ಹಾಗೂ ಪರಿಹಾರದ ಕ್ರಮಗಳ ಬಗೆಗೆ ಪರಿಶೀಲಿಸೋಣ.

ಯಾರೊಬ್ಬರ ವಿವಾಹವಾಗಿ 4–5 ವರುಷಗಳವರೆಗೆ ಸಂತಾನ ಪ್ರಾಪ್ತಿ ಆಗಲಿಲ್ಲದಿದ್ದರೆ ಅರ್ಥಾತ ಮಕ್ಕಳಾಗಲಿಲ್ಲದಿದ್ದರೆ ಮನೆಯ ಹಿರಿಯರು ಪಾಲಕರು ತಂದೆ ತಾಯಿಗಳಿಗೆ ಚಿಂತೆ ಪ್ರಾರಂಭವಾಗುತ್ತದೆ. ತಮ್ಮ ವಂಶದ ಅಭಿವೃದ್ಧಿ ಏಕಾಗಲೊಲ್ಲದು? ಆದಕ್ಕಾಗಿ ಮಕ್ಕಳ, ಸೊಸೆಯಂದಿರ ಅಳಿಯಂದಿರ ಜಾತಕಾದಿಗಳನ್ನು ತೆಗೆದುಕೊಂಡು ಜ್ಯೋತಿಷ್ಯಗಳ ಬಳಿಗೆ ಬಂದು ಪ್ರಪ್ರಥಮ ಪ್ರಶ್ನೆಯೆಂದರೆ ತಮ್ಮ ಮಗನಿಗೆ ಇಲ್ಲವೆ ಮಗಳಿಗೆ ಸಂತಾನ ಪ್ರಾಪ್ತಿಯೋಗವಿದೆಯೋ ಹೇಗೆ ಎಂದು ಪ್ರಶ್ನಿಸುತ್ತಾರೆ. ಇದೆ ಎಂಬ ಉತ್ತರ ಬಂದರೆ ಎಂದು ಯಾವ ವರುಷ ಎಂಬ ಪ್ರಶ್ನೆ ಕೇಳುತ್ತಾರೆ. ಈಗ ಇಲ್ಲಾ ಸಂತಾನವಾಗಲು ತೊಂದರೆ ಇದೆ ಎಂದರೆ ಆ ತೊಂದರೆ ನಿವಾರಣೆಗಾಗಿ ಕೈಕೊಳ್ಳಬೇಕಾದ ವ್ರತ, ಉಪವಾಸ ಮೊದಲಾದವುಗಳ ಬಗೆಗೆ ವಿಚಾರಿಸುತ್ತಾರೆ. ಸಂತ ಷ್ಟಿ ಬಗೆಗೆ ತಂದೆ–ತಾಯಿಗಳ ಅಪೇಕ್ಷೆ ಬಹಳವಿರುತ್ತದೆ. ವಿವಾಹವಾದ ವರುಷದ ಒಳಗೆ ಮೊಮ್ಮಕ್ಕಳನ್ನು ಕಾಣಬೇಕೆಂಬ ಉತ್ಕಟ ಆಕಾಂಕ್ಷೆಯಿರುತ್ತದೆ. ಆದರೆ ಹೊಸದಾಗಿ ವಿವಾಹವಾದ ದಂಪತಿಗಳಿಗೆ ಅಷ್ಟೊಂದು ಆತುರತೆ ಇರುವುದಿಲ್ಲ ಬೇಗ ಮಕ್ಕಳಾದರೆ ತಮ್ಮ ಸೌಂದರ್ಯಕ್ಕೆ ಎಲ್ಲಿ ಧಕ್ಕೆ ಬರುವುದೋ ಹಾಗೂ ತಾವು ಬೇಗ ವಯಸ್ಸಾದವರಂತೆ ಕಾಣುವೆವೋ ಹೀಗಾದಲ್ಲಿ ತಮ್ಮ ಪತಿರಾಯರು ತಮ್ಮನ್ನು ಎಲ್ಲಿ ನಿರ್ಲಕ್ಷಿಸುವರೋ ಎಂಬಕಾರಣದಿಂದ ಗರ್ಭಧಾರಣೆ ಆಗದ ಹಾಗೆ ನೋಡಿಕೊಳ್ಳುತ್ತಾರೆ. 2–3 ವರುಷ ಗತಿಸಿದ ಬಳಿಕ ಅವರಿಗೂ ಚಿಂತೆ ಪ್ರಾರಂಭವಾಗುತ್ತದೆ, ಸಮಾಜ ಸಂತಾನವಾಗದಿದ್ದ ಸ್ತ್ರೀಯರನ್ನು ತಿರಸ್ಕಾರದಿಂದಕಾಣುತ್ತಾರೆ ಗೊಡ್ಡೆ, ಬಂಜೆ ಎನ್ನುತ್ತಾರೆ. ಇಷ್ಟೇ ಅಲ್ಲಾ ಸ್ತ್ರೀಯರಿಗೆ ಸಹಜವಾದದು ಮಕ್ಕಳನ್ನು ಎತ್ತಿಕೊಳ್ಳುವಿಕೆ ಆದರೆ ಅದಕ್ಕೂ ಅವಕಾಶ ಕೊಡುವದಿಲ್ಲ ಅವರಿಂದ ಊಟ ಬಡಿಸಿಕೊಳ್ಳುವದಿಲ್ಲ

ದಿಲ್ಲ ಆದರೆ ಮೊದಲು ಅವರು ಜ್ಯೋತಿಷಿಗಳನ್ನು ಕಾಣುವ ಪೂರ್ವದಲ್ಲಿ ಸ್ತ್ರೀ ರೋಗತಜ್ಞಾ ಪ್ರಸೂತ್ರಿತಜ್ಞಾ ಡಾಕ್ಟರನ್ನು ಭೆಟ್ಟಿಯಾಗುತ್ತಾರೆ. ಎಲ್ಲವಿಧದ ಆರೋಗ್ಯ ತಪಾಸಿಸಿಕೊಳ್ಳುತ್ತಾರೆ ಇದು ಯಾವುದು ಪ್ರಯೋಜನವಾಗದಿದ್ದಲ್ಲಿ ಜ್ಯೋತಿಷಿಗಳ ಬಳಿಗೆ ತಮ್ಮ ಜಾತಕದ ಸಂಗಡ ಬಂದು ಪ್ರಶ್ನಿಸುತ್ತಾರೆ. ತಮಗೆ ಸಂತಾನ ಭಾಗ್ಯವಿದೆಯೋ ಹೇಗೆ ? ಇರುವುದಾದರೆ ಎಂದು ಯಾವ ವರುಷ ? ಇಲ್ಲದಿದ್ದರೆ ಇದಕ್ಕೇನು ಕಾರಣ ತಾವು ವಿವಾಹ ಆದ 2–3 ವರುಷದವರೆಗೆ ಗರ್ಭಧಾರಣೆಗೆ ಅವಕಾಶ ಕೊಡದಿರುವ ಸಂಗತಿಯನ್ನು ವಿವಿಧ ಡಾಕ್ಟರ ಬಳಿಗೆ ತಪಾಸಿಸಿಕೊಂಡು ಬಂದ ಸಂಗತಿಯನ್ನು ದೋಷ ಉಭಯತರಲ್ಲಿ ಇರುವುದಿಲ್ಲ ಅದಕ್ಕಾಗಿ ನಿಮ್ಮ ಬಳಿಗೆ ಜಾತಕದೊಂದಿಗೆ ಬಂದಿರುವೆವೆಂದು ವಿವರಿಸುತ್ತಾರೆ, ಹಾಗೂ ಯಾವುದಾದರೂ ದೋಷವಿದ್ದರೆ ಅದಕ್ಕೇನು ಪರಿಹಾರ ಯಾವುದಾದರು ವೃತ ಉಪವಾಸ ಇದ್ದರೆ ಹೇಳಿರಿ ಎನ್ನುತ್ತಾರೆ. ಇನ್ನು ಕೆಲವರ ಪ್ರಶ್ನೆ 2-3 ತಿಂಗಳ ವರೆಗೆ ಗರ್ಭನಿಂತು ಆ ಬಳಿಕ ಮೇಲಿಂದ ಮೇಲೆ ಗರ್ಭಸ್ರಾವ,ಗರ್ಭ ಪತನವಾಗುತ್ತದೆ. ಇದಕ್ಕೇನು ಕಾರಣ ಈ ಸಲ ಗರ್ಭನಿಂತು ಪತನವಾಗದೇ ಸುಸೂತ್ರವಾಗಿ ಹೆರಿಗೆ ಯಾಗುವುದೇ ಹೇಗೆ ಎಂದು ವಿಚಾರಿಸುತ್ತಾರೆ. ಅದಕ್ಕಾಗಿ ವೃತ ಉಪಾಸನೆಗಳ ಬಗೆಗೆ ವಿಚಾರಿಸುತ್ತಾರೆ.

ಹಳೆ ತಲೆಮಾರಿನ ಹಿರಿಯರ ಕಲ್ಪನೆ ಯಂದರೆ ಪುರುಷರಲ್ಲಿಯ ವಿರ್ಯ ದೋಷಕಿಂತಲೂ ಸ್ತ್ರೀಯರಲ್ಲಿಯ ಬಂಜೆತನದ ದೋಷವಿರುವುದೇ ಹೆಚ್ಚು ಅದಕ್ಕಾಗಿ ಸೊಸೆಯಂದಿರಿಗೆ ಬೇಗ ಮಕ್ಕಳಾಗದಿದ್ದರೆ ತಮ್ಮ ಮಗನಿಗೆ ಎರಡನೇ ವಿವಾಹದ ಬಗೆಗೆ ಪ್ರಯತ್ನಿಸುತ್ತಾರೆ ಎರಡನೇ ವಿವಾಹಕ್ಕೆ ಕಾಯದೆಯ ತೊಡಕ್ಕಿದ್ದರೂ ಕೂಡ ಅನಧೀಕೃತವಾಗಿ ಬಲಾತ್ಕಾರವಾಗಿ ಎರಡನೇ ವಿವಾಹ ಮಾಡುತ್ತಾರೆ ಅದಕ್ಕಾಗಿ ಜೋತಿಷಿಗಳಿಗೆ ಪ್ರಶ್ನಿಸುತ್ತಾರೆ.

ಇತ್ತೀಚಿಗೆ ಸಂತಾನ ವಿಷಯವಾಗಿ ಹೊಸ ಹೊಸ ಪ್ರಶ್ನೆ ಸಮಸ್ಯೆಗಳು ಬೆಳೆದಿವೆ. ನಮ್ಮ ಪೂರ್ವಜರು ಹಿಂದಿನ ತಲೆಮಾರಿನವರು ಹೆಂಡತಿಯಂದರೆ ಹಡೆಯುವ ಯಂತ್ರವು ಯಂತ್ರದಂತೆ ಉಪಯೋಗಿಸುತ್ತಿದ್ದರು 12ರಿಂದ

18ರ ವರೆಗೆ ಮಕ್ಕಳನ್ನು ಪಡೆಯುವದು ಸರ್ವ ಸಾಮಾನ್ಯವಾಗಿತ್ತು. ತಿಂದಷ್ಟು ರೊಟ್ಟಿ(ಚಕ್ಕುಲಿ) ಬಡಿ ಅದಷ್ಟು ಮಕ್ಕಳನ್ನು ಪಡಿ ಎಂಬ ಮಾತು ವಾಡಿಕೆಯಲ್ಲಿತ್ತು. ಈಗ ಕಾಲ ಬದಲಾಗಿದೆ ಆದರೆ ಪ್ರಶ್ನೆ ಸಮಸ್ಯೆಗಳು ಹೆಚ್ಚಾಗಿವೆ. ಹಾಗೂ ಇತ್ತೀಚಿನವರ ಪ್ರಶ್ನೆಗೆ ಉತ್ತರಿಸುವುದು ಕಠಿಣವಾಗಿದೆ ಹಾಗಾದರೆ ಓದಿರಿ.

ಮೊದಲನೇ ಹೆಣ್ಣು ಸಂತಾನವಾದರೆ ಚಿಂತೆ ಪ್ರಾರಂಭವಾಗುತ್ತ ಎರಡನೇದಕ್ಕೆ ಅವಕಾಶ ಕೊಟ್ಟರೆ ಅದೂ ಹೆಣ್ಣಾದರೆಹೇಗೆ? ಮೊದಲಿನ ಎರಡೂ ಹೆಣ್ಣು ಸಂತಾನವಾದರೆ ಮೂರನೇದಕ್ಕೆ ಅವಕಾಶ ಕೊಡಬೇಕೊ? ಬೇಡವೋ, ಅಲ್ಲಿಂದಾ ಪ್ರಾರಂಭವಾಗುತ್ತದೆ ಪ್ರಶ್ನೆಗಳ ಸರಮಾಲೆ ಪತಿ ಪತ್ನಿಯರಲ್ಲಿ ವಿರಸ ಉಂಟಾಗುತ್ತದೆ. ಕೆಲ ಒಮ್ಮೆ ಈ ವಿರಸ ವಿಕೋಪಕ್ಕೆ ಹೋಗುತ್ತದೆ 2–3 ಹೆಣ್ಣು ಹಡೆದ ಪತ್ನಿಯ ಮೇಲೆ ಕೈ ಮಾಡಿ ಅವಾಚ್ಯ ಶಬ್ದಗಳಿಂದ ಬಯ್ಯುತ್ತಿರುವ ಗಂಡಂದಿರ ಸಂಖ್ಯೆ ಕಡಿಮೆ ಇಲ್ಲಾ, ಹೆಣ್ಣು ಹಡೆದ ಪತ್ನಿ ಕೂಡ ತಾನು ತಪ್ಪು ಮಾಡಿದೆ, ಅಪರಾಧವೆಸಗಿದೆ. ಎಂಬ ಭಾವನೆ ಇಬ್ಬರಲ್ಲಿಯೂ ಬರುತ್ತದೆ ಅದಕ್ಕಾಗಿ ಜೋತಿಷಿಗಳ ಬಳಿಗೆ ಬರುವರು ಎರಡನೇ ಮಗು ಮೂರನೇ ಮಗು ಗಂಡೊ ? ಹೆಣ್ಣೊ ? ಮೂರನೇ ಗರ್ಭಧಾರಣಕ್ಕೆ ಅವಕಾಶ ಕೊಡಬೇಕೊ ? ಬೇಡವೋ ಮುಂದಾಗುವ ಮಗು ಗಂಡೇ ಆಗುತ್ತದೆ. ಅವಕಾಶ ಕೊಡಿ ಎಂದು ಹೇಳುವದು ಕಠಿಣ ಮುಂದಿನ ಮಗು ಗಂಡೇ ಆಗುತ್ತದೆ ಎಂದು ಭವಿಷ್ಯ ನುಡಿಯುವದು ಎಷ್ಟು ಕಠಿಣ ಎಂಬುದನ್ನು ಯೋಚಿಸಿರಿ ಇನ್ನೊಂದು ವಿಚಿತ್ರ ಪ್ರಶ್ನೆ ಕೆಲ ದಂಪತಿಗಳು ಎರಡು ಮಕ್ಕಳಾದ ಕೂಡಲೆ ಸಂತಾನ ಪ್ರತಿಬಂಧ ಮಾಡಿಕೊಳ್ಳುತ್ತಾರೆ ಆದರೆ ಅವರ ದುರ್ದೈವದಿಂದ ಎರಡೂ ಮಕ್ಕಳು ಅಲ್ಪಾಯುವಾಗಿದ್ದರೆ ಮತ್ತೆ ಸಮಸ್ಯೆಹುಟ್ಟಿಕೊಳ್ಳುತ್ತದೆ. ಸಂತಾನ ಪ್ರತಿಬಂಧನ ಮಾಡಿಕೊಂಡವರು ಮತ್ತೆ ಮೊದಲಿನಂತೆ ಮಕ್ಕಳನು ಪಡೆಯಲು ಡಾಕ್ಟರ ಬಳಿಗೆ ಹೋದರೆ ಹೇಗೆ ? ಎಂಬ ಪ್ರಶ್ನೆ ಕೇಳುತ್ತಾರೆ.

ಮೊದಲಿನ ಎರಡು ಹೆಣ್ಣಾದರೆ ಹೆಣ್ಣು ಹಡೆದ ಸ್ತ್ರೀಗೆ ಚಿಂತೆ ಪ್ರಾರಂಭವಾಗುತ್ತದೆ ಬಳಗದಲ್ಲಿಯು ಎಲ್ಲರೂ ಅವಳನ್ನು ಚುಚ್ಚಿ ಮಾತಾಡುತ್ತಾರೆ

ತಿರಸ್ಕಾರದಿಂದ ನೋಡುತ್ತಾರೆ. ಪತಿಮಹಾಶಯರು ಕೂಡ ಶಾಂತಿಯನ್ನು ಭೆಟ್ಟಿಯಾಗಲು ಕೂಡ ಬರುವುದಿಲ್ಲ ಆರ್ಥಿಕ ಉಪಚಾರವಂತೂ ದೂರೇ ಉಳಿಯಿತು. ಆಗ ಹೆಣ್ಣು ಹಡೆದ ಮಹಿಳೆ ತಾನು ತಪ್ಪು ಮಾಡಿದೆ ಎಂಬ ಮನೋಭಾವನೆ ಉಂಟಾಗುತ್ತದೆ ಆಗ ಅವಳು ಜೋತಿಷಿಗಳ ಬಳಿಗೆ ಬಂದು ತಮ್ಮ ಯಜಮಾನರು ಯಾವಾಗ ಬರುತ್ತಾರೆ ಯಾವಾಗ ಹಣ ಕಳಿಸುತ್ತಾರೆ ಹೆಣ್ಣು ಹಡೆದಿದ್ದಕ್ಕಾಗಿ ಯಾವ ಶಿಕ್ಷೆ ತನಗೆ ಕಾದಿದೆ ಎಂಬ ಪ್ರಶ್ನೆಗಳನ್ನು ಕೇಳುತ್ತಾರೆ ಇನ್ನು ಕೆಲವರು ಗಂಡು ಸಂತಾನವಾದ ಬಳಿಕವೇ ಸಂತಾನ ಪ್ರತಿಬಂಧ ಮಾಡಿಕೊಳ್ಳುತ್ತಾರೆ ಗಂಡೇನು ಹೆಣ್ಣೇನು ಎರಡು ಸಮಾ ಎಂದು ಕೇವಲ ಬಾಯಿ ಮಾತು ಔಪಚಾರಿಕ ಮಾತು ವೇದಿಕೆಯಲ್ಲಿ ಭಾಷಣ ಮಾತ್ರ ಟೀವಿ ರೇಡಿಯೊದಲ್ಲಿ ಜಾಹಿರಾತದಲ್ಲಿ ಪ್ರಚಾರ ಮಾಡುವ ಮಾತು ಆದರೆ ವಾಸ್ತವಿಕತೆ ಇದಕ್ಕೆ ತೀರ ವಿರುದ್ಧವಿದೆ ಇದು ಇಂದಿನ ಸುಶಿಕ್ಷಿತರು ಪದವೀಧರರು ವೈಜ್ಞಾನಿಕ ಮನೋವೃತ್ತಿ ಎಂದು ಹೇಳಿಕೊಳ್ಳುವವರು ಕೂಡ ಗಂಡು ಸಂತಾನದ ಬಗೆಗೆ ಇರುವ ಮೋಹ,ವಾತ್ಸಲ್ಯ,ಪ್ರೀತಿ,ಹುಟ್ಟಿಲ್ಲಿ ಚೊಚ್ಚಲು ಗಂಡುಮಗನನ್ನು ಹಡೆದ ತಾಯಿಯನ್ನು ಮಗನ ಮದುವೆಯ ಕಾಲಕ್ಕೆ ವಿಶೇಷ ಉಪಚಾರ ಮಾಡುತ್ತಾರೆ ಇದು ಕೇವಲ ಗಂಡಿನ ಮೋಹ ಭಾರತೀಯರಲ್ಲಿ ಮಾತ್ರವಲ್ಲಾ ಪಾಶ್ಚಿಮಾತ್ಯರಲ್ಲಿಯೂ ಇರುವದು ಕಂಡು ಬರುತ್ತದೆ ಹೀಗಾಗಿ ಸಂತಾನದ ಬಗೆಗೆ ಗಂಡ ಸಂತಾನದ ಬಗೆಗೆ ಸ್ತ್ರೀಯರನ್ನು ಹೊಣೆಗಾರರನ್ನಾಗಿ ಮಾಡುವ ಸಮಾಜದ ಬಗ್ಗೆ ಎಷ್ಟು ಬರೆದರೂ ಕಡಿಮೆಯೇ ಸ್ತ್ರೀಯರು ಅನುಭವಿಸುವ ಅವಮಾನದ ವಿಷಯಗಳ ಬಗೆಗೆ ಬರೆದರೆ ಅದೊಂದೇ 3–4 ನೂರ ಪುಟಗಳ ಉದ್ದ ಗ್ರಂಥವಾಗುವ ವಿಷಯ ಸಂಗ್ರಹವಿದೆ ಏಕೆಂದರೆ ಜೋತಿಷ್ಯದ ಸಲುವ ಕೇಳುವರೆಲ್ಲಾ ಸ್ತ್ರೀಯರೇ ಇರುವದು ಹೆಚ್ಚು ಇದು ಅಲ್ಲದೇ ಅವರು ತಮ್ಮ ಅಂತರಾಳದ ಗುಟ್ಟನ್ನು ನಮ್ಮಂದರಿಗೆ ಜೋತಿಷಿಗಳಿಗೆ ಬಿಟ್ಟು ಕೊಟ್ಟಿರುತ್ತಾರೆ ಇದು ಬೇರೆ ಯಾವ ಸಮೀಪದ ಬಂಧು ಬಳಗದವರಿಗೂ ಗೊತ್ತಿರುವದಿಲ್ಲ.

ಹಿಂದಿನ ಪುಟದಲ್ಲಿ ಹೇಳಿದಂತೆ ಸಂತತಿ ಹಾಗೂ ಸಂತಾನದ ವಿಷಯವಾಗಿ ಇತ್ತೀಚಿನ ಪ್ರಶ್ನೆಗಳಿಗೆ ಉತ್ತರಿಸುವದು ಎಷ್ಟು ಕಠಿಣ ಎಂಬುದರ ಬಗೆಗೆ 1–2 ಉದಾಹರಣೆಗಳನ್ನು ಓದಿರಿ. 1–2 ಸಂತಾನ ಆದ ಬಳಿಕ ಸಂತಾನ

ಪ್ರತಿಬಂಧವನ್ನು ಸಾಮಾನ್ಯವಾಗಿ ಇತ್ತೀಚೆಗೆ ಎಲ್ಲರೂ ಮಾಡಿಕೊಳ್ಳುತ್ತಾರೆ. ಸ್ತ್ರೀಯರು ಪ್ರತಿಬಂಧ ಮಾಡಿಕೊಳ್ಳುವದು ಹೆಚ್ಚು ಕೆಲಸಂದರ್ಭದಲ್ಲಿ ಗಂಡಂದಿರೂ ಕೂಡ ಸಂತಾನ ಪ್ರತಿಬಂಧ ಮಾಡಿಕೊಳ್ಳುತ್ತಾರೆ. ಗಂಡನು ಸಂತಾನ ಪ್ರತಿಬಂಧ ಮಾಡಿಕೊಂಡ ಮೇಲೂ ಕೆಲ ಸಂಧರ್ಭದಲ್ಲಿ ಹೆಂಡತಿಯು ಗರ್ಭಧಾರಣೆ ಆಗುತ್ತಾಳೆ. ಆಗ ಗಂಡ–ಹೆಂಡರಲ್ಲಿ ಸಂಶಯದ ಅಪನಂಬಿಕೆ ಯಿಂದ ಜಗಳ ಪ್ರಾರಂಭವಾಗುತ್ತವೆ. ಈ ಗರ್ಭ ತನ್ನದಲ್ಲ ಎಂಬ ಗಂಡನ ಪ್ರಶ್ನೆಗಳಿಗೆ ಜ್ಯೋತಿಷಿಗಳು ಉತ್ತರಿಸಬೇಕಾಗುತ್ತದೆ.

ಭಾರತದ ನಾರಿಯರು ಸಂತತಿಗೋಸ್ಕರ ಅರ್ಥಾತ್ ಮಕ್ಕಳನ್ನು ಪಡೆಯಲು ವಿಧ ವಿಧವಾದ ವ್ರತ,ನಿಯಮ,ಉಪಾಸನೆ, ಉಪವಾಸ, ಸ್ತೋತ್ರ ಆರಾಧನೆ, ಜಪ ಮೊದಲಾದವನ್ನು ಕೈಕೊಳ್ಳುತ್ತಾರೆ ಆದರೆ ಕೆಲ ಪಾಶ್ಚಿಮಾತ್ಯ ಸಂಸ್ಕೃತಿ ಪಡೆದ ಪರದೇಶದಲ್ಲಿ ವಾಸಿಸುವ ಭಾರತೀಯರ ಸಂತಾನದ ಬಗೆಗೆ ಪ್ರಶ್ನೆಗಳು ಹೀಗಿವೆ ಪತಿಯಿಂದ ಸಂತಾನ ಪಡೆಯುವದು ಶಕ್ಯವಿಲ್ಲದಿದ್ದಲ್ಲಿ ಬೇರೆ ಪರ ಪುರುಷರಿಂದ ಗರ್ಭಧಾರಣೆ ಮಾಡಿಸಿಕೊಂಡರೆ ತಪ್ಪೇನು? ಎಂದು ಕೆಲವರು ಪ್ರಶ್ನಿಸುತ್ತಿದ್ದರೆ ಮತ್ತೆ ಕೆಲವರು ಎಮ್ಮೆ ಆಕಳು ಮೊದಲಾದ ಪ್ರಾಣಿಗಳಂತೆ ಇಂಜಕ್ಷನ್ ಮೂಲಕ ಕೃತ್ರಿಮ ಗರ್ಭಧಾರಣೆ ಮಾಡಿಸಿಕೊಂಡರೆ ಹೇಗೆ ಎಂದು ವಿಚಾರಿಸುತ್ತಾರೆ. ಮತ್ತೆ ಕೆಲವರು ಬೇರೆ ಅವರಿಗೋಸ್ಕರ ಬೇರೆ ಅವರಿಂದ ಮಕ್ಕಳನ್ನು ಪಡೆದು ಕೊಟ್ಟರೆ ತಪ್ಪೇನು? ಎಂದು ಪ್ರಶ್ನಿಸುತ್ತಾರೆ ಹಾಗಾದರೆ ಈಗ ಹೇಳಿ ಹಿಂದಿನವರ ಸಂತಾನದ ಬಗೆಗೆ ಇರುವ ಪ್ರಶ್ನೆಗೂ ಇಂದಿನ ಕೆಲ ಪಾಶ್ಚಿಮಾತ್ಯ ಸಂಸ್ಕೃತಿಯರ ಪ್ರಶ್ನೆಗಳಿಗೆ ಉತ್ತರಿಸುವದು ಎಷ್ಟು ಕಠಿಣ. ಈ ವರೆಗೆ ಸಂತಾನ ಯಾವಾಗ ಆಗುತ್ತದೆ ಹಾಗೂ ಗಂಡು ಸಂತಾನದ ವಿಷಯವಾಗಿ ಭಾರತೀಯ ನಾರೀಯರ ಅನಿಸಿಕೆಗಳನ್ನು ವಿವರಿಸಿದ್ದಾಯಿತು. ಬೆಳೆದ ಮಕ್ಕಳ ವಿಷಯವಾಗಿ ಮಾತಾ ಪಿತರ ಅನಿಸಿಕೆಗಳ ಬಗೆಗೆ ಓದಿರಿ.

ಅವಿಭಕ್ತ ಕುಟುಂಬಗಳು ಇಂದು ಇತಿಹಾಸದ ಒಂದು ಭಾಗ ಆಗ ಹತ್ತಿದೆ ಆಧುನೀಕರಣದ ಪರಿಣಾಮವಾಗಿ ಭಾರತದಲ್ಲಿ ವಿಭಕ್ತ ಕುಟುಂಬಗಳ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚಾಗ ಹತ್ತಿದೆ ತಂದೆ–ತಾಯಿಗಳ ಮಗು ಬೆಳೆದು

ಉದ್ಯೋಗಸ್ಥನಾಗುವ ವರೆಗೆ ಹೆಚ್ಚೆಂದರೆ ಅವನು ಇಲ್ಲವೆ ಅವಳು ವಿವಾಹವಾಗುವ ವರೆಗೆ ಉದ್ಯೋಗಸ್ಥರಾಗಿ ವಿವಾಹ ಮಾಡಿಕೊಂಡು ತಂದೆ-ತಾಯಿಗಳನ್ನು ಬೀದಿ ಪಾಲು ಮಾಡುವ ಹೊಸ ಸಂಸ್ಕೃತಿ ಈಗ ಮೂಡಿ ಬರುತ್ತಿದೆ ಆದುದರಿಂದ ಉದ್ಯೋಗಸ್ಥರಾಗಿ ವಿವಾಹ ಮಾಡಿಕೊಂಡು ಬೇರೆ ಆಗುವ ಮಕ್ಕಳ ವಿಷಯವಾಗಿ ತಂದೆ-ತಾಯಿಗಳ ಪ್ರಶ್ನೆ ಸಮಸ್ಯೆಗಳು ಹೇಗಿರುತ್ತವೆ ಹಾಗೂ ಅಂಥ ಮಕ್ಕಳ ಪ್ರಶ್ನೆ ಸಮಸ್ಯೆಗಳು ಹೇಗಿರುತ್ತವೆ ಎಂಬುದನ್ನು ನೋಡುವಾ.

ಸಾಮಾನ್ಯವಾಗಿಅನೇಕ ತಂದೆ-ತಾಯಿಗಳ ಪ್ರಶ್ನೆಯೆಂದರೆ ತಮ್ಮಮಗ ಈ ವರೆಗೆ ತಮ್ಮ ಆಜ್ಞಾಧಾರಕನಾಗಿದ್ದನು ತಮ್ಮ ಮಾತನ್ನು ಮೀರುತ್ತಿದ್ದಿಲ್ಲ. ವಿವಾಹ ಆದಬಳಿಕ ಈಗ ನಮ್ಮನ್ನು ನಿರ್ಲಕ್ಷಿಸಿದ್ದಾನೆ. ಹೆಂಡತಿಯ ಮಾತು ಎಂದರೆ ವೇದವಾಕ್ಯ. ಅವಳುಹಾಕಿದ ಗೆರೆದಾಟುವುದಿಲ್ಲ. ಹೆಂಡತಿಯ ಕಡೆಯ ಜನರುಬಂದರೆ ಅದರ ಸತ್ಕಾರಮಾಡುತ್ತಾನೆ. ಅದರೆ ತಂಗಿ ಅವನ ಸಹೋದರ ಸಹೋದರಿಯರಿಗೂ ತಂದೆ-ತಾಯಿಗಳಿಗೂ ಏನೂಮರ್ಯಾದೆ ಕೊಡುವುದಿಲ್ಲ ಇದಕ್ಕೆಲ್ಲ ಸೊಸೆಯೇ (ಅವಳೇ)ಕಾರಣ. ಸೊಸೆಯು ತನ್ನ ಮಗನನ್ನು ವಶೀಕರಣ ಮಾಡಿಕೊಂಡಿದ್ದಾಳೆ ಮಾಟ ಮಾಡಿಸಿದ್ದಾಳೆ ಇವೇ ಮೊದಲಾದ ಆರೋಪಗಳನ್ನು ಅಪವಾದಗಳನ್ನು ಅನೇಕ ತಂದೆ-ತಾಯಿಗಳು ಸಹೋದರ ಸಹೋದರೀಯರು ಮಾಡುತ್ತಾರೆ ಇನ್ನು ಕೆಲ ತಂದೆ-ತಾಯಿಗಳ ಪ್ರಶ್ನೆಗಳೆಂದರೆ ತಮ್ಮ ವೃದ್ಧಾಪ್ಯದಲ್ಲಿ ತಮ್ಮನ್ನು ಸಲುಹುವವರು ಆಮಗನೋ ಈಮಗನೋ? ಆ ಮಗಳೋ? ಈ ಮಗಳೋ ಆ ಅಳಿಯನೋ? ಈ ಅಳಿಯನೋ? ಯಾವ ಸಹೋದರ, ಸಹೋದರಿಯರು ಹೇಗೆ ತಮ್ಮ ಸಮೀಪದ ಆಪ್ತೇಷ್ಟರ ಬಗೆಗೆ ವಿಚಾರಿಸುತ್ತಾರೆ. ಇನ್ನು ಕೆಲವರು ಬರೆಯಬೇಕೆಂದಿರುವ ಮೃತ್ಯುಪತ್ರದ ಬಗೆಗೆವಿವರಿಸುತ್ತಾರೆ. ವಿಚಾರಿಸುತ್ತಾರೆ ತಮ್ಮ ವೃದ್ಧಾಪ್ಯದಲ್ಲಿ ಸಲುಹುವರ ಬಗೆಗೂ ಯಾರ ಆರ್ಥಿಕ ಸ್ಥಿತಿ ಚನ್ನಾಗಿರುವುದಿಲ್ಲ ಅಂಥವರ ಬಗೆಗೆ ತುಸು ಹೆಚ್ಚು ಸ್ಥಿರ ಆಸ್ತಿ ಜಂಗಮ ಆಸ್ತಿ ಬರೆಯುವ ವಾಡಿಕೆ ಉಂಟು ಇನ್ನು ಕೆಲವರು ತಮ್ಮ ಜೀವನದಲ್ಲಿ ಗಳಿಸಿದ್ದ ಎಲ್ಲ ಪ್ರಕಾರದ ಆಸ್ತಿಯನ್ನು ಮಾರಿ ವೃದ್ಧಾಶ್ರಮಕ್ಕೆ ಸೇರಿದರೆ ಹೇಗೆ? ಅಥವಾ ಯಾವುದಾದರೊಂದು ಆಶ್ರಮ

ಮಠಗಳಿಗೆ ಹೋದರೆ ಹೇಗೆ ಎಂದು ವಿಚಾರಿಸ ಹತ್ತಿದ್ದಾರೆ ಇನ್ನು ಕೆಲ ತಂದೆ–ತಾಯಿಗಳು ಮಕ್ಕಳ ವಿರುದ್ಧ ಕೋರ್ಟಿನ ಕಟ್ಟೆ ಹತ್ತಿದರೆ ಹೇಗೆ? ಎಂದು ವಿಚಾರಿಸುತ್ತಾರೆ.

ಈ ವರೆಗೆ ತಂದೆ–ತಾಯಿಗಳು ತಮ್ಮ ಮಕ್ಕಳ ವಿಷಯವಾಗಿ ಯಾವ ಯಾವ ಪ್ರಕಾರದ ಪ್ರಶ್ನೆಗಳನ್ನು ವಿಚಾರಿಸುತ್ತಾರೆ ಪ್ರಶ್ನೆಗಳ ವೈವಿಧ್ಯದ ಬಗೆಗೆ ವಿವರಿಸಿದ್ದಾಯಿತು.

ಸಾಮಾನ್ಯವಾಗಿ ಅನೇಕ ಗಂಡು ಮಕ್ಕಳ ಪ್ರಶ್ನೆಯೆಂದರೆ ತಮ್ಮ ತಂದೆ–ತಾಯಿಗಳು ತಮ್ಮ ಸಹೋದರಿಯರ ಮೇಲೆ ಹಾಗೂ ಅಳಿಯಂದಿರರಿಗೆ ಹೆಚ್ಚು ಮಾನ ಸನ್ಮಾನ ಮಾಡುತ್ತಾರೆ ತಮ್ಮ ಅತ್ತೆ–ಮಾವಂದಿರರಿಗೆ ತಾತ್ಸಾರ ಮಾಡುತ್ತಾರೆ ಅಕ್ಕ–ತಂಗಿಯರ ಮೇಲೆ ಹಾಗೂ ಅಕ್ಕ-ತಂಗಿಯರ ಮಕ್ಕಳ ಮೇಲೆ ಮಗನ ಮಕ್ಕಳಿಗಿಂತಲೂ ಅಕ್ಕತಂಗೀಯರ ಮಕ್ಕಳ ಮೇಲೆ ವಿಶೇಷ ಪ್ರೀತಿ ಬೇಧ ಭಾವ ಮಾಡುತ್ತಾರೆ. ವಿಶೇಷ ಮಮತೆ ಇರುತ್ತದೆ ತಮ್ಮ ಮಕ್ಕಳ ಮೇಲೆ ತಮ್ಮ ಹೆಂಡತಿಯ ಮೇಲೆ (ಸೊಸೆಯ) ತಾತ್ಸಾರ ವಿರುತ್ತದೆ ಎಂಬ ಅಪಾದನೆ ಆರೋಪ ಮಾಡುತ್ತಾರೆ.

ಇನ್ನು ಕೆಲವರು ತಮ್ಮ ತಂದೆ–ತಾಯಿಗಳು ಆ ಮಗನ ಮೇಲೆ ಆ ಮಗನ ಮಕ್ಕಳ ಮೇಲೆ ವಿಶೇಷ ಪ್ರೀತಿ ಇದೆ. ತಮ್ಮ ಮೇಲೆ ಮಕ್ಕಳ ಮೇಲೆ ಏನೂ ಇಲ್ಲಾ ಎನ್ನುತ್ತಾರೆ. ಇನ್ನು ಕೆಲವರು ಆ ಸಹೋದರನಿಗೆ ಹೆಚ್ಚು ಆಸ್ತಿ, ಹಣ ಕೊಟ್ಟಿದ್ದಾರೆ ತನಗೆ ಕಡಿಮೆ ಕೊಟ್ಟಿದ್ದಾರೆ ಪಕ್ಷಪಾತತನದ ಆರೋಪ ಹೊರಿಸುತ್ತಾರೆ. ಇನ್ನುಕೆಲವರು ಆಸ್ತಿಗಾಗಿ ತಂದೆ–ತಾಯಿಗಳ ಮೇಲೆ ಕೋರ್ಟಿಗೆ ಹೋದರೆ ಹೇಗೆ ಎಂದು ವಿಚಾರಿಸುತ್ತಾರೆ ಇನ್ನು ಕೆಲವರು ಪತ್ನಿ ಹಾಗೂ ತಾಯಿಯ ನಿತ್ಯ ಕಲಹದಿಂದಾಗಿ ಬೇರೆ ಮನೆ ಮಾಡಿದರೆ ಹೇಗೆ ಎಂದು ವಿಚಾರಿಸಿದರೆ ಕೆಲವರು ಇದ್ದ ಮನೆಯಲ್ಲಿಯೇ ಬೇರೆ ಒಲೆಯಲ್ಲಿ ಪ್ರತ್ಯೇಕ ಬಿಡಾರ ಹೂಡಿದರೆ ಹೇಗೆ? ಎಂದು ವಿಚಾರಿಸುತ್ತಾರೆ.

ಹೀಗೆ ತಂದೆ–ತಾಯಿಗಳು ತಮ್ಮ ಮಕ್ಕಳ ವಿಷಯವಾಗಿ ಯಾವ ಆರೋಪ ಮಾಡುತ್ತಾರೆ ಯಾವ ಯಾವ ಪ್ರಕಾರದ ಪ್ರಶ್ನೆ ಕೇಳುತ್ತಾರೆ

ಇದರಂತೆ ಮಕ್ಕಳು ಕೂಡ ತಂದೆ-ತಾಯಿಗಳ ಮೇಲೆ ಯಾವ ಯಾವ ಆರೋಪ, ಯಾವ ಪ್ರಶ್ನೆ ಕೇಳುತ್ತಾರೆ ಎಂಬುದನ್ನು ಸಂಕ್ಷಿಪ್ತದಲ್ಲಿ ವಿವರಿಸಿದ್ದಾಯಿತು.

ಹೀಗೆ ಸಂತತಿ ಹಾಗೂ ಸಂತತೀ ಸೌಖ್ಯದ ವಿಷಯವಾಗಿ ಪತಿ-ಪತ್ನಿಯರು ತಂದೆ-ತಾಯಿಗಳು ಮಕ್ಕಳು ಎಂಥೆಂಥ ಪ್ರಶ್ನೆಗಳನ್ನು ವಿಚಾರಿಸುತ್ತಾರೆ ಎಂಬುದನ್ನು ಬರೆದಿದ್ದಾಯಿತು ವೃತ್ತಿಜೋತಿಷಿಗಳು ಇಂಥ ಪ್ರಶ್ನೆ-ಸಮಸ್ಯೆಗಳಿಗೆ ಉತ್ತರಿಸಬೇಕಾಗುತ್ತದೆ. ಪ್ರಸ್ತುತಃ ಈ ಅಧ್ಯಾಯದಲ್ಲಿಹಿಂದಿನ ಪುಟಗಳಲ್ಲಿ ಬರೆದ ಕೆಲ ಪ್ರಶ್ನೆ-ಸಮಸ್ಯೆಗಳಿಗೆ ಮಾತ್ರ ಉತ್ತರಿಸಲಾಗಿದೆ ಏಕೆಂದರೆ ನಾವು ಈ ಗಾಗಲೇ ಬರೆದು ಪ್ರಕಟಿಸಿದ **ವಧೂ-ವರರ ಜ್ಯೋತಿಷ್ಯ ಗ್ರಂಥದ** ಏಳನೇ ಅಧ್ಯಾಯದ 76 ನೇ ಪುಟದಿಂದ 85 ನೇ ಪುಟದವರೆಗೆ **ಸ್ತ್ರೀ ಜ್ಯೋತಿಷ್ಯ ಗ್ರಂಥದ** ಐದನೇ ಅಧ್ಯಾಯದ 92 ನೇಪುಟದಿಂದ 108 ನೇ ಪುಟದವರೆಗೆ ಹಾಗೂ **ಕುಂಡಲೀ ಗುಣ ನಿರ್ಣಯ ಗ್ರಂಥದ** 7ನೇ ಅಧ್ಯಾಯದ 67ನೇ ಪುಟದಿಂದ 73ನೇ ಪುಟದವರೆಗೆ ಹೀಗೆ ಮೂರು ಗ್ರಂಥಗಳಲ್ಲಿ ಸಂತತೀ ವಿಷಯವಾದ ಕೆಲ ಪ್ರಶ್ನೆಗಳಿಗೆ ವಿವರವಾಗಿ ವಿವರಿಸಲಾಗದೆ ಉತ್ತರಿಸಲಾಗಿದೆ ಆದುದರಿಂದ ಈ ಗ್ರಂಥದ ಈ ಅಧ್ಯಾಯದ ಕೆಲ ಸಂತತೀ ಸೌಖ್ಯದ ವಿಷಯವಾಗಿ ಯಾವ ಬಗೆಗೆ ಮುಂಜಾಗ್ರತೆ ಕ್ರಮ ಹಾಗೂ ಯಾವ ಬಗೆಗೆ ಪರಿಹಾರದ ಕ್ರಮಗಳನ್ನು ಕೈಕೊಳ್ಳಬೇಕು ಎಂಬ ವಿಷಯದ ಬಗೆಗೆ ಮೆಹತ್ವಕೊಟ್ಟು ಬರೆಯಲಾಗಿದೆ.

ಯಾರೊಬ್ಬರ ಸಂತತಿ ಹಾಗೂ ಸಂತತೀ ಸೌಖ್ಯದ ವಿಷಯವಾಗಿ ಪರಿಶೀಲಿಸುವಾಗ ಪ್ರಪ್ರಥಮವಾಗಿ ಜಾತಕ ಸರಿಯಾಗಿ ಬರೆಯಿಸಿದ್ದಾರೋ ಹೇಗೆ? ಎಂಬುದನ್ನು ಖಚಿತಪಡಿಸಿಕೊಂಡ ನಂತರ ಈ ಕೆಳಗೆ ಬರೆದ ಏಳು ಸಂಗತಿಗಳನ್ನು ಗಣನೆಗೆ ತೆಗೆದುಕೊಳ್ಳಬೇಕು (1) ಸಂತತೀ ಹಾಗೂ ಸಂತತಿ ಸೌಖ್ಯದ ಕಾರಕ ಪೋಷಕ ಗ್ರಹಗಳು (2) ಸಂತತಿ ಹಾಗೂ ಸಂತತೀ ಸೌಖ್ಯದ ಕಾರಕ ಪೋಷಕ ಸ್ಥಾನಗಳು (3) ಸಂತತಿ ಹಾಗೂ ಸಂತತೀ ಸೌಖ್ಯದ ಕಾರಕ ಪೋಷಕ ಲಗ್ನಗಳು (4) ಸಂತತಿ ಹಾಗೂ ಸಂತತೀ

ಸೌಖ್ಯದ ಕಾರಕ ಪೋಷಕ ರಾಶಿಗಳು (5) ಸಂತತಿ ಹಾಗೂ ಸಂತತಿ ಸೌಖ್ಯದ ಕಾರಕ ಪೋಷಕ ಮಾರಕ ಯೋಗಗಳು(6) ಸಂತಾನವಾಗುವ ಕಾಲ(7) ಅವಿ ಭಕ್ತ ಕುಟುಂಬವು ವಿಭಕ್ತ ಕುಟುಂಬವಾಗುವ ಕಾಲ ಈ ಎಲ್ಲ ಸಂಗತಿಗಳನ್ನು ಕುಲಂಕುಷವಾಗಿ ಅಭ್ಯಸಿಸಿದರೆ ಯಾರೊಬ್ಬರ ಸಂತತಿ ಹಾಗೂ ಸಂತತೀ ಸೌಖ್ಯ ಈ ಎರಡು ಪ್ರಶ್ನೆಗಳಿಗೆ ಉತ್ತರಿಸಲು ಸುಲಭವಾಗುತ್ತದೆ.

**1) ಸಂತತಿ ಹಾಗೂ ಸಂತತೀ ಸೌಖ್ಯದ ಪೋಷಕ ಹಾಗೂ ಮಾರಕ ಗ್ರಹಗಳು :–** ಹೇಗೆ ಮಾತೃ ಸೌಖ್ಯಕ್ಕೆ ಚಂದ್ರನು ಪೋಷಕ ಗ್ರಹವೋ ಹೇಗೆ ಪತಿ, ಪತ್ನೀ ಸೌಖ್ಯಕ್ಕೆ ಶುಕ್ರನು ಪೋಷಕ ಗ್ರಹವೋ ಹೇಗೆ ಪಿತೃ ಸೌಖ್ಯ ಮತ್ತು ಆರೋಗ್ಯ ಸೌಖ್ಯಕ್ಕೆ ಸೂರ್ಯನು ಪೋಷಕ ಗ್ರಹವೋ ಹಾಗೆ ಸಂತಾನಲಾಭಕ್ಕೆ ಸಂತತೀ ಸೌಖ್ಯಕ್ಕೆ ಗುರುವು ಪೋಷಕ ಗ್ರಹವು ಜಾತಕದಲ್ಲಿ ಗುರುವು ಬಲಾಢ್ಯನಾಗಿದ್ದರೆ ಸಂತಾನಲಾಭ ಹಾಗೂ ಸಂತತೀ ಸೌಖ್ಯಲಭಿಸುತ್ತದೆ ಉಳಿದೆಲ್ಲ ಗ್ರಹಗಳು ನಿರ್ಬಲವಿದ್ದು ಕೇವಲ ಗುರುವು ಮಾತ್ರ ಪಂಚಮೇಶನಾಗಿ ಬಲಾಢ್ಯನಿದ್ದರೆ ಅಥವಾ ಬಲಾಢ್ಯ ಗುರುವಿನ ದೃಷ್ಟಿ ಸಂತತೀ ಸ್ಥಾನದ ಮೇಲೆ ಬಿದ್ದರೂ ಕೂಡ ಸಂತಾನಲಾಭ ಹಾಗೂ ಸಂತತೀ ಸೌಖ್ಯಸಿಗುತ್ತದೆ.

ಸಂತತಿಗೆ ಮಾರಕ ಗ್ರಹಗಳೆಂದರೆ ರಾಹು-ಕೇತು ಅದರಲ್ಲಿಯು ರಾಹು ಹೆಚ್ಚು ಮಾರಕ. ಗ್ರಹ ರಾಹು ಪಂಚಮದಲ್ಲಿದ್ದರೆ ಗರ್ಭಸ್ರಾವ, ಗರ್ಭಪತನ ವಾಗುತ್ತದೆ. ಕೇತು ಕೂಡ ಸಂತತಿಗೆ ಮಾರಕವೂ ಇದ್ದಾಗ್ಯೂ ರಾಹುವಿನಷ್ಟು ಹಾನಿಕಾರಕನಲ್ಲ. ಶನಿಯು ಸಂತತಿಗೆ ಅಸಮಯಿತ ಹಾಗೂ ವಿಲಂಬ ವಾಗಿ ಸಂತತಿ ಕೊಡುವನು. ಆದರೆ ಸ್ತ್ರೀ ಸಂತಾನಕಾರಕನು ರವಿ, ಮಂಗಳರು ಅಲ್ಪ ಸಂತತಿಕಾರಕರು ರವಿ–ಮಂಗಳರು ಬಲಾಢ್ಯರಾಗಿ ಪಂಚಮ ದಲ್ಲಿದ್ದರೆ ಅಥವಾ ಪಂಚಮೇಶರಾಗಿ ಬಲಾಢ್ಯರಿದ್ದರೆ ಪುತ್ರ [ಗಂಡು ಸಂತತಿ ಪೋಷಕ] ಸಂತತಿ ಪೋಷಕರು ಆದರೆ ಅಲ್ಪಸಂತತಿಕಾರಕರು ಮಂಗಳ ನಿರ್ಬಲ ದುರ್ಬಲನಿದ್ದರೆ ಗರ್ಭಕ್ಕೆ ಹಾನಿಕಾರಕವು. ಬುಧನು ಸಂತತಿಗೆ ಪೂರಕ ಗ್ರಹವು ಆದರೆ ಅಲ್ಪಸಂತತಿಕಾರಕನು ಶುಕ್ರ, ಚಂದ್ರರು ಸಂತತಿಗೆ

ಪೋಷಕ ಪೂರಕ ಗ್ರಹಗಳು ಸಂತತಿಕಾರಕರು. ಆದರೆ ಶುಕ್ರ,ಚಂದ್ರರು ಬಲಾಢ್ಯರಾಗಿ ಪಂಚಮದಲ್ಲಿದ್ದರೆ ಅಥವಾ ಪಂಚಮಾಧೀಶರಾಗಿ ಬಲಾಢ್ಯರಾಗಿದ್ದರೆ ವಿಫಲ ಸಂತತಿಯೇನೋ ಕೊಡುವರು ಆದರೆ ಕನ್ಯಾ ಸಂತತಿಗಳೇ ಹೆಚ್ಚು.

**ಸಂತತಿ ಹಾಗೂ ಸಂತತಿ ಸೌಖ್ಯದ ಪೋಷಕಕಾರಕ ಸ್ಥಾನಗಳು** :

ಹೇಗೆ ಗ್ರಹಸೌಖ್ಯಕ್ಕೆ ಮಾತೃಸೌಖ್ಯಕ್ಕೆ ಚತುರ್ಥ ಸ್ಥಾನವು ಪೋಷಕ ಸ್ಥಾನವೋ ಹೇಗೆ ಪಿತೃಸೌಖ್ಯಕ್ಕೆ ದಶಮಸ್ಥಾನ ಪೋಷಕಸ್ಥಾನವೋ ಸದೃಢ ಪ್ರಕೃತಿಗೆ (ಲಗ್ನ) ತನುಸ್ಥಾನವು ಪೋಷಕ ಸ್ಥಾನವೋ ಹಾಗೆ ಸಂತತಿ ಹಾಗೂ ಸಂತತೀ ಸೌಖ್ಯಕ್ಕೆ ಪಂಚಮಸ್ಥಾನವು ಪೋಷಕವೂ ಪೂರಕವೂ ಕಾರಕವೂ ಸ್ಥಾನವಿರುತ್ತದೆ. ಆದುದರಿಂದ ಪಂಚಮಸ್ಥಾನದಲ್ಲಿ ಬಲಾಢ್ಯಗ್ರಹ ಹಾಗೂಪಂಚಮೇಶ ಬಲಾಢ್ಯನಿರುವಜಾತಕನಿಗೆ ಸಂತತಿ ಹಾಗೂ ಸಂತತೀಸೌಖ್ಯ ಸಿಗುತ್ತದೆ. ಪಂಚಮದ ನಂತರ ಲಾಭಸ್ಥಾನವನ್ನು ಪರಿಶೀಲಿಸಬೇಕು ಹಾಗೆ ನೋಡಿದರೆ ಲಾಭ ಸ್ಥಾನವೇನೋ ಸಂತತಿಕಾರಕ ಪೋಷಕ ಸ್ಥಾನ ಇರುವುದಿಲ್ಲ ಆದರೆ ಲಾಭಸ್ಥಾನದಲ್ಲಿರುವ ಗ್ರಹಗಳ ನೇರ ದೃಷ್ಟಿಯು ಪಂಚಮಸ್ಥಾನದ ಮೇಲೆ ಬೀಳುವುದರಿಂದ ಸಂತತಿ ವಿಷಯಕ್ಕೆ ಪರಿಣಾಮವನ್ನುಂಟು ಮಾಡುತ್ತದೆ. ಲಾಭಸ್ಥಾನದಲ್ಲಿರುವ ಗ್ರಹಗಳ ದೃಷ್ಟಿ ಅಷ್ಟೇ ಅಲ್ಲ. ಯಾವ ಗ್ರಹಗಳ ದೃಷ್ಟಿಯು ಪಂಚಮಸ್ಥಾನದ ಮೇಲೆಹಾಗೂ ಪಂಚಮೇಶನ ಮೇಲೆ ಬೀಳುತ್ತದೆಯೋ ಆ ಗ್ರಹಗಳ ಬಲಾಬಲದ ಮೇಲೂ ಕೂಡ ಸಂತತೀ ಹಾಗೂ ಸಂತತಿ ಸೌಖ್ಯದ ಪರಿಣಾಮವಾಗುತ್ತದೆ ದೃಷ್ಟಿ ಬೀಳುವ ಗ್ರಹ ಪಂಚಮೇಶನ ಮಿತ್ರರಾಗಿದ್ದರೆ ಶುಭ ಫಲವು ಶತ್ರು ವಾಗಿದ್ದರೆ ಅಶುಭ ಫಲವೂ ಸಿಗುತ್ತದೆ.

3] **ಸಂತತೀ ಹಾಗೂ ಸಂತತೀಸೌಖ್ಯದ ಪೋಷಕಕಾರಕಲಗ್ನಗಳು** :

ನಿರ್ದಿಷ್ಟ ಲಗ್ನಗಳೇ ಸಂತತೀ ಪೋಷಕಕಾರಕ ಲಗ್ನಗಳಿರುತ್ತವೆ ಎಂದು ಹೇಳಲು ಬಾರದು ಯಾವುದೇ ಲಗ್ನವಿರಲಿ ಬಲಾಢ್ಯ ಗ್ರಹವು ಪಂಚಮದಲ್ಲಿದ್ದರೆ ಅಥವಾ ಪಂಚಮೇಶ ಬಲಾಢ್ಯನಿದ್ದರೆ ಸಂತತೀ ಹಾಗೂ ಸಂತತೀಸೌಖ್ಯ ಸಿಗುತ್ತದೆ. ಅವರಲ್ಲಿಯೂ ಸಿಂಹ ಹಾಗೂ ವೃಶ್ಚಿಕ ಲಗ್ನಗಳಿದ್ದು ಗುರುವು

ಬಲಾಢ್ಯನಿದ್ದರೆ ಮೇಷ ಲಗ್ನವಿದ್ದು ಸೂರ್ಯನು ಬಲಾಢ್ಯನಿದ್ದರೆ ಕರ್ಕ ಹಾಗೂ ಧನು ಲಗ್ನಗಳಿದ್ದು ಮಂಗಳ ಬಲಾಢ್ಯದ್ದರೆ ಹೀಗೆ ಮೇಲೆ ಬರೆದ ಐದು ಲಗ್ನಗಳು ಕ್ರಮಶಃ ಗುರು, ರವಿ, ಮಂಗಳ ಬಲಾಢ್ಯರಿದ್ದ ಜಾತಕದ ವರಿಗೆ ಸಂತತೀ ಹಾಗೂ ಸಂತತೀ ಸೌಖ್ಯ ಸಿಗುತ್ತದೆ ಇಷ್ಟೇ ಅಲ್ಲಾ ಪುತ್ರ [ಗಂಡು] ಸಂತಾನದ ಸೌಖ್ಯ ಪುತ್ರ ಸಂಖ್ಯೆಗಳ ಸೌಖ್ಯ ಸಹ ಸಿಗುತ್ತದೆ.

ಮಿಥುನ. ಹಾಗೂ ಮಕರ ಲಗ್ನಗಳಿದ್ದು, ಶುಕ್ರನು ಬಲಾಢ್ಯನಿದ್ದರೆ ಕನ್ಯಾ ಹಾಗೂ ತುಲಾಲಗ್ನಗಳಿಲ್ಲಿದ್ದು ಶನಿಯು ಬಲಾಢ್ಯನಿದ್ದರೆ ಮೀನ ಲಗ್ನ ವಿದ್ದು ಚಂದ್ರನು ಬಲಾಢ್ಯನಿದ್ದರೆ ಹೀಗೆ ಮೇಲೆ ಬರೆದ ಐದು ಲಗ್ನಗಳ ಕ್ರಮಶಃ ಶುಕ್ರ, ಶನಿ, ಚಂದ್ರರು ಬಲಾಢ್ಯರಿರುವ ಜಾತಕರಿಗೆ ಸಂತತೀ ಸೌಖ್ಯ ಸಿಗುತ್ತದೆ. ಆದರೆ ಕನ್ಯಾ ಸಂತತಿ ಹೆಚ್ಚಾಗಿರುತ್ತದೆ.

ವೃಷಭ ಹಾಗೂ ಕುಂಭ ಲಗ್ನಗಳಿದ್ದು ಬುಧನು ಬಲ್ಯಾಢ್ಯನಿದ್ದ ಜಾತಕನಿಗೆ ಸಂತತೀಸೌಖ್ಯವೇನೋ ಸಿಗುತ್ತದೆ. ಆದರೆ ಗಂಡು ಸಂತಾನ ಹೆಚ್ಚೊ ಹೆಣ್ಣು ಸಂತಾನ ಹೆಚ್ಚೊ ಎಂದು ನಿಖರವಾಗಿ ಹೇಳಲುಬಾರದು ಏಕೆಂದರೆ ಬುಧನೊಂದಿಗೆ ಹೆಚ್ಚಾಗಿ ರವಿಯೂ ಶುಕ್ರನು ಇರುವುದೇ ಹೆಚ್ಚು ರವಿಯೊಂದಿಗಿದ್ದರೆ ಗಂಡು ಸಂಖ್ಯೆಗಳನ್ನು ಶುಕ್ರನೊಂದಿಗಿದ್ದರೆ ಹೆಣ್ಣು ಸಂಖ್ಯೆಯನ್ನು ಬುಧನೊಬ್ಬನೆ ಬಲಾಢ್ಯನಿದ್ದರೆ ಗಂಡು ಹೆಣ್ಣುಗಳು ಸಮ ವಾಗಿರುತ್ತವೆ. ಆದರೆ ಅನಿಶ್ಚಿತತೆ ಇರುತ್ತದೆ.

**4] ಸಂತತಿ ಹಾಗೂ ಸಂತತಿಸೌಖ್ಯದ ಪೋಷಕಕಾರಕ ಪೂರಕ ರಾಶಿಗಳು :** ಸಾಮಾನ್ಯವಾಗಿ ಜಲ ರಾಶಿಗಳು ವಿಪುಲ ಸಂತತೀ ಬಹುಪ್ರಸವಕಾರಕ ರಾಶಿಗಳು ಇವುಗಳ ನಂತರ ಭೂರಾಶಿಗಳು ಮಧ್ಯಮ ಸಂತತಿಕಾರಕ ಪೋಷಕರಾಶಿಗಳು ಇವುಗಳ ನಂತರ ವಾಯು ರಾಶಿಗೂ ಅಲ್ಪ ಸಂತತಿ ಅಗ್ನಿ ರಾಶಿಗಳಂತೂ ಅತೀ ಅಲ್ಪ ಇಲ್ಲವೆ ವಂಧ್ಯತ್ವವನ್ನು ಕೊಡುತ್ತವೆ.

ಕರ್ಕ, ವೃಶ್ಚಿಕ. ಮೀನ, ವೃಷಭ, ಕನ್ಯಾ, ಮಕರ ಇವು ಬಹು ಪ್ರಸವ ವಿಪುಲ ಸಂತತಿ ಕಾರಕರಾಶಿಗಳು ಮಿಥುನ, ತುಲಾ, ಕುಂಭ ಈ ರಾಶಿಗಳು

ಅಲ್ಪ ಸಂತತೀಕಾರಕ ರಾಶಿಗಳು ಮೇಷ, ಸಿಂಹ. ಧನು ಇವು ಅತೀ ಅಲ್ಪ ಇಲ್ಲವೆ ವಂಧ್ಯಾರಾಶಿಗಳು.

ಪುರುಷರಾಶಿಗಳು ಪುರುಷ ಗ್ರಹಗಳು ಗಂಡು ಸಂತತಿಗೆ ಪೋಷಕ ರಾಶಿಗಳಿದ್ದರೆ ಸ್ತ್ರೀ ಗ್ರಹಗಳು ಸ್ತ್ರೀರಾಶಿಗಳು ಕನ್ಯಾ ಸಂತತಿಗೆ ಪೋಷಕ ರಾಶಿಗಳು,

5) **ಸಂತತಿ ಹಾಗೂ ಸಂತತೀ ಸೌಖ್ಯದ ಪೋಷಕ ಹಾಗೂ ಮಾರಕ ಯೋಗಗಳು:**—ಸಂತತಿ ಸೌಖ್ಯದ ಪೋಷಕ ಹಾಗೂ ಮಾರಕ ಯೋಗಗಳು ಅನೇಕವಿರುವವು. ಈ ಅಧ್ಯಾಯದಲ್ಲಿ ಕೆಲವೊಂದು ಯೋಗಗಳ ಬಗೆಗೆ ಮಾತ್ರ ಬರೆಯಲಾಗಿದೆ ಹೆಚ್ಚಿನ ವಿಷಯಕ್ಕಾಗಿ ನಮ್ಮ ವಧೂ-ವರರ ಜೋತಿಷ್ಯದ 7ನೇ ಅಧ್ಯಾಯವನ್ನು ಸ್ತ್ರೀ ಜೋತಿಷ್ಯದ 5ನೇ ಅಧ್ಯಾಯವನ್ನು ಕುಂಡಲಿ ಗುಣ ನಿರ್ಣಯದ 7 ನೇ ಅಧ್ಯಾಯವನ್ನು ಓದಿರಿ.

1) ಗುರು-ಶುಕ್ರ, ಗುರು-ಚಂದ್ರ, ಚಂದ್ರ-ಶುಕ್ರ ಇವರ ಯುತಿ ಯೋಗ ಪ್ರತಿಯೋಗ ಲಗ್ನ, ಪಂಚಮ, ಲಾಭ, ನವಮ, ಈ ಸ್ಥಾನದಲ್ಲಿ ಆದರೆ ಸಂತತೀ ಸೌಖ್ಯ ಸಿಗುತ್ತದೆ.

2) ಶನಿ-ಮಂಗಳ ಶನಿ-ಚಂದ್ರ ಶನಿ-ರವಿ ರವಿ-ಕೇತು ರಾಹು-ಮಂಗಳ ಈ ಗ್ರಹಗಳ ಯುತಿ ಯೋಗ ಪ್ರತಿಯೋಗ ಲಗ್ನ, ಪಂಚಮ, ಲಾಭ, ನವಮದಲ್ಲಿ ಆದರೆ ಸಂತತೀ ಸೌಖ್ಯ ಸಿಗಲಾರದು.

3) ಪಂಚಮಸ್ಥಾನದಲ್ಲಿಯ, ಗ್ರಹ ಪಂಚಮೇಶ, ಗುರು, ಈ ಮೂರೇ ಮೂರು ಗ್ರಹಗಳು ಬಲಾಢ್ಯನಿರುವ ಜಾತಕನಿಗೆ ಸಂತತೀ ಸೌಖ್ಯ ಸಿಗುತ್ತದೆ.

4) ಶನಿ, ರಾಹು, ಮಂಗಳರಲ್ಲಿ ಯಾರೊಬ್ಬರು ಪಂಚಮದಲ್ಲಿದ್ದರೆ ಸಂತತೀ ಸೌಖ್ಯ ಸಿಗುವುದಿಲ್ಲ.

5) ಶುಕ್ರ ಅಥವಾ ಚಂದ್ರರು ಬಲಾಢ್ಯರಾಗಿ ಪಂಚಮದಲ್ಲಿದ್ದರೆ ಅಥವಾ ಪಂಚಮೇಶರಾಗಿ ಬಲಾಢ್ಯರಿದ್ದರೆ ಕನ್ಯಾ ಸಂಖ್ಯೆ ಹೆಚ್ಚು ಆದರೆ ಸಂತತೀಸೌಖ್ಯ ಸಿಗುತ್ತದೆ ಅಲ್ಲದೇ ಬೇಗ ಸಂತಾನ ಪ್ರಾಪ್ತಿ ಆಗುತ್ತದೆ.

6) ಗುರು, ರವಿ, ಮಂಗಳರು ಬಲಾಢ್ಯರಾಗಿ ಪಂಚಮದಲ್ಲಿದ್ದರೆ

ಅಥವಾ ಪಂಚಮೇಶರಾಗಿ ಬಲಾಢ್ಯರಿದ್ದರೆ ಪುತ್ರ ಸಂಖ್ಯೆ (ಗಂಡುಸಂತಾನದ ಸಂಖ್ಯೆ) ಹೆಚ್ಚು ಹಾಗೂ ಸಂತತೀ ಸೌಖ್ಯ ಬಹಳ.

7) ಬಲಾಢ್ಯ ಶನಿ ಪಂಚಮದಲ್ಲಿದ್ದರೆ ಅಥವಾ ಪಂಚಮೇಶನಾಗಿ ಬಲಾಢ್ಯನಿದ್ದರೆ ಮೊದಲು ಕನ್ಯಾ ಸಂತತಿಯನ್ನು ಆ ಬಳಿಕ ಪುತ್ರ ಸಂತತಿ ಕೊಡುವನು. ಆದರೆ ಸಂತತೀಸೌಖ್ಯ ಸಿಗುವುದಿಲ್ಲ ಅಲ್ಲದೇ ವಿಲಂಬ ಸಂತತಿ ಆಗುತ್ತದೆ.

8) ಗುರುವು ಬಲಾಢ್ಯನಾಗಿ ಪಂಚಮದಲ್ಲಿದ್ದರೆ ಅಥವಾ ಪಂಚಮೇಶನಾಗಿ ಬಲಿಷ್ಠನಾಗಿದ್ದರೆ ಗಂಡು ಸಂತಾನ ಹೆಚ್ಚು ಬೇಗ ಸಂತತಿ ಪ್ರಾಪ್ತಿ ಆಗುತ್ತದೆ ಸಂತತೀಸೌಖ್ಯವೂ ಸಿಗುತ್ತದೆ.

9) ಕಾಳಸರ್ಪಯೋಗವಿದ್ದ ಜಾತಕನಿಗೆ ಸಂತತೀ ಸೌಖ್ಯ ಕಡಿಮೆ ಸಂತಾನಕ್ಕೆ ತೊಂದರೆ ಗರ್ಭಕ್ಕೆ ತೊಂದರೆ.

10) ಗಜಕೇಶರಿಯೋಗ, ಗುರು–ಚಂದ್ರ, ಗುರು–ಶುಕ್ರರ ನವ ಪಂಚಮ ಯೋಗಗಳು ರವಿ–ಗುರು, ಗುರು-ಮಂಗಳರ ನವಪಂಚಮ ಯೋಗಗಳು ಗುರು-ಚಂದ್ರರ ಯುತಿಯೋಗ, ಲಗ್ನ, ಭಾಗ್ಯ, ಪಂಚಮ, ಲಾಭ ತೃತೀಯ ಈ ಸ್ಥಾನದಲ್ಲಿದ್ದರೆ ಸಂತತೀಸೌಖ್ಯ ಕೊಡುತ್ತಾನೆ.

11) ಶನಿ–ಮಂಗಳ, ಶನಿ–ರವಿ, ಶನಿ–ಚಂದ್ರ, ರವಿ–ಕೇತು, ರಾಹು–ಮಂಗಳರ ಷಡಾಷ್ಟಕ ಯೋಗ, ಪ್ರತಿಯೋಗ ಯೋಗಗಳು ಸಂತತೀ ಸೌಖ್ಯಕ್ಕೆ ಮಾರಕವು ಸಂತತಿ ಪೋಷಕ ಹಾಗೂ ಮಾರಕ ಯೋಗಗಳ ಸಂಕ್ಷಿಪ್ತ ವಿವರಣೆ ವಿವರಿಸಿದ್ದಾಗಿದೆ.

6) **ಸಂತಾನವಾಗುವ ಕಾಲ :** ಯಾರೊಬ್ಬ ಜಾತಕನಿಗೆ ಸಂತಾನ ಪ್ರಾಪ್ತಿ ಯಾವಾಗ ಆಗುತ್ತದೆ ಎಂಬುದೇ ಮುಖ್ಯ ಪ್ರಶ್ನೆ, ಈ ವರ್ಷ ಯೋಗವಿದೆ ಮುಂದಿನ ವರುಷ ಯೋಗವಿದೆ ಹೀಗೆಲ್ಲ ಹೇಳಿದರೆ ಮುಂದಿನ ಪ್ರಶ್ನೆ ಎಂದರೆ ಮುಂದಿನ ಮಗು ಮುಂದಾಗುವ ಮಗು ಗಂಡೋ? ಹೆಣ್ಣೋ? ಎಂದು ವಿಚಾರಿಸುತ್ತಾರೆ ಸಂತಾನ ಲಾಭವಾಗುವ ಕಾಲ ಕಾಲ ಹೇಳುವುದು ಸುಲಭ ಆದರೆ ಮುಂದಿನ ಮಗು ಗಂಡೋ? ಹೆಣ್ಣೋ? ಹೇಳುವುದು ಕಠಿಣವು.

ಆದರೆ ಇದು ಮುಖ್ಯ ಪ್ರಶ್ನೆ ಇವನ್ನೇ ಈಗ ಹೆಚ್ಚು ಜನ ಪ್ರಶ್ನಿಸುತ್ತಾರೆ. ಹಿಂದಿನವರಿಗೆ ಈ ಪ್ರಶ್ನೆ ಅಷ್ಟೊಂದು ಮಹತ್ವದ್ದು ಇದ್ದಿಲ್ಲ. ಕಾರಣ ಈಗಿನಂತೆ ಕುಟುಂಬ ಯೋಜನೆಯ ಪದ್ಧತಿ ಸಂತಾನ ಪ್ರತಿಬಂಧ ಯೋಜನೆ ಆಗ ಬಳಕೆಯಲ್ಲಿ ಇದ್ದಿಲ್ಲ, ಅಲ್ಲದೇ ಬಹುಪತ್ನೀತ್ವ ಪದ್ಧತಿ ರೂಢಿಯಲ್ಲಿತ್ತು.

ಒಬ್ಬ ಹೆಂಡತಿಗೆ ಕೇವಲ ಕನ್ಯಾ ಸಂತತಿಯೇ ಬಹಳವಾಗಿದ್ದರೆ ಗಂಡು ಸಂತತಿಗಾಗಿಯೇ ಮತ್ತೊಬ್ಬ ಹೆಂಡತಿಯನ್ನು ಮದುವೆ ಮಾಡಿಕೊಳ್ಳುತ್ತಿದ್ದರು. ಅದೇನೆ ಇರಲಿ ಈ ವಿಷಯವನ್ನು ಹೇಗೆ ಪರಿಶೀಲಿಸಬೇಕೆಂಬುದನ್ನು ನೋಡುವಾ.

ಸಂತಾನವಾಗುವ ಕಾಲದ ಬಗೆಗೆ ನಿರ್ಣಯಿಸಬೇಕಾದರೆ ಎರಡು ಸಂಗತಿಗಳನ್ನು ಪರಿಶೀಲಿಸಬೇಕು. 1] ಗೋಚರೀ ಗ್ರಹಗಳ ಪರಿಭ್ರಮಣದ ಪರಿಣಾಮ 2] ಮಹರ್ದಶೆ ಅಂತರ್ದಶೆಗಳ ಪರಿಣಾಮ.

ಸಂತತೀ ವಿಷಯಕ್ಕಾಗಿ ಗೋಚರೀ ಗ್ರಹಗಳಲ್ಲಿ ಕೇವಲ ಎರಡು ಗ್ರಹಗಳ ಪರಿಭ್ರಮಣ ಪರಿಣಾಮವನ್ನು ಪರಿಶೀಲಿಸಬೇಕು. ಒಂದು ಗೋಚರೀ ಗುರುವಿನ ಪರಿಭ್ರಮಣ, 2] ಗೋಚರೀ ಶನಿಯ ಪರಿಭ್ರಮಣ.

1] ಗುರುವು ಗೋಚರೀಯಿಂದ 2-5-7–9-11 ನೇಯವನಾಗಿ ಬಂದಾಗ ಸಂತತಿ ಪ್ರಾಪ್ತಿ ಕೊಡುವನು ಇದರಂತೆ ಗುರುವಿನ ಗೋಚರೀ ಪರಿಭ್ರಮಣವು ಲಗ್ನ, ತೃತೀಯ, ಪಂಚಮ, ನವಮ, ಲಾಭ, ಸುಖ ಸ್ಥಾನದ ಮೇಲಿಂದ ಆಗುವಾಗಲು ಕೂಡ ಸಂತಾನ ಭಾಗ್ಯವನ್ನು ದಯಪಾಲಿಸುತ್ತಾನೆ ಇದರಂತೆ 1–3–10 ನೇ ಗುರು ಬಂದಾಗ ಕೂಡ ಸಂತಾನ ಲಾಭ ಕೊಡುತ್ತಾನೆ ಮೇಲಿನಷ್ಟು ಖಾತ್ರೀಇಲ್ಲ ಆದರೆ ಗೋಚರೀ ಗುರುವು 4–6–8–12 ನೇಯವನಾಗಿ ಬಂದಾಗ ಸಂತತಿ ಸೌಖ್ಯಕ್ಕೆ ಮಾರಕನು ಇದೇ ಅವಧಿಯಲ್ಲಿ ಅವಿಭಕ್ತ ಕುಟುಂಬ ಒಡೆದು ವಿಭಕ್ತ ಕುಟುಂಬವಾಗುತ್ತದೆ.

ಇದರಂತೆ ಶನಿಯು 3-6-10-11 ನೇ ಶನಿ ಬಂದಾಗ ಸಂತಾನ ಲಾಭ ಕೊಡುತ್ತಾನೆ ಆದರೆ 1-2-4-5 = 8 12 ನೇ ಶನಿ ಬಂದಾಗ ಅವಿಭಕ್ತ ಕುಟುಂಬವು ಒಡೆದು ವಿಭಕ್ತ ಕುಟುಂಬವಾಗುತ್ತದೆ.

ಯಾರೊಬ್ಬರ ಸಂತಾನವಾಗುವ ಕಾಲ ಬಗೆಗೆ ನಿರ್ಣಸುವಾಗ ಗೋಚರಿ ಗುರು-ಶನಿಯರ ಪರಿಭ್ರಮಣದ ಪರಿಣಾಮದಂತೆ ಮಹರ್ದಶೆ ಅಂತರದರ್ಶೆಗಳ ಪರಿಣಾಮವು ಆಗುತ್ತದೆ ಜಾತಕದಲ್ಲಿ ಯಾವ ಗ್ರಹ ಬಲಾಢ್ಯ ಇರುವವೋ ಆ ಗ್ರಹಗಳ ಮಹಾದರ್ಶೆ ಅಂತರದರ್ಶೆಗಳಲ್ಲಿ ಸಂತಾನ ಪ್ರಾಪ್ತಿ ಆಗುತ್ತದೆ ವಿಶೇಷವಾಗಿ ಬಲಾಢ್ಯ ಗುರುವಿನ ಪಂಚಮ ಸ್ಥಾನದಲ್ಲಿರುವ ಬಲಾಢ್ಯ ಗ್ರಹದ ಬಲಾಢ್ಯ ಪಂಚಮೇಶನ ಬಲಾಢ್ಯ ಭಾಗ್ಯೇಶನ ಭಾಗ್ಯ ಸ್ಥಾನದಲ್ಲಿರುವ ಬಲಾಢ್ಯ ಗ್ರಹದ ಮಹರ್ದಶೆ ಅಂತರದರ್ಶೆಯಲ್ಲಿ ಸಂತಾನ ಲಾಭವಾಗುತ್ತದೆ ಜಾತಕದಲ್ಲಿ ದುರ್ಬಲ ನಿರ್ಬಲ ಗ್ರಹಗಳ ಮಹರ್ದಶೆ ಅಂತರದರ್ಶೆಯಲ್ಲಿ ದುರ್ಬಲ ನಿರ್ಬಲನಿರುವ ಷಷ್ಠೇಶನ ಸುಖೇಶನ ಮಹರ್ದಶೆ ಅಂತರದರ್ಶೆಯಲ್ಲಿ ಅವಿಭಕ್ತ ಕುಟುಂಬ ಒಡೆದು ವಿಭಕ್ತ ಕುಟುಂಬವಾಗುತ್ತದೆ.

**ಮುಂದಿನ ಮಗು ಗಂಡೋ ? ಹೆಣ್ಣೋ ?** ಈ ಪ್ರಶ್ನೆಗೆ ಉತ್ತರಿಸಲು ಇದೇ ಗ್ರಂಥದ ಇದೇ ಅಧ್ಯಾಯದ 213 ಪುಟದಿಂದ 216 ಪುಟದವರೆಗೆ ವಿವರಿಸಿದಂತೆ ಗುರು. ಪಂಚಮೇಶ ಪಂಚಮ ಸ್ಥಾನದಲ್ಲಿರುವ ಗ್ರಹಗಳ ಬಲಾಬಲವನ್ನು ಪರಿಶೀಲಿಸಬೇಕು ಜಾತಕದಲ್ಲಿ ಪುರುಷ ಗ್ರಹಗಳು, ಪುರುಷ ರಾಶಿಯು ಬಲಾಢ್ಯವಾಗಿದ್ದರೆ ಗಂಡು ಸಂತಾನ ಅಧಿಕವೆಂತಲೂ ಸ್ತ್ರೀ ಗ್ರಹ ಹಾಗೂ ಸ್ತ್ರೀ ರಾಶಿಗಳು ಬಲಾಢ್ಯವಾಗಿದ್ದರೆ ಕನ್ಯಾಧಿಕ್ಯವೆಂತಲೂ ಹೇಳಬೇಕಾಗುತ್ತದೆ ಜಾತಕದಲ್ಲಿ ಗಂಡು ಸಂತಾನ ಅಧಿಕವೋ ಹೆಣ್ಣು ಸಂತಾನ ಅಧಿಕವೋ ಎಂಬುದನ್ನು ವಿವರಿಸಿದ್ದಾಯಿತು ಆದರೆ ನಮ್ಮ ಕೇಳುಗರ ಪ್ರಶ್ನೆಯೆಂದರೆ ಮುಂದಿನ ಮಗು ಗಂಡೋ ? ಹೆಣ್ಣೋ ? ಈ ಪ್ರಶ್ನೆಗೆ ಉತ್ತರಿಸಬೇಕಾದರೆ ಜಾತಕದಲ್ಲಿ ಪುರುಷ ಗ್ರಹಗಳ ಪುರುಷ ರಾಶಿಗಳ ಪ್ರಾಬಲ್ಯವಿದ್ದರೆ ಗಂಡು ಸಂತಾನವೆಂತಲೂ ಸ್ತ್ರೀಗ್ರಹ ಸ್ತ್ರೀ ರಾಶಿಯ ಪ್ರಾಬಲ್ಯವಿದ್ದರೆ ಹೆಣ್ಣು ಸಂತಾನವಾಗುತ್ತದೆಂದು ಹೇಳಬಹುದು

ಬಲಾಢ್ಯ ಪುರುಷ ಗ್ರಹಗಳ ಮಹರ್ದಶೆ ಅಂತರ್ದಶೆ ನಡೆದರೆ ಗಂಡು ಸಂತಾನವೆಂತಲೂ ಸ್ತ್ರೀಗ್ರಹದ ಮಹರ್ದಶೆ ಅಂತರ್ದಶೆ ನಡೆಯುತ್ತಿದ್ದರೆ ಕನ್ಯಾ ಸಂತಾನವೆಂತಲೂ ಹೇಳಬಹುದು.

**ಸಂತತಿ ಹಾಗೂ ಸಂತತೀಸೌಖ್ಯವೆಂದರೇನು.** ಸಂತತಿ ಹಾಗೂ ಸಂತತೀ ಸೌಖ್ಯದ ಬಗೆಗೆ ವಿವರಿಸುವಾ. ಸಂತತಿಯಂದರೆ ಯಾರೊಬ್ಬ ಜಾತಕನಿಗೆ ಸಂತಾನವಾಗುವಿಕೆ ಸಂತಾನವಾಗುವಿಕೆ ಯಂದರೆ ಸಂಖೆಗಳ ವೃದ್ಧಿ ಯಿಂದ ಹಿಂದಿನಪುಟದಲ್ಲಿ ವಿವರಿಸಿದತೆ ವಿಪುಲಸಂತತಿ, ಮಧ್ಯಮಸಂತತಿ, ಅಲ್ಪ ಸಂತತೀ, ಅತ್ಯಲ್ಪ ಸಂತತೀ, ವಂಧ್ಯಾ ಬಹುಪ್ರಸವ, ಪ್ರತ್ಯಾಧಿಕ್ಯ ಕನ್ಯಾಧಿಕ್ಯ ಗರ್ಭಕ್ಕೆ ಮಾರಕ, ಅನಿಯಮಿತ ಸಂತತೀ ಹೀಗೆ ಸಂತತೀ ಸಂಖ್ಯೆಗೆ ಮಹತ್ವವಿದೆ. ಸಂತತೀಸೌಖ್ಯವೆಂದ್ದರೆ ಮಕ್ಕಳು ಆಜ್ಞಾಧಾರಕರಾಗುವಿಕೆ. ಮಕ್ಕಳಿಂದ ತಂದೆ–ತಾಯಿಗಳ ಆರೈಕೆಯಾಗುವಿಕೆ ಉಪಚಾರವಾಗುವಿಕೆ ಮಕ್ಕಳು ತಂದೆ–ತಾಯಿಗಳಸೇವೆ ಮಾಡುವಿಕೆ. ಕಾಯಾ ವಾಚಾ ಮನಸಾ ಸೇವೆಮಾಡುವಿಕೆ, ಮಕ್ಕಳು ತಂದೆ–ತಾಯಿಗಳಿಗೆ ಆರ್ಥಿಕ ವೃಷ್ಟಿಯಿಂದಲೂ ಸೇವೆ ಮಾಡುವಿಕೆ, ದೈಹಿಕವಾಗಿಯೂ ಸೇವೆ ಮಾಡುವಿಕೆ ಅಂದರೆ ಮಾತ್ರ ಸಂತತಿಸೌಖ್ಯ ಹೀಗೆ ಸಂತತೀ ಹಾಗೂ ಸಂತತೀಸೌಖ್ಯದ ಅರ್ಥವಿವರಣೆವಿದ ಯಾರಜಾತಕದಲ್ಲಿ ಪಂಚಮಸ್ಥಾನದಲ್ಲಿ ಬಲಾಢ್ಯ ಗ್ರಹ ಪಂಚಮೇಶ ಬಲಾಢ್ಯ ಹಾಗೂ ಸಂತತೀಕಾರಕ ಪೋಷಕ ಗ್ರಹವಾದ ಗುರುವು ಹೀಗೆ ಮೂರು ಗ್ರಹಗಳು ಬಲಾಢ್ಯ ವಿದ್ದರೆ ಮಾತ್ರ ಸಂತತೀಸೌಖ್ಯ ಸಿಗುತ್ತದೆ. ಕನಿಷ್ಟ 2 ಗ್ರಹಗಳು ಬಲಾಢ್ಯ ವಿದ್ದರೂ ಕೂಡ ಸಂತತಿಸೌಖ್ಯ ವಿದೆ ಅಂದರೆ ಒಂದೇ ಗ್ರಹ ಬಲಾಢ್ಯ ವಿದ್ದರೆ ವಂಶಾಭಿವೃದ್ಧಿಗೆ ಮಾತ್ರ ಸಹಕಾರ ಎಂದು ಅರ್ಥ ಮಾಡಬಹುದು. ಅಂದರೆ ಸಂತತಿ ಸಂಖ್ಯೆಯಲ್ಲಿರುತ್ತಾರೆ. ಈವರಿಗೆ ಯಾರೊಬ್ಬ ಜಾತಕನ ಮಕ್ಕಳನ್ನು ಪಡೆಯುವ ಸಲುವಾಗಿ ಯಾವ ಯಾವ ಪ್ರಕಾರದ ಪ್ರಶ್ನೆ ಸಮಸ್ಯೆಗಳಿರುತ್ತವೆ ಹಾಗೂ ಮಕ್ಕಳ ಬೆಳೆದು ದೊಡ್ಡವರಾಗಿ ವೃತ್ತಿಗೆ ಅಂಟಿಕೊಂಡು ವಿವಾಹ ಮಾಡಿಕೊಂಡ ಬಳಿಕ ತಂದೆ–ತಾಯಿ ಮಕ್ಕಳ ಸಂಬಂಧಿಸಿದ ಪ್ರಶ್ನೆ ಸಮಸ್ಯೆಗಳು ಹೇಗಿರುತ್ತವೆ ಅವುಗಳೆಗೆಲ್ಲಾ ಉತ್ತರಿಸಿದ್ದಾಯಿತು. ಇದಲ್ಲದೇ ಸಂತಾನವಾಗುವಕಾಲ ವಿಪುಲ

ಸಂತತಿ. ಅಲ್ಪ ಸಂತತಿ ಹೆಚ್ಚು ಬಹು ಪ್ರಸವದ ಪೋಷಕಕಾರಕ ಗ್ರಹ ಸ್ಥಾನ ರಾಶಿ ಲಗ್ನ ಗಳಾವವುವೆಂಬುದನ್ನು ವಿವರಿಸಿದ್ದಾಯಿತಲ್ಲದೇ ಸಂಖ್ಯೆ ದೃಷ್ಟಿಯಿಂದ ಸಂತತಿ ಹಾಗೂ ಸಂತತೀ ಸೌಖ್ಯ ಇವುಗಳ ಅರ್ಥವಿವರಣೆಯನ್ನು ಮಾಡಿದ್ದಾಯಿತು ಇನ್ನು ಗ್ರಂಥದ ಹೆಸರಿನಂತೆ ಅಧ್ಯಾಯದ ಶೀರ್ಷಿಕೆಯಂತೆ. ಸಂತತೀ ವಿಷಯವಾಗಿ ಯಾವ ಯಾವ ಮುಂಜಾಗ್ರತೆ ಹಾಗೂ ಪರಿಹಾರಕ್ರಮಗಳನ್ನು ಕೈಕೊಳ್ಳಬೇಕು ಎಂಬುದನ್ನು ಪರಿಶೀಲಿಸುವ ಪ್ರಥಮವಾಗಿ ಮುಂಜಾಗ್ರತೆ ಕ್ರಮ ಆ ಬಳಿಕ ಪರಿಹಾರದ ಕ್ರಮಗಳು,

1) **ಮಕ್ಕಳ ಮುಂಜಾಗ್ರದಕ್ರಮ :** ಯಾರೊಬ್ಬ ಜಾತಕನ ಸಂತತಿ ಹಾಗೂ ಸಂತತೀಸೌಖ್ಯದ ವಿಷಯವಾಗಿ ಯಾವ ಯಾವ ಮುಂಜಾಗ್ರತೆ ಕ್ರಮಗಳನ್ನು ಕೈಕೊಳ್ಳುವ ಪೂರ್ವದಲ್ಲಿ ಜಾತಕವನ್ನು ಕೂಲಂಕುಷವಾಗಿ ಅಭ್ಯಸಿಸಬೇಕು ಪ್ರಮುಖವಾಗಿ ಪಂಚಮಸ್ಥಾನದಲ್ಲಿಯ ಗ್ರಹದ ಗ್ರಹಗಳ ಬಲಾಬಲ ಪಂಚಮೇಶದ ಬಲಾಬಲ. ಸಂತತೀ ಪೋಷಕ ಗ್ರಹವಾದ ಗುರುವಿನ ಬಲಾಬಲ ಗೋಚರೀ ಗ್ರಹಗಳ ಶುಭಾ ಅಶುಭ ಫಲ ಹಾಗೂ ಮಹರ್ದಶೆ ಅಂತರ ದಶೆಯ ಪರಿಣಾಮ ಈ ಐದು ಸಂಗತಿಗಳು ಪೂರಕ ವಿದ್ದರೆ ಯಾವ ಮುಂಜಾಗ್ರತೆ ಕ್ರಮವಾಗಲೀ ಪರಿಹಾರದ ಕ್ರಮಗಳಾಗಲೀ ಕೈಕೊಳ್ಳುವ ಅವಶ್ಯಕತೆವಿಲ್ಲ. ಇವರಲ್ಲಿ ಎಷ್ಟು ಸಂಗತಿಗಳು ಪೂರಕವಿರುತ್ತವೆ ಎಷ್ಟು ಸಂಗತಿಗಳು ಪ್ರತಿಕೂಲ ವಿರುತ್ತವೆ ಅವುಗಳ ಆಧಾರದ ಮೇಲಿಂದ ಮುಂಜಾಗ್ರತೆ ಹಾಗೂ ಪರಿಹಾರ ಕ್ರಮಗಳನ್ನು ಕೈಕೊಳ್ಳಬೇಕು. ಮೊದಲು ಮುಂಜಾಗ್ರತೆ ಕ್ರಮಗಳ ಬಗೆಗೆ ವಿವರಿಸಿದೆ. ಈ ಹಿಂದೆ ಅನೇಕ ಬಾರೆ ವಿವರಿಸಿದಂತೆ ಮುಂಜಾಗ್ರತೆ ಕ್ರಮವು ಪ್ರಯತ್ನವಾದವು ವ್ಯಕ್ತಿಯ ಕೈಯಲ್ಲಿರುವ ವಿಷಯ ಪರಿಹಾರ ಕ್ರಮ ದೈವದಕೈಯಲ್ಲಿ.

1) ಯಾರ ಜಾತಕವದಲ್ಲಿ ಕೇವಲ ಗಂಡುಸಂತಾನದ ಸಂಖ್ಯೆ ಹೆಚ್ಚಿರುವವೋ ಅವರು ಕನ್ಯಾ ಸಂಗತಿ ಬಗೆಗೆ ನಿರೀಕ್ಷಿಸ ಬಾರದು ಹಾಗೂ ಹಾದಿಕಾಯದೇ ಸಂತಾನ ಪ್ರತಿ ಬಂಧ ಮಾಡಿಕೊಳ್ಳಬೇಕು.

2) ಯಾರ ಜಾತಕದಲ್ಲಿ ಕನ್ಯಾ ಸಂಖ್ಯೆಯು ಹೆಚ್ಚಾಗಿರುತ್ತದೆಯೋ

ಅವರು ಗಂಡುಸಂತಾನದ ಬಗೆಗೆ ಹಾದಿ ಕಾಯದೇ ಸಂತಾನ ಪ್ರತಿಬಂಧ ಮಾಡಿಕೊಳ್ಳಬೇಕು.

3) ಯಾರ ಜಾತಕದಲ್ಲಿ ಅಲ್ಪಸಂತತಿ ವಂಧ್ಯಾಯೋಗ ವಿರುತ್ತದೆಯೋ ಅಂಥವರು ಸಂತತೀ ಪ್ರತಿಬಂಧ ಅಂದರೆ ಕುಟುಂಬ ಯೋಜನೆಗೆ ಕೈಹಾಕ ಬಾರದು ಏಕೆಂದರೆ ಕೆಲಬಮ್ಮೆ ಮಕ್ಕಳು ಅಲ್ಪಾಯುಗಳಿರುತ್ತಾರೆ.

4) ಯಾವ ಮಹಿಳೆಯ ಜಾತಕದಲ್ಲಿ ಗರ್ಭಸ್ರಾವ ಗರ್ಭಪತನ ಮೇಲಿಂದ ಮೇಲೆ ಆಗುವುದೋ ಅಂಥವರು 1–2 ಸಂತಾನವಾದ ಬಳಿಕ ಗಂಡೇ ಇರಲಿ ಹೆಣ್ಣೇ ಇರಲಿ ಆ ಮಕ್ಕಳ ದೀರ್ಘಾಯುಗಳಿದ್ದಾರೋ ಹೇಗೆ ಎಂಬುದನ್ನು ತಿಳಿದುಕೊಂಡು ಸಂತತೀ ಪ್ರತಿಬಂಧ ಉಪಾಯ ಕೈಕೊಳ್ಳಬೇಕು.

5] ಆ ಏಕನಾಡಿ ವಿವಾಹ ಮಾಡಿಕೊಳ್ಳಬಾರದು ಏಕೆಂದರೆ ಏಕನಾಡಿ ಯಿಂದ ಸಂತತಿಗೆ ತೊಂದರೆ ಸಂತತಿ ಕಡಿಮೆ ಅಥವಾ ವಿಕೃತ ಸಂತಾನ ವಾಗ ಬಹುದಾಗಿದೆ ಆದರೆ ಇದಕ್ಕೆ ಅಪವಾದಗಳಿವೆ 36ಕ್ಕೆ 36 ಗುಣಗಳ ಕೂಡಿದರೆ ಎಲ್ಲವಕ್ಕೂ ಮಹತ್ವದ ಅಂಶವೆಂದರೆ ಯಾರ ಜಾತಕದಲ್ಲಿ ಪಂಚಮೇಶ ಗುರು, ಪಂಚಮದಲ್ಲಿದ್ದ ಗ್ರಹ ಬಲಿಷ್ಟ ಹೀಗಿದ್ದರೆ ಏಕ ನಾಡಿ ದೋಷದ ಅನಿಷ್ಟ ಪರಿಣಾಮವಾಗುವುದಿಲ್ಲ. ಇದರಂತೆ ಸಗೋತ್ರದ ಅಥವಾ ತೀರ ಸಮೀಪದ ಬಳಗದಲ್ಲಿ ಅಂದರೆ ಎಲ್ಲಿ ಧರ್ಮಶಾಸ್ತ್ರದ ನಿಷೇದ ವಿದಿಯೋ ಅಲ್ಲ ವಿವಾಹ ಮಾಡಿಕೊಳ್ಳಬಾರದು.

ಯಾರ ಜಾತಕದಲ್ಲಿ ಸಂತತೀ ಸೌಖ್ಯವಿರುವುದಿಲ್ಲವೋ ಪುಟ 213 ರಿಂದ 214ಪುಟದಲ್ಲಿ ವಿವರಿಸಿದಂತೆ ಅಂಥವರ ಮಕ್ಕಳೊಂದಿಗೆ ಹೊಂದಾಣಿಕೆ ಮನೋ ವೃತ್ತಿ ಬೆಳೆಸಿಕೊಳ್ಳಬೇಕು ಇದರಂತೆ ಯಾರ ಜಾತಕದಲ್ಲಿ ತಂದೆಯ ಸೌಖ್ಯ ತಾಯಿಯ ಸೌಖ್ಯವಿರುವುದಿಲ್ಲವೋ ಅಂಥವರ ಹೊಂದಾಣಿಕೆ ಮನೋವೃತ್ತಿ ಯಿಂದ ವರ್ತಿಸಬೇಕು ತಂದೆ ತಾಯಿಗಳ ಸೌಖ್ಯದ ವಿಷಯವಾಗಿ ಸ್ತ್ರೀ ಜ್ಯೋತಿಷ್ಯದ ಪುಟ 25ರಿಂದ 33 ಪುಟದವರೆಗೆ ಹಾಗೂ 165ನೇ ಪುಟದಿಂದ 172ನೇ ಪುಟದವರೆಗೆ ವಿವರಿಸಿದಂತೆ ಮತ್ತು ಕುಂಡಲೀ ಗುಣ ನಿರ್ಣಯ

ಗ್ರಂಥದ 18ನೇ ಪುಟದಿಂದ 24 ನೇ ಪುಟದವರೆಗೆ ಹಾಗೂ ಇದೇ ಗ್ರಂಥದ ಏಕತ್ರಕುಟುಂಬದ ವಿಷಯದಲ್ಲಿ ವಿವರಿಸಿದಂತೆ ಅಂದರೆ ಪುಟ 185 ರಿಂದ 187 ನೇ ಪುಟದಲ್ಲಿ ವಿವರಿಸಿದಂತೆ ಯಾರ ಜಾತಕದಲ್ಲಿ ಇರುವವೋ ಅವರು ಹೊಂದಾಣಿಕೆ ಮನೋವೃತ್ತಿಯಿಂದ ವರ್ತಿಸಬೇಕು ಅಂದರೆ ಮಾತ್ರ ಸಂತತಿ ಸೌಖ್ಯ ತುಸು ಮಟ್ಟಿಗಾದರೂ ಸಿಗುತ್ತದೆ.

2] **ಸಂತತಿ ಹಾಗೂ ಸಂತತೀ ಸೌಖ್ಯದ ಪರಿಹಾರ ಕ್ರಮಗಳು:** ಯಾರ ಜಾತಕದಲ್ಲಿ ಪಂಚಮ ಸ್ಥಾನದಲ್ಲಿಯ ಗ್ರಹ ಪಂಚಮೇಶ ಗುರು ಈ ಮೂರು ಗ್ರಹಗಳು ಬಲಾಢ್ಯರಿರುವವೋ ಹಾಗೂ ಯಾರ ಜಾತಕದಲ್ಲಿ ಬಹು ಪ್ರಸವ, ವಿಪುಲ ಸಂತತಿಕಾರಕ ರಾಶಿ ಸ್ಥಾನ, ಗ್ರಹಗಳು ಬಲಾಢ್ಯರಿರುವವೋ ಅವರು ಯಾವ ಪರಿಹಾರದ ಕ್ರಮಗಳನ್ನು ಕೈಕೊಳ್ಳುವ ಅವಶ್ಯಕತೆಯಿರುವುದಿಲ್ಲ. ಯಾರ ಜಾತಕದಲ್ಲಿ ಮೇಲೆ ಬರೆದ ಸಂಗತಿಗಳು ಪೂರಕವಿರುವುದಿಲ್ಲವೋ ಹಾಗೂ ಯಾರ ಜಾತಕದಲ್ಲಿ ಅತ್ಯಲ್ಪ ಸಂತತಿ, ವಂಧ್ಯಾಯೋಗ ಗರ್ಭಪತನ, ಗರ್ಭಸ್ರಾವ, ಗರ್ಭಕ್ಕೆ ಮಾರಕ ಮೊದಲಾದ ಅಶುಭಯೋಗಗಳಿರುವುವೋ ಯಾರ ಜಾತಕದಲ್ಲಿ ಕಾಳಸರ್ಪಯೋಗವಿರುವುವೋ ಯಾರು ಏಕನಾಡಿ ವಿವಾಹ ಸ್ವಗೋತ್ರ ವಿವಾಹ ಬಳಗದಲ್ಲಿಯ ವಿವಾಹ ಮಾಡಿಕೊಳ್ಳುವವರೋ ಹಾಗೂ ಯಾವಜಾತಕರಿಗೆ ಸಂತತಿ ಆಗಿ ಮಕ್ಕಳು ಬದುಕುವುದಿಲ್ಲವೋ ಯಾರಿಗೆ ವಿಲಂಬವಾಗಿ ಸಂತಾನವಾಗುವುವೋ ಯಾರಿಗೆ ಅನಿಮಿತವಾಗಿ ಸಂತಾನವಾಗುವವೋ ತಂದೆ-ಮಕ್ಕಳ, ತಾಯಿ-ಮಕ್ಕಳ ಹೊಂದಾಣಿಕೆ ಅಭಾವವಿರುವುದೋ ಯಾರ ಜಾತಕದಲ್ಲಿ ಅರ್ಥಾತ್ ಸಂತತೀ ಸೌಖ್ಯವಿರುವುದಿಲ್ಲವೋ ಸ್ತ್ರೀಜ್ಯೋತಿಷ್ಯ 25 ರಿಂದ 33 ಪುಟದವರೆಗೇ ಹಾಗೂ 165 ರಿಂದ 172ನೇ ಪುಟದವರೆಗೆ ಹಾಗೂ ಇದೇ ಗ್ರಂಥದ 185 ರಿಂದ 187 ಪುಟದವರೆಗೆ ವಿವರಿಸಿದಂತೆ ಅಂಥ ಜಾತಕರು ಈ ಕೆಳಗೆ ಬರೆದ ಪರಿಹಾರದ ಕ್ರಮಗಳನ್ನು ಕೈಕೊಳ್ಳಬೇಕು.

1] **ಷಷ್ಠೀ ವ್ರತ :** ಪ್ರತಿ ತಿಂಗಳಲ್ಲಿ ಬರುವ ಎರಡು ಷಷ್ಠಿ ವ್ರತವನ್ನು ಕೈಕೊಳ್ಳಬೇಕು.

2] **ಸೋಮವಾರ ವ್ರತ :** ಮಕ್ಕಳನ್ನು ಪಡೆಯಲು ಹಾಗೂ ಮಕ್ಕಳಿಂದ ಸೌಖ್ಯ ಹೊಂದಲು ಪ್ರತಿ ಸೋಮವಾರ ಒಪ್ಪತ್ತು ಉಪವಾಸ ಮಾಡಬೇಕು.

3] **ಅನಂತಪದ್ಮನಾಭ ವ್ರತ ;** ಪ್ರತಿ ವರುಷ ಭಾದ್ರಪದ ಶುದ್ಧ ಚತುರ್ದಶೀ ದಿನ ಬರುವ ಅನಂತಪದ್ಮನಾಭ ವ್ರತ ಕೈಕೊಳ್ಳಬೇಕು.

4] ರಾಮಾಯಣದ ಬಾಲಕಾಂಡ ಓದಬೇಕು ಪಾರಾಯಣ ಮಾಡಬೇಕು.

5] **ನಾಗಬಲಿ ;** ವಂಧ್ಯಾ ದೋಷ ನಿವಾರಣೆಗಾಗಿ, ಕಾಳಸರ್ಪ ಯೋಗದ ಅಶುಭ ಫಲ ನಿವಾರಣೆಗಾಗಿ, ಸರ್ಪವಧೆಯ ದೋಷ ನಿವಾರಣೆಗಾಗಿ ಗರ್ಭಸ್ರಾವ. ಗರ್ಭಪತನ ಮೇಲಿಂದ ಮೇಲೆ ಆಗುವುದೊ ಹಾಗೂ ಯಾವ ಮಕ್ಕಳು ಹುಟ್ಟಿ ಸಾಯುವವೋ ಅಂಥ ಜಾತಕರು ದೋಷ ನಿವಾರಣೆಗಾಗಿ ನಾಗಬಲಿ ಮಾಡಬೇಕು ಹಾಗೂ ನಾಗಚೌತಿ, ನಾಗಪಂಚಮಿ ಚಂಪಾಷಷ್ಠಿ ವ್ರತ ಆಚರಿಸಬೇಕು.

6) **ನಾರಾಯಣ ಬಲಿ, ತ್ರಿಪಿಂಡಿಶ್ರಾದ್ಧ :** ಪಿಶಾಚಿಬಾಧೆಯಿಂದಲೂ ಮನೆಯಲ್ಲಿ ಯಾರಾದರೂ ದುರ್ಮರಣದಿಂದ ಆತ್ಮಹತ್ಯೆಯಿಂದ ಸಾವಿಗೀಡಾಗಿದ್ದರೆ ಸಂತತಿಗೆ ತೊಂದರೆ ಆಗುತ್ತದೆ ಅದಕ್ಕಾಗಿ **ನಾರಾಯಣಬಲಿ ತ್ರಿಪಿಂಡಿಶ್ರಾದ್ಧ** ವನ್ನು ಮಾಡಬೇಕು.

7) **ನಾಗಪೂಜೆ :** ಸಂತತಿ ತೊಂದರೆಗೆ ನಾಗದೋಷವು ಕಾರಣ ನಾಗದೋಷ ನಿವಾರಣೆಗಾಗಿ ನಾಗ ಪೂಜೆ ಹುತ್ತಕ್ಕೆ ಹಾಲು ಹಾಕುವುದು ಅಥವಾ ಮನೆಯಲ್ಲಿ ಬೆಳ್ಳಿಯ ನಾಗಮೂರ್ತಿ ಮಾಡಿ ಪ್ರಾಣಪ್ರತಿಷ್ಠಾ ವಿಧಾನದಿಂದ ಪೂಜಿಸಿ ಪ್ರತಿದಿನ ಅಥವಾ ಪ್ರತಿಸೋಮವಾರ ಆ ಮೂರ್ತಿಯನ್ನು ಪೂಜಿಸಿ ಹಾಲಿನ ನೈವೇದ್ಯವನ್ನು ಪತಿ–ಪತ್ನಿಯರು ಮಾತ್ರ ಯಾರೊಬ್ಬರು ಅಥವಾ ಇಬ್ಬರು ಪ್ರಸಾದವೆಂದು ಸೇವಿಸಬೇಕು ಅಥವಾ ನಾಗಮೂರ್ತಿ ಇರುವ ಕುಕ್ಕೇಸುಬ್ರಹ್ಮಣ್ಯಸ್ವಾಮಿ ಗೋಕರ್ಣ ನಾಸಿಕದಲ್ಲಿರುವ ನಾಗಪೂಜೆ ಮಾಡಬೇಕು ಹರಕೆ ಹೊರಬೇಕು.

8) **ಭಾಗವತ ಸಪ್ತಾಹ ಅಥವಾ ಹರಿವಂಶ ಪುರಾಣ :** ಭಾಗವತ ಸಪ್ತಾಹ ಅಥವಾ ಹರಿವಂಶ ಪುರಾಣ ಓದಿದಲ್ಲಿ ಸಂತತಿ ಹಾಗೂ ಸಂತತೀ ಸೌಖ್ಯ ಸಿಗುತ್ತದೆ.

9) **ರುದ್ರ, ಮಹಾರುದ್ರ, ಅತಿರುದ್ರ, ಅಭಿಷೇಕ :** ರುದ್ರ, ಅಭಿಷೇಕವನ್ನು ಪ್ರತಿ ಸೋಮವಾರ ಮನೆಯಲ್ಲಿ ಮಾಡಬೇಕು. ಶಕ್ತಿ ಇದ್ದಲ್ಲಿ ಅತಿರುದ್ರ, ಮಹಾರುದ್ರ, ಮಾಡಬೇಕು.

10) ಒಂದು ಲಕ್ಷ ಬಿಲ್ವಪತ್ರಿಕೆ ಶಂಕರನಿಗೆ ಅಥವಾ ಒಂದು ಲಕ್ಷ ತುಳಸೀದಳ ಕೃಷ್ಣ ಅಥವಾ ವಿಷ್ಣು ಮೂರ್ತಿಗೆ ಏರಿಸಬೇಕು. ಅಂದರೆ ಸಂತತೀ ಸೌಖ್ಯ ಸಿಗುತ್ತದೆ.

11) **ಮಕ್ಕಳ ಭೋಜನ ವಸ್ತ್ರದಾನ ಹಾಲಿನ ದಾನ :** ಊರಲ್ಲಿಯ ಬಡಮಕ್ಕಳಿಗೆ ಭೋಜನ ಅಥವಾ ಹಾಲು ಹಂಚುವದನ್ನು ಪ್ರತಿ ಸೋಮವಾರದಂತೆ ಮೂರು ವರುಷ ಮಾಡಬೇಕು. ಇಲ್ಲವೇ ವರುಷಕ್ಕೊಮ್ಮೆಯಂತೆ 3 ವರುಷ ಬಡ ಮಕ್ಕಳಿಗೆ ವಸ್ತ್ರದಾನ ಗ್ರಂಥದಾನ ಪೆನ್ಸಿಲ್ಲು, ಕಾಗದ ಮಕ್ಕಳು ಉಪಯೋಗಿಸುವ ಶಾಲೋಪಕರಣಗಳನ್ನು ದಾನ ಮಾಡಬೇಕು.

12) **ಸೋಳಾಸೋಮವಾರ ವ್ರತ :** ಸೋಳಾಸೋಮವಾರ ವ್ರತ ಮಾಡಬೇಕು.

13) ಸತ್ಪಾತ್ರ ಬಡ ಮಕ್ಕಳ ಅರ್ಥಾತ ವಧೂ–ವರರ ವಿವಾಹ ಮಾಡಬೇಕು.

14) ಗ್ರಂಥಾಲಯ, ದವಾಖಾನೆ, ದೇವಾಲಯ, ಭಾವಿ, ಬೋರವೆಲ್ಲು ಊರಿಗಾಗಿ ಬಡಜನರಿಗಾಗಿ ಕಟ್ಟಿಸಬೇಕು.

15) ಯಾರ ಮಕ್ಕಳು ಹುಟ್ಟಿದ ಕೂಡಲೇ ಸಾಯುವವು ಅಂಥ ಜಾತಕರು ತಮ್ಮ ಮಕ್ಕಳಿಗೆ ಕಲ್ಲಪ್ಪಾ, ದುಂಡಪ್ಪಾ, ಹುಚ್ಚಪ್ಪಾ, ತಿರಕಪ್ಪಾ, ಮೊದಲಾದ ಹೆಸರಿನಲ್ಲಿ ಕರಿಯಬೇಕು ಅಥವಾ ನಾಗನ ಹೆಸರಿನಿಂದ ಕರಿಯಬೇಕು ಸುಂದರ ಹೆಸರನ್ನು ಇಡಬಾರದು ಅಥವಾ ಮನೆಯ ಹೆಸರು ಕರಿಯಬೇಕು ಶಾಲೆಗೆ ತಮಗೆ ಬೇಕಾದ ಹೆಸರನ್ನು ಹಚ್ಚಬೇಕು.

16) ಪ್ರತಿನಿತ್ಯ ಅಶ್ವತ್ಥ ವೃಕ್ಷಕ್ಕೆ ಕನಿಷ್ಟ 5 ಪ್ರದಕ್ಷಿಣೆ ಹಾಕಬೇಕು ಹೀಗೆ ಮೂರು ವರುಷ ಪ್ರದಕ್ಷಿಣೆ ಹಾಕಬೇಕು.

17) ತೀರ್ಥ ಕ್ಷೇತ್ರಗಳ ಅವತಾರಿ ಪುರುಷರ ತಪಸ್ವಿಗಳ ಜ್ಯೋತಿ-ರ್ಲಿಂಗಗಳ ಸ್ಥಳಗಳನ್ನು ಸಂದರ್ಶಿಸಬೇಕು.

ಹೀಗೆ ಮೇಲೆ ಬರೆದ 17 ಕ್ರಮಗಳಲ್ಲಿ ಯಾವುದೊಂದನ್ನು ಶ್ರದ್ಧೆ ಭಕ್ತಿಯಿಂದ ಆರಾಧಿಸಿದಲ್ಲಿ ಖಂಡಿತವಾಗಿ ಇಚ್ಚಿಸಿದ ಸಂತಾನ ಪ್ರಾಪ್ತಿ ಆಗುತ್ತದೆ.

ತಮಗೆ ಮಕ್ಕಳ ಸಹಕಾರ, ಪ್ರೀತಿ, ವಾತ್ಸಲ್ಯ, ಸೇವೆ, ಉಪಚಾರ ದೊರೆಯಬೇಕೆಂಬ ಅಪೇಕ್ಷೆ ಉಳ್ಳವರು ಹಾಗೂ ಪುಟ 213-215ರಲ್ಲಿ ವಿವರಿಸಿದಂತೆ ಯಾರ ಜಾತಕದಲ್ಲಿ ಸಂತತಿ ಸೌಖ್ಯವಿರುವುದಿಲ್ಲವೋ ಅಂಥವರು ಈ ಕೆಳಗೆ ಬರೆದ ಪರಿಹಾರ ಕ್ರಮಗಳಲ್ಲಿ ಕೈಕೊಳ್ಳಬೇಕು.

1] ತಾವು ತಮ್ಮ ಸಹೋದರ-ಸಹೋದರಿಯರ ಸಂಗಡ ವಾತ್ಸಲ್ಯ, ಪ್ರೀತಿಯಿಂದಲೂ ತಂದೆ-ತಾಯಿಗಳ ಸಂಗಡ ಭಯ-ಭಕ್ತಿಗಳಿಂದಲೂ ನಡೆಯಬೇಕು ಹಾಗೂ ಅವರ ಸೇವೆ ಮಾಡಿದಲ್ಲಿ ಖಂಡಿತವಾಗಿ ಇವರ ಮಕ್ಕಳು ಆಜ್ಞಾಧಾರಕರಾಗುತ್ತಾರೆ.

2] ಪ್ರತಿ ವರುಷ ತಪ್ಪದೇ ಗತಿಸಿದ ತಂದೆ-ತಾಯಿಗಳ ಹಿರಿಯರ ಶ್ರಾದ್ಧ [ತಿಥಿ] ಪಕ್ಷವನ್ನು ತಪ್ಪದೇ ಮಾಡಬೇಕು.

3] ತಪ್ಪದೇ ಸಂಧ್ಯಾವಂದನೆ ದೇವರ ಪೂಜೆ ಹಬ್ಬ ಹರಿದಿನಗಳಲ್ಲಿ ಆಯಾದೇವರ ಪ್ರೀತ್ಯರ್ಥಕ್ಕಾಗಿ ವಿಶೇಷ ಪೂಜೆ ಮಾಡಬೇಕು.

4) ಭಾಗವತ, ರಾಮಾಯಣ, ಮಹಾಭಾರತ, ವೇದಪುರಾಣ, ಉಪನಿಷತ್ ಮೊದಲಾದ ಧಾರ್ಮಿಕ ಗ್ರಂಥಗಳನ್ನು ಆಧ್ಯಾತ್ಮಿಕ ಗ್ರಂಥಗಳನ್ನು ನಿತ್ಯ ಓದಬೇಕು ಹಾಗೂ ಗೀತಾ ಪಠಣ ವಿಷ್ಣು ಸಹಸ್ರನಾಮ ಲಲಿತಾ ಸಹಸ್ರನಾಮ ಅಥವಾ ಅಥರ್ವ ಶೀರ್ಷ ಅಥವಾ ರುದ್ರ ನಿತ್ಯ ಪಠಿಸಬೇಕು.

5] ತೀರ್ಥಕ್ಷೇತ್ರಗಳ ಅವತಾರಿ ಪುರುಷ ತಪಸ್ವಿಗಳ ಜ್ಯೋತಿರ್ಲಿಂಗಗಳ ಪವಿತ್ರ ಕ್ಷೇತ್ರಗಳಿಗೆ ಸಂದರ್ಶಿಸಬೇಕು.

6] ಪ್ರತಿವರುಷ ತಪ್ಪದೇ ಸತ್ಯನಾರಾಯಣ ಪೂಜೆ, ವರಶಂಕರ

ಸಂತೋಷಿಮಾತಾ ವ್ರತ ಪೂಜೆ ವಿವಿಧ ಅಷ್ಟೋತ್ತರ, ಸಪ್ತಶತಿ, ಗುರುಚರಿತ್ರೆ ಸಪ್ತಾಹ, ಪವಮಾನಹೋಮ ಲಘುರುದ್ರ, ಮಹಾರುದ್ರ, ಅತಿರುದ್ರ ಗಣ ಹೋಮ, ಗಣಪತಿ ಸಹಸ್ರವೃತ, ನವಚಂಡಿ, ಶತಚಂಡಿ, ರುದ್ರಸ್ವಾಹಾ ಉದಕ ಶಾಂತಿ ಮೊದಲಾದವುಗಳನ್ನು ಆಚರಿಸಬೇಕು.

7] ಹಬ್ಬ ಹರಿದಿನಗಳನ್ನು ಆಚರಿಸಿದಲ್ಲಿ ಗೃಹಸೌಖ್ಯ, ಸಂತತಿ ಸೌಖ್ಯ ಸಿಗುತ್ತದೆ. ಉದಾ:— ನಾಗಚವತಿ, ನಾಗಪಂಚಮಿ, ಚಂಪಾಷಷ್ಠಿ ಆಚರಿಸಿದಲ್ಲಿ ಸಂತತಿಸೌಖ್ಯವನ್ನು ಬಹುಳ ಚತುರ್ದಶಿ. ಶಿವರಾತ್ರಿ ವ್ರತ ವನ್ನು ಆಚರಿಸಿದಲ್ಲಿ ಆರೋಗ್ಯದೃಷ್ಟಿಯಿಂದಲೂ ಪ್ರದೋಷ ವ್ರತ, ಲಲಿತಾ ಪಂಚಮಿಗಳಿಂದ ಲಕ್ಷ್ಮೀ ಪ್ರಸನ್ನಳಾಗುವಳು ಶ್ರೀಗಣೇಶ ಚವತಿ ಸಂಕಷ್ಟಿ, ದುರ್ಗಾಷ್ಟಮಿಗಳಿಂದ ಶತೃಪೀಡೆ ನಾಶವಾಗುವದು.

ಹೀಗೆ ಯುಗಾದಿ, ಹನುಮಜಯಂತಿ, ರಾಮನವಮಿ, ಕಾಂಮಣ್ಣವೆ, ಭೀಮನ ಅಮವಾಸೆ, ವಿಜಯದಶಮಿ, ದೀಪಾವಳಿ, ಮಕರಸಂಕ್ರಾಂತಿ, ಗೀತಾಜಯಂತಿ, ರಥಸಪ್ತಮೀ ಮೊದಲಾದ ಹಬ್ಬಹರಿದಿನಗಳನ್ನು ಆಚರಿಸಿದಲ್ಲಿ ವಿವಿಧ ದೇವತೆಗಳು ಪ್ರಸನ್ನರಾಗಿ ಗೃಹಶಾಂತಿ, ಸಂತತಿಸೌಖ್ಯ ಸಿಗುತ್ತದೆ. ಹೀಗೆ ಮೇಲೆ ಬರೆದ ಮುಂಜಾಗ್ರುತೆ ಕ್ರಮಗಳನ್ನು ಪರಿಹಾರದ ಕ್ರಮಗಳನ್ನು ಕೈಕೊಂಡಲ್ಲಿ, ಆಚರಿಸಿದಲ್ಲಿ ಸಂತಾನ ಲಾಭವಾಗುವುದಲ್ಲದೇ ಸಂತತಿಸೌಖ್ಯ ಸಿಗುತ್ತದೆ.



# ಅಷ್ಟಮ - ದಳ

## ಶತ್ರು, ಮಿತ್ರ—ಪರಿಹಾರ

ಪರಿಹಾರ ಜ್ಯೋತಿಷ್ಯದ ಎಂಟನೇ ಅಧ್ಯಾಯದಲ್ಲಿ **ಶತ್ರುಮಿತ್ರ-ಪರಿಹಾರ** ಬಗೆಗೆ ಪ್ರಸ್ತಾಪಿಸುತ್ತೇನೆ. ಏಕೆಂದರೆ ನಮ್ಮ ಜೀವನದಲ್ಲಿ ಶತ್ರು ಮಿತ್ರ ಗಳಿಬ್ಬರು ವಿವಿಧ ರೀತಿಯಿಂದ ನಮ್ಮ ಸುಖ ದುಃಖಗಳ ಮೇಲೆ ಪರಿಣಾಮ ಮಾಡುತ್ತಾರೆ. ಆಂಗ್ಲ ಭಾಷೆಯಲ್ಲಿ ಒಂದು ಗಾದೀ ಮಾತು ಬಳಕೆಯಲ್ಲಿದೆ.

A Friend in need is a friend indeed ಕಷ್ಟದ ಕಾಲಕ್ಕೆ ಅನುವಾಗುವವನೇ ನಿಜವಾದ ಮಿತ್ರ ಎಂಬುದೇ ಈ ಮಾತಿನ ಮಥಿತಾರ್ಥ ಆದರೆ ಈ ಮೌಲ್ಯ ಈಗ ಮಾಯವಾಗ ಹತ್ತಿದೆ, ಸ್ಪರ್ಧಾತ್ಮಕ ಇಂದಿನ ಆಧುನಿಕ ಯುಗದಲ್ಲಿ ಮಿತ್ರರಾರು ಶತ್ರುಗಳಾರು ? ಎಂಬುದು ಗುರುತಿಸುವುದು ಕಠಿಣವಿದ್ದರೂ ಗುರುತಿಸುವುದು ಅವಶ್ಯವಿದೆ. ಏಕೆಂದರೆ ನಿತ್ಯಜೀವನದಲ್ಲಿ ಶತ್ರುಗಳನ್ನು ಅರಿತುಕೊಳ್ಳದೇ ಬದುಕುವುದೇ ಕಠಿಣವಾಗಿದೆ. ಏಕೆಂದರೆ ನಮ್ಮ ವೃತ್ತಿಯಲ್ಲಿ ಶತ್ರು-ಮಿತ್ರರ ವಿಷಯವಾಗಿ ಬಗೆಬಗೆಯ ಪ್ರಶ್ನ ಸಮಸ್ಯಗಳಿರುತ್ತವೆ ಅವುಗಳನ್ನು ಉತ್ತರಿಸಬೇಕಾಗುತ್ತದೆ.

**ಶತ್ರುಗಳಲ್ಲಿ ಪ್ರಕಾರ :** ಸ್ಥೂಲವಾಗಿ ಶತ್ರುಗಳಲ್ಲಿ ಮೂರು ಪ್ರಕಾರಗಳನ್ನಾಗಿ ವಿಂಗಡಿಸಬಹುದು 1) ನೆರೆಹೊರೆಯ ಶತ್ರುಗಳು 2) ಉದ್ಯೋಗ. ನೌಕರಿ. ವೃತ್ತಿಯಲ್ಲಿಯ ಶತ್ರುಗಳು 3) ಬಂಧು-ಬಾಂಧವ ದಾಯಾದಿ ಶತ್ರುಗಳು ಹೀಗೆ ಮೂರು ಪ್ರಕಾರದ ಶತ್ರುಗಳಿದ್ದರೂ ಉದ್ದೇಶ ಒಂದೆ ಶತ್ರುಕಾಟ. ಶತ್ರುಪೀಡೆ, ಶತ್ರುಉಪಟಳ, ಶತ್ರುಪೀಡಾ ಸಂಬಂಧಿಸಿದ ಪ್ರಶ್ನೆ ಸಮಸ್ಯೆಗಳ ವೈವಿಧ್ಯವನ್ನು ಮೊದಲು ಓದಿರಿ ಆ ಬಳಿಕ

ಶತ್ರುಕಾಟದ ಕಾರಣ. ಯಾವ ಜಾತಕನಿಗೆ ಶತ್ರುಗಳು ಬಹಳ. ಯಾವ ಜಾತಕನಿಗೆ ಶತ್ರುಗಳು ಕಡಿಮೆ ಮಿತ್ರರು ಹೆಚ್ಚು ಶತ್ರುಕಾಟದ ಸಲುವಾಗಿ ಯಾವ ಮುಂಜಾಗ್ರತೆ ಕ್ರಮ ಕೈಕೊಳ್ಳಬೇಕು ಯಾವ ಪರಿಹಾರ ಕ್ರಮ ಕೈಕೊಳ್ಳಬೇಕು ಎಂಬುದನು ಆ ಬಳಿಕ ಪರಿಶೀಲಿಸುವಾ ಮೊದಲು ಶತ್ರುಪೀಡೆಯ ಸಂಬಂಧಿಸಿದ ಪ್ರಶ್ನೆಗಳು ಹೇಗಿರುತ್ತವೆ ಎಂಬುದನ್ನು ಓದಿರಿ.

ಕೆಲ ಜನರು ತಮಗೆ ನೆರೆಹೊರೆಯವರಿಂದ ವಿನಾಕಾರಣ ತೊಂದರೆ ಪ್ರಾರಂಭವಾಗಿದೆ ಇದಕ್ಕೇನು ಉಪಾಯವೆಂದು ಪ್ರಶ್ನಿಸಿದರೆ ಮತ್ತೆ ಕೆಲವರು ನೆರೆಹೊರೆಯವರ ಕಾಟದ ಕಾರಣ ಹೇಳುತ್ತಾರೆ ತಮ್ಮ ಜಾಗೆಯಲ್ಲಿ ಅವರೇ ಅತಿಕ್ರಮಣ ಮಾಡಿದ್ದಾರೆ ಎಂಬ ಜಾಗೆಯ ಸಂಬಂಧಿಸಿದ ಪ್ರಶ್ನೆ ಇದ್ದರೆ ಮತ್ತೆ ಕೆಲವರು ನಲ್ಲಿ ನೀರಿಗಾಗಿ ಮತ್ತೆ ಕೆಲವರು ಗಟಾರದ ಹೊಲಸು ನೀರು ತಮ್ಮ ಜಾಗೆಗೆ ಬರುವುದರ ಸಂಬಂಧ ಮತ್ತೆ ಕೆಲವರು ತಮ್ಮ ನೆರೆಹೊರೆಯವರು ಗಾಳಿ ಬೆಳಕು ಬಾರದ ಹಾಗೆ ಗೋಡೆ ಕಟ್ಟುವುದು ಪಡಿಕೆ ಬಂದು ಮಾಡಿದ ಬಗೆಗೆ ಪ್ರಶ್ನೆಗಳಿದ್ದರೆ ಮತ್ತೆ ಕೆಲವರು ರೇಡಿಯೋ, ಟೀವಿ ಮೊದಲಾದ ಪ್ರಸಾರ ಮಾಧ್ಯಮದಿಂದ ತಮ್ಮ ಅಭ್ಯಾಸಕ್ಕೆ ತೊಂದರೆ ಆಗುತ್ತದೆ ಅದರ ಸಂಬಂಧಿಸಿದ ಪ್ರಶ್ನೆ ಮತ್ತೆ ಕೆಲವರು ತಾವು ಅವರಿಗೆ ಹಣಕಾಸು ಮೊದಲಾದ ಎಲ್ಲ ಪ್ರಕಾರದ ಸಹಾಯ ಮಾಡಿದ್ದರೂ ಅದನ್ನು ವಾಪಸ ಮಾಡದೇ ವಿನಾಕಾರಣ ಕಿರುಕಳ ಕೊಡುವುದರ ಬಗೆಗೆ ಮತ್ತೆ ಕೆಲವರು ತಮ್ಮ ಮೇಲೆ ತಮ್ಮ ಮಕ್ಕಳ ಮೇಲೆ ವಿನಾಕಾರಣ ಅಪವಾದ–ಆಪಾದನೆಗಳ ಬಗೆಗೂ ಹೆದರಿಕೆ–ಬೆದರಿಕೆ ಒಡ್ಡುವುದರ ಬಗೆಗೆನೂ ವಿಚಾರಿಸುತ್ತಾರೆ. ಮತ್ತೆ ಕೆಲವರು ತಮ್ಮ ಮಕ್ಕಳ ವಿದ್ಯಾಭ್ಯಾಸಕ್ಕೆ ಮಕ್ಕಳ ಮದುವೆಗೆ ನೆರೆಹೊರೆಯವರಿಂದ ಹೇಗೆ ತೊಂದರೆ ಆಗಹತ್ತಿದೆ ಇದಕ್ಕೆಲ್ಲ ನೆರೆಹೊರೆಯವರ ಮಾಟದ ಪರಿಣಾಮವಾಗಿದೆ ಎಂದೆಲ್ಲ ವಿಚಾರಿಸುತ್ತಾರೆ ಮತ್ತೆ ಕೆಲವರು ಮನೆಗೆ ಮೇಲಿಂದ ಮೇಲೆ ಕಳುವು ತುಡುಗು ಆಗಹತ್ತಿದೆ ಮನೆಗೆ ಏನೂ ಬರಕತ್ ಇಲ್ಲಾ ಮನೆಗೆ ಬೆಂಕಿ ಬೀಳಹತ್ತಿದೆ ಹಂಚು ಒಡೆಯುಹತ್ತಿದೆ ಮನೆಯ ಮೇಲೆ ಕಲ್ಲು ಬೀಳ ಹತ್ತಿವೆ ಇದಕ್ಕೆಲ್ಲ ಭಾನಾಮತಿಕಾರಣ ಮಾಟ

ಮಮ್ಮಗಳ ಕಾರಣ ಎಂದು ಪ್ರಶ್ನಿಸುತ್ತಾರೆ ಮತ್ತೆ ಕೆಲವರು ವ್ಯಸ ಕಟ್ಟಾಗಿದೆ ವ್ಯಸನ ಗಿರಾಕಿ ಬಂದಾಗಿವೆ ಆಕಳು ಎಮ್ಮೆ ರಕ್ತ ಹಿಂಡುತ್ತಿವೆ ಇದಕ್ಕೆಲ್ಲ ನೆರೆಹೊರೆಯವರೆ ಕಾರಣ ಹೀಗೆಲ್ಲ **ನೆರೆಯವರು ಹೊರೆಯಂತೆ** ವರ್ತಿಸುವ ಬಗೆಗೆ ಪ್ರಶ್ನಿಸುತ್ತಾರೆ.

ಇನ್ನು ಸ್ವತಂತ್ರ ಉದ್ಯೋಗಸ್ಥ ವೃತ್ತಿಯವರು ಶತ್ರುಕಾಟ ಬಗೆಗೆ ಹೀಗೆ ಪ್ರಶ್ನಿಸುತ್ತಾರೆ ಕೆಲವರು ತಮ್ಮ ಉದ್ಯೋಗ ಕುಂಠಿತವಾದದ ಬಗೆಗೆ ವಿಚಾರಿಸುವರೆ ಮತ್ತೆ ಕೆಲವರು ಗಿರಾಕಿ ಕಟ್ಟಾಗಿದೆ. ಉತ್ಪಾದನೆ ಕಡಿಮೆ ಆಗಿದ್ದ ಬಗೆಗ ನೌಕರ–ಚಾಕರರ ಸಮಸ್ಯೆಗಳ ಬಗೆಗೆ ಮಶಿನರೀ ತೊಂದರೆಯ ಬಗೆಗೆ ಮಾರಾಟದ ಬಗೆಗೆ ಇದೆಲ್ಲ ಶತ್ರುಕಾಟದ ಪರಿಣಾಮವೆಂದು ಅವರ ಅನಿಸಿಕೆ ಅದಕ್ಕಾಗಿ ಪ್ರಶ್ನಿಸುತ್ತಾರೆ.

ಇನ್ನು ನೌಕರ ವರ್ಗದವರಂತೂ ತಮ್ಮ ಸಹೋದ್ಯೋಗಿಗಳು ಕೆಲಸ ಮಾಡುವ ಮೇಲಾಧಿಕಾರಿಗಳೊಡನೆ ಚಾಡಿ ಹೇಳುವ ವಿಷಯ ಕುರಿತು ಪ್ರಶ್ನಿಸುತ್ತಾರೆ ಮತ್ತೆ ಕೆಲವರು ತಮ್ಮ ಕಚೇರಿಯಲ್ಲಿ ಕಾಗದಪತ್ರಗಳು ಫೈಲುಗಳು ಕಾಣೆಯಾದ ಬಗೆಗೆ ಕಳುವು ಆದ ಬಗೆಗೆ ಸಹೋದ್ಯೋಗಿಗಳ ಕಾರಸ್ಥಾನ ಇರಬಹುದೆಂದು ಪ್ರಶ್ನಿಸುತ್ತಾರೆ ಇಷ್ಟೆ ಅಲ್ಲಾ ತಾವು ಇಲ್ಲಿಂದ ವರ್ಗ ಮಾಡಿಸಿಕೊಳ್ಳಬೇಕೋ ಅಥವಾ ಅವರನ್ನು ಇಲ್ಲಿಂದ ವರ್ಗ ಮಾಡಿಸಬೇಕೋ ಎಂದು ವಿಚಾರಿಸುತ್ತಾರೆ ಅಲ್ಲದೇ ಕಚೇರಿಯಲ್ಲಿಯ ಶತ್ರುಕಾಟದ ಬಗೆಗೆ ವಿವರಿಸುತ್ತಾರೆ ವರ್ಣಿಸುತ್ತಾರೆ

ಇನ್ನು ದಾಯಾದಿಗಳ, ಭಾಗಾದಿಗಳ ಶತ್ರುತ್ವವಂತೂ ಮಹಾಭಾರತ ರಾಮಾಯಣ ಕಾಲದಿಂದಲೂ ಇದೆ, ಇದರಲ್ಲಿ ಅನೇಕ ಕಾರಣಗಳಿವೆ, ಕೆಲವರು ಆಸ್ತಿಯ ಬಗೆಗೆ ವಿಚಾರಿಸುವರೆ ಮತ್ತೆ ಕೆಲವರು ತಮ್ಮ ದಾಯಾದಿಗಳ ಭಾಗಾದಿಗಳ ಆಸ್ತಿಯ ಬಗೆಗೆ ವಿಚಾರಿಸುತ್ತಾರೆ ಮತ್ತೆ ಕೆಲವರು ತಮ್ಮ ದಾಯಾದಿಗಳ ಕಾಟದ ಬಗೆಗ ವಿಚಾರಿಸುತ್ತಾರೆ. ಇನ್ನು ಕೆಲವರು ತಮ್ಮ ಮಕ್ಕಳು ಭಾಗಾದಿಗಳ ಮಕ್ಕಳಗಿಂತ ಏಕೆ ಹಿಂದುಬಿದ್ದ

ದ್ದಾರೆ ತಮ್ಮ ದಾಯಾದಿಗಳ ಮಕ್ಕಳು ಶಿಕ್ಷಣದಲ್ಲಿ ಪ್ರಗತಿ ಸಾಧಿಸಿದ್ದು. ದಾಯಾದಿಗಳ ಮಕ್ಕಳ ಮದುವೆ ಆದದ್ದು. ಅವರು ಆಸ್ತಿ, ವಾಹನ, ಸಂಪಾದಿಸಿದ್ದು ಅವರ ಜನಪ್ರಿಯತೆ ಬಗೆಗೆ ವಿವರಿಸುವರಲ್ಲದೆ ಆ ಭಾಗ್ಯ ತಮಗಿಲ್ಲ ಎಂದು ಮರುಗುತ್ತಾರೆ ಇಷ್ಟೇ ಅಲ್ಲಾ ತಮ್ಮ ದುಃಖಕ್ಕೆ ತೊಂದರೆಗೆ ದಾಯಾದಿಗಳ ಕಾರಸ್ಥಾನವೇ ಕಾರಣ ಎಂದು ದೂರುತ್ತಾರೆ.

**ಶತ್ರುಗಳಾಗಲು ಕಾರಣ:—** ನೆರೆಹೊರೆಯವರೆ ಶತ್ರುಗಳಂತೆ ವರ್ತಿಸಲಿ ವೃತ್ತಿ, ನೌಕರಿಯಲ್ಲಿಯ ಸಹೋದ್ಯೋಗಿಗಳು ಶತ್ರುಗಳಂತೆ ವರ್ತಿಸಲಿ ದಾಯಾದಿಗಳು ಭಾಗಾದಿಗಳು, ಶತ್ರುಗಳಂತೆ ವರ್ತಿಸಲಿ ಉದ್ದೇಶ ಒಂದೇ ಶತ್ರು ಪೀಡೆ. ಶತ್ರು ಕಾಟ ಹಾಗಾದರೆ ಇದಕ್ಕೇನು ಕಾರಣ ? ಯಾರೊಬ್ಬ ಜಾತಕನ ಶ್ರೀಮಂತಿಕೆ, ಐಶ್ವರ್ಯ. ಅಂತಸ್ತು ಭೌತಿಕ ಪ್ರತಿಷ್ಠೆ. ಜನಪ್ರಿಯತೆ. ಜನಾನುರಾಗತೆ ಸೌಲಭ್ಯ, ಸವಲತ್ತು ಇವರಿಗಿಲ್ಲ ಎಂಬುದೇ ಮುಖ್ಯಕಾರಣ ಇದನ್ನು ಅವರಿಗೆ ಸಹಿಸಲು ಸಹನೆಯಿಂದ ಇರಲು ಆಗುವುದಿಲ್ಲ. ಅದೇ ಹೊಟ್ಟೆಕಿಚ್ಚು ಮತ್ಸರ ಗುಣದಿಂದ ಪ್ರಾರಂಭವಾಗಿ ದ್ವೇಷ ಸೇಡುಗಳ ದುರ್ಗುಣಗಳಿಂದ ಬೆಳೆದು ಪೋಷಿಸಿ ಹಗೆತನ ರೂಪವಾಗಿ ಮೈ.ಕೈ-ಮುಟ್ಟ ಜಗಳಾಗುವಿಕೆ ಬೆಂಕಿ,ಹಚ್ಚುವಿಕೆ. ಹಾನಿಮಾಡುವಿಕೆ ತೊಂದರೆ ಕೊಡುವಿಕೆ ಮೊದಲಾದ ಅವಾಂತರ ರೂಪತಾಳಿ ಪೋಲಿಸ ಕಚೇರಿ ಹತ್ತುವುದರಿಂದಾಗಲಿ ಕೋರ್ಟಿನಕಟ್ಟೆ ಏರುವುದರಿಂದಾಗಲಿ ಕೊಲೆಯಾಗಲಿ ಫೌಜದಾರಿ ಮೊಕದ್ದಮೆಗಳನ್ನು ಎದುರಿಸುವುದರಿಂದಾಗಲೀ ಅದಕ್ಕಾಗಿ ಆಸ್ತಿ–ಹಣವನ್ನು ವೆಚ್ಚಮಾಡಿ ಬರಿಗೈ ಆಗುವುದರಲ್ಲಿ ಸಮಾಪ್ತಿ ಆಗುತ್ತದೆ

ಹೀಗೆ ಮೇಲೆ ಬರೆದ ಶತ್ರುಗಳ ಕಾಟ ಎಲ್ಲ ಜಾತಕದವರಿಗೆ ಇರುತ್ತದೆಂದು ಹೇಳಲಾಗದು ಆದುದರಿಂದ ಯಾವ ಜಾತಕನಿಗೆ ಶತ್ರುಕಾಟವಿದೆ ಯಾರಿಗೆ ಕಾಟ ಇದ್ದು ಭಾನಾಮತಿ ಪ್ರಯೋಗವಾಗುತ್ತದೆ ಎಂಬುದನ್ನು ಪರಿಶೀಲಿಸುವಾ.

**ಶತ್ರುಕಾಟ ಕೊಡುವ ಗ್ರಹಗಳು ಹಾಗೂ ಶತ್ರುದಮನಕಾರೀ ಗ್ರಹಗಳು :** ಸಾಮಾನ್ಯವಾಗಿ ಶುಭ ಗ್ರಹಗಳು ಷಷ್ಠದಲ್ಲಿದ್ದರೆ ದುರ್ಬಲ

ವಾಗಿದ್ದರೆ ಶತ್ರುಭಯ, ಶತ್ರುಕಾಟ ಶತ್ರು ಪೀಡೆ ಉಂಟುಮಾಡುತ್ತವೆ. ಅವರೆ ಅದೇ ಪಾಪ ಗ್ರಹಗಳು ಬಲಾಢ್ಯವಾಗಿ ಷಷ್ಠದಲ್ಲಿದ್ದರೆ ಶತ್ರುದಮನ ಮಾಡುತ್ತವೆ. ಇದು ಅಲ್ಲದೇ ಹೇಗೆ ಮಾತೃಸೌಖ್ಯಕ್ಕೆ ಚಂದ್ರನು ಪತಿ,ಪತ್ನೀ ಸೌಖ್ಯಕ್ಕೆ ಶುಕ್ರನು ಸಂತತೀ ಸೌಖ್ಯಕ್ಕೆ ಗುರುವು, ಆರೋಗ್ಯಕ್ಕೆ ಸೂರ್ಯನು ಕಾರಕನಿರುವರೋ ಹಾಗೆ ಶತ್ರುದಮನಕ್ಕೆ ಮಂಗಳನು ಪೋಷಕನು. ಮಂಗಳನು ಬಲಾಢ್ಯನಾಗಿ ಷಷ್ಠದಲ್ಲಿದ್ದರೆ ಅಥವಾ ಷಷ್ಠೇಶನಾಗಿ ಬಲಾಢ್ಯನಾಗಿದ್ದರೆ ಶತ್ರುಕಾಟ, ಶತ್ರುಪೀಡೆ, ಶತ್ರುಭಯ ಇರುವುದಿಲ್ಲ. ಮಂಗಳನ ತರುವಾಯ ರವಿ, ರಾಹು, ಶನಿ ಗ್ರಹಗಳು ಕೂಡ ಶತ್ರುದಮನಕ್ಕೆ ಕಾರಕರು. ರವಿ, ಶನಿ, ರಾಹುಗಳು ಬಲಾಢ್ಯರಾಗಿ ಷಷ್ಠದಲ್ಲಿದ್ದರೆ, ಅಥವಾ ಷಷ್ಠೇಶರಾಗಿ ಬಲಾಢ್ಯರಿದ್ದಾರೆ. ಶತ್ರುಭಯ, ಶತ್ರುಕಾಟ, ಶತ್ರುಪೀಡೆ ಇರುವುದಿಲ್ಲ. ಮೇಲೆ ಹೇಳಿದಂತೆ ಶುಭಗ್ರಹಗಳು ಷಷ್ಠದಲ್ಲಿದ್ದರೆ ಶತ್ರುಪೀಡೆ, ಶತ್ರುಕಾಟ, ಬಹಳ. ಅವರಲ್ಲಿಯೂ ದುರ್ಬಲ ನಿರ್ಬಲರಾಗಿ ಷಷ್ಠದಲ್ಲಿದ್ದರೆ. ಅಥವಾ ಷಷ್ಠೇಶರಾಗಿ ದುರ್ಬಲ ನಿರ್ಬಲರಿದ್ದರೆ ಶತ್ರುಪೀಡೆ,ಶತ್ರುಕಾಟ ಬಹಳ ಅವರಲ್ಲಿಯೂ ಶುಭ ಗ್ರಹಗಳಾದ ಗುರು, ಶುಕ್ರ, ಚಂದ್ರರಲ್ಲಿ ಚಂದ್ರ, ಶುಕ್ರ, ಗುರುಗಳು ಕ್ರಮವಾಗಿ ಷಷ್ಠದಲ್ಲಿದ್ದರೆ ಶತ್ರುಕಾಟ ಬಹಳ ಅದರಲ್ಲಿಯೂ ದುರ್ಬಲ ನಿರ್ಬಲನಾದ ಚಂದ್ರನು ಷಷ್ಠದಲ್ಲಿದ್ದರೆ ಅಥವಾ ಷಷ್ಠೇಶನಾಗಿ ದುರ್ಬಲನಿದ್ದರೆ ಇಂಥ ಜಾತಕನಿಗೆ ಶತ್ರುಕಾಟ ಬಹಳ ಚಂದ್ರನ ತರುವಾಯ ಶುಕ್ರನು ಕೂಡ ಷಷ್ಠದಲ್ಲಿದ್ದರೆ ಶತ್ರುಪೀಡೆ ಬಹಳ ಅವರಲ್ಲಿಯೂ ದುರ್ಬಲ, ನಿರ್ಬಲ ಶುಕ್ರನು ಷಷ್ಠದಲ್ಲಿದ್ದರೆ. ಅಥವಾ ಷಷ್ಠೇಶನಾಗಿ ದುರ್ಬಲ ನಿರ್ಬಲನಿದ್ದರೆ. ಶತ್ರುಕಾಟ ಬಹಳ ಬುಧ, ಗುರುಗಳು ಮಾತ್ರ ಸೌಮ್ಯವಾದಿಗಳು ಮಂಗಳ,ರಾಹು, ರವಿ, ಶನಿಯರಂತೆ ಶತ್ರುದಮನಕಾರ ಪ್ರವೃತ್ತೀಯುವರೂ ಇಲ್ಲಾ ಚಂದ್ರ, ಶುಕ್ರರಂತೆ ನಿರ್ವೀರ್ಯರೂ ಅಲ್ಲಾ ಅರ್ಥಾತ ಚಂದ್ರ ಶುಕ್ರರಂತೆ ಶತ್ರುಗಳು ಇರುವುದಿಲ್ಲ ಮಂಗಳ ರಾಹು, ರವಿ, ಶನಿಯರಂತೆ ಶತ್ರುದಮನ ಇರುವುದಿಲ್ಲ. ಒಂದು ದೃಷ್ಟಿಯಿಂದ ಯಥಾ ಸ್ಥಿತಿ ಪ್ರಿಯರು. ಅಜಾತ ಶತ್ರುಗಳು. ಬುಧ ಗುರುಗಳು ಬಲಾಢ್ಯರಾಗಿ ಷಷ್ಠದಲ್ಲಿದ್ದರೆ ಅಥವಾ ಷಷ್ಠೇಶರಾಗಿ ಬಲಾಢ್ಯರಿದ್ದರೆ ಸರ್ವಪ್ರಿಯರಿರುತ್ತಾರೆ. ಜನಾನುರಾಗ, ಜನಪ್ರಿಯತೆ ಬಹಳ ಬಲಾಢ್ಯ ಮಂಗಳ, ರಾಹು, ರವಿ, ಶನಿಯರು ಷಷ್ಠದಲ್ಲಿದ್ದರೆ, ಅಥವಾ

ಷಷ್ಠೇಶರಾಗಿ ಬಲಾಢ್ಯರಿದ್ದರೆ ಇವರ ದಮನಕಾರಿ ಪ್ರವೃತ್ತಿಗೆ ಅಂಜುತ್ತಾರೆ. ಆದರೆ ಚಂದ್ರ, ಶುಕ್ರರು, ದುರ್ಬಲ ನಿರ್ಬಲರಿದ್ದರೆ ಅಥವಾ ಷಷ್ಠೇಶರಾಗಿ ದುರ್ಬಲರಿದ್ದರೆ ಶತ್ರುಪೀಡೆ, ಶತ್ರುಕಾಟ, ಶತ್ರುಭಯ, ಭಾನಾಮತಿ ಪ್ರಯೋಗ, ಮಾಟಮದ್ದುಗಳ ಕಾಟ, ಕೊಲೆ, ದುರ್ಮರಣ, ಆತ್ಮಹತ್ಯೆ ಘಟನೆಗಳು ಜರಗುತ್ತವೆ. ಚಂದ್ರ, ಶುಕ್ರರಲ್ಲಿ ದುರ್ಬಲ ನಿರ್ಬಲ ಚಂದ್ರನಿಗೆ ಹೆಚ್ಚು. ಶತ್ರುಪೀಡೆ ಮಂಗಳ, ರಾಹು, ಶನಿ, ರವಿಗಳಲ್ಲಿ ಮಂಗಳ, ರಾಹುಗಳು ಹೆಚ್ಚು ದಮನಕಾರಿ ಪ್ರವೃತ್ತಿಯವರು.

**2) ಶತ್ರುಕಾಟ ಕೊಡುವ ಶತ್ರುದಮನ ಕಾರಕಸ್ಥಾನಗಳು :-**

ಶತ್ರುಕಾಟ, ಶತ್ರುದಮನದ ಕಾರಕಸ್ಥಾನವೆಂದರೆ ಷಷ್ಠಸ್ಥಾನವು ಇದು ಅಲ್ಲದೇ ಕೊಲೆ, ಸುಲಿಗೆ, ದರೋಡೆ, ಚೋರರ ಭಯ ಅಗ್ನಿಭಯ ತೀವ್ರಬಾಧೆಯು ಎಲ್ಲ ಪ್ರಕಾರದ ರೋಗಗಳು ಅನೇಕ ಬಗೆಯ ವಿಪತ್ತು ತುರಂಗವಾಸ ಅಸೌಖ್ಯ ವಿಚಾರ ಹೀಗೆ ಅನೇಕ ವಿಚಾರಗಳನ್ನು ಈ ಸ್ಥಾನದಿಂದಲೇ ಪರಿಶೀಲಿಸುತ್ತಾರೆ. ಪ್ರಸ್ತುತ ಈ ಅಧ್ಯಾಯದ ಈ ವಿಷಯದ ಬಗೆಗೆ ವಿವರಿಸಬೇಕೆಂದರೆ ಮೇಲೆ ಬರೆದ ಎಲ್ಲ ಸಂಗತಿಗಳನ್ನು ಈ ಸ್ಥಾನದಿಂದಲೇ ಪರಿಶೀಲಿಸುತ್ತಾರೆ. ಆದುದರಿಂದ ಷಷ್ಠಸ್ಥಾನದಲ್ಲಿ ಬಲಾಢ್ಯ ಗ್ರಹ ಷಷ್ಠೇಶ ಬಲಾಢ್ಯನಿದ್ದ ಜಾತಕನಿಗೆ ಶತ್ರುಪೀಡೆ ಶತ್ರುಕಾಟ ಮಾಟಮದ್ದು ಭಾನಾಮತಿ ಮೊದಲಾದ ಯಾವುದೇ ತೊಂದರೆಯುಂಟಾಗುವುದಿಲ್ಲ. ಆದರೆ ಷಷ್ಠದಲ್ಲಿ ದುರ್ಬಲ ನಿರ್ಬಲ ಗ್ರಹ ಹಾಗೂ ಷಷ್ಠೇಶ ದುರ್ಬಲ ನಿರ್ಬಲನಿದ್ದ ಜಾತಕನಿಗೆ ಶತ್ರುಕಾಟ, ಶತ್ರುಪೀಡೆ ಬಹಳ. ಷಷ್ಠಸ್ಥಾನದ ತರುವಾಯ, ದ್ವಾದಶ ಸ್ಥಾನವನ್ನು ಪರಿಶೀಲಿಸಬೇಕು. ಏಕೆಂದರೆ ದ್ವಾದಶಸ್ಥಾನದಲ್ಲಿದ್ದ ಗ್ರಹಗಳ ನೇರ ದೃಷ್ಟಿ ಷಷ್ಠಸ್ಥಾನದ ಮೇಲೆ ಬೀಳುವುದರಿಂದ ಶತ್ರುಪೀಡೆಯ ವಿಷಯವಾಗಿ ಈ ಸ್ಥಾನವೂ ಕೂಡ ಪರಿಣಾಮ ಕೊಡುವದು. ದ್ವಾದಶ ಸ್ಥಾನದಲ್ಲಿ ಬಲಾಢ್ಯಗ್ರಹವಿದ್ದರೆ ಶುಭ ಫಲವೂ ದುರ್ಬಲ ನಿರ್ಬಲ ಗ್ರಹವಿದ್ದರೆ ಅಶುಭ ಫಲವೂ ಕೊಡುತ್ತವೆ. ಕೇವಲ ದ್ವಾದಶಸ್ಥಾನ ಮಾತ್ರವಲ್ಲಾ ಷಷ್ಠಸ್ಥಾನದ ಮೇಲೆ ಯಾವ ಗ್ರಹದ ದೃಷ್ಟಿ ಬೀಳುತ್ತದೆಯೋ ಆ ಗ್ರಹದ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಇಷ್ಟೇ ಅಲ್ಲ ಷಷ್ಠೇಶನ ಮೇಲೆ ಕೂಡ ಯಾವ ಗ್ರಹದ ದೃಷ್ಟಿ ಬೀಳುತ್ತದೆ.

ಅವರ ಪರಿಣಾಮ ಕೊಡುತ್ತವೆ. ದೃಷ್ಟಿ ಬೀಳುವ ಗ್ರಹವು ಷಷ್ಠೇಶನ ಮಿತ್ರರಾಗಿದ್ದರೆ. ಶುಭ ಫಲವೂ ಶತ್ರುವಾಗಿದ್ದರೆ ಅಶುಭ ಫಲವೂ ದೊರೆಯುತ್ತದೆ.

**3) ಶತ್ರುಕಾಟ ಕೊಡುವ ಹಾಗೂ ಶತ್ರುದಮನ ಕೊಡುವ ಲಗ್ನಗಳು:—** ನಿರ್ದಿಷ್ಟ ಲಗ್ನಗಳೇ ಶತ್ರುಕಾಟದ ಹಾಗೂ ಶತ್ರುದಮನದ ಲಗ್ನಗಳು ಎಂದು ಹೇಳಲು ಬಾರದಿದ್ದರೂ ವೃಷಭ. ಧನು. ಲಗ್ನಗಳಿದ್ದು ಶುಕ್ರನು ನಿರ್ಬಲ, ದುರ್ಬಲನಿದ್ದರೆ ಶತ್ರುಕಾಟ ಶತ್ರುಪೀಡೆ ಬಹಳ ಇದರಂತೆಕುಂಭ ಲಗ್ನವಿದ್ದು ಚಂದ್ರನು ನಿರ್ಬಲ,ದುರ್ಬಲನಿದ್ದರೆ ಶತ್ರುಕಾಟಬಹಳ ಕಾಟ ಮಿಥುನ' ವೃಶ್ಚಿಕ ಲಗ್ನಗಳಿದ್ದು ಮಂಗಳನು ಬಲಾಢ್ಯನಿದ್ದರೆ ಶತ್ರುದಮನ ವಾಗುತ್ತದೆ. ಶತ್ರುಗಳು ಹದ್ದು ಬಸ್ತಿನಲ್ಲಿರುತ್ತಾರೆ. ಇದರಂತೆ ಸಿಂಹ. ಕನ್ಯಾಲಗ್ನಗಳಿದ್ದು ಶನಿಯು ಬಲಾಢ್ಯನಿದ್ದರೆ ಶತ್ರುದಮನವಾಗುತ್ತದೆ. ವಿನಹ ಶತ್ರುಕಾಟವಿರುವುದಿಲ್ಲ ಇದರಂತೆ ಮೀನಲಗ್ನವಿದ್ದು ರವಿಯು ಬಲಾಢ್ಯ ನಿದ್ದರೆ ಶತ್ರುದಮನವಾಗುತ್ತದೆ. ಮೇಷ, ಮಕರಲಗ್ನಳಿದ್ದು ಬುಧನು ಬಲಾಢ್ಯನಿದ್ದರೆ ಕರ್ಕ, ತುಳಾಲಗ್ನಗಳಿದ್ದು ಗುರು ಬಲಾಢ್ಯನಿದ್ದರೆ ಇವರಿಗೆ ಶತ್ರುಕಾಟವಾಗಲೀ ಶತ್ರುದಮನವಾಗಲಿ ಇರುವುದಿಲ್ಲ ಸ್ಥಿತ ಪ್ರಜ್ಞ ಅಥವಾ ಅಜಾತಶತ್ರುಗಳಿರುತ್ತಾರೆ.

**4) ಶತ್ರುಕಾಟ ಶತ್ರುದಮನದ ಭಾವಂಶಿನ ಫಲ:—** ಯಾವುದೇ ಲಗ್ನವಿದ್ದು ಷಷ್ಠದಲ್ಲಿ ಬಲಾಢ್ಯಗ್ರಹ ಷಷ್ಠೇಶ ಬಲಾಢ್ಯನಿದ್ದರೆ ಇವರಿಗೆ ಶತ್ರುಕಾಟವಿರುವುದಿಲ್ಲ ಆದರೆ ಯಾವುದೇ ಲಗ್ನವಿದ್ದಲ್ಲಿ ಷಷ್ಠದಲ್ಲಿ ದುರ್ಬಲ. ನಿರ್ಬಲ ಗ್ರಹಗಳಿದ್ದು ಷಷ್ಠೇಶನೂ ದುರ್ಬಲ ನಿರ್ಬಲಗ್ರಹಗಳಿದ್ದರೆ ಶತ್ರುಕಾಟ ಬಹಳ.

**5)ಶತ್ರುಕಾಟ, ಶತ್ರುದಮನ ರಾಶಿಗಳು :–**ನಿರ್ದಿಷ್ಟ ರಾಶಿಯವರಿಗೆ ಶತ್ರುಗಳು ಬಹಳ ನಿರ್ದಿಷ್ಟ ರಾಶಿಯವರಿಗೆ ಶತ್ರುಗಳು ಕಡಿಮೆ ಎಂದು ಹೇಳಲು ಬಾರದಿದ್ದರೂ ಕೂಡಾ ಸ್ತ್ರೀರಾಶಿಗಳಾದ ವೃಷಭ, ಕರ್ಕ, ಕನ್ಯಾ, ವೃಶ್ಚಿಕ. ಮಕರ, ಮೀನ ಈ ರಾಶಿಯವರಿಗೆ ಶತ್ರುಕಾಟ ಬಹಳ ಆದರೆ ಪುರುಷರಾಶಿ

ಗಳಾದ ಮೇಷ, ಮಿಥುನ, ಸಿಂಹ, ತುಲಾ, ಧನು, ಕುಂಭ ಈ ರಾಶಿಯವರಿಗೆ ಶತ್ರುಗಳು ಕಡಿಮೆ ಅನ್ನುವುದಕ್ಕಿಂತ ಶತ್ರುಗಳನ್ನು ದಮನಮಾಡುತ್ತಾರೆ.

**5) ಶತ್ರುಕಾಟಕೊಡುವ ಶತ್ರುದಮನಕೊಡುವ ಯೋಗಗಳು:**

1) ರವಿ, ಶನಿ, ಚಂದ್ರ–ಶನಿ, ಚಂದ್ರ–ರಾಹು, ರವಿ-ಕೇತು, ಶನಿ-ಮಂಗಳ ಈ ಗ್ರಹಗಳ ಪ್ರತಿಯೋಗವು ಷಷ್ಠ–ದ್ವಾದಶ ಚತುರ್ಥ–ದಶಮ, ಲಗ್ನ–ಸಪ್ತಮ ಈ ಸ್ಥಾನಗಳಲ್ಲಿದ್ದರೆ ಶತ್ರುಕಾಟ, ಶತ್ರುಪೀಡೆ ಬಹಳ.

2) ಶನಿ–ಮಂಗಳ, ಶನಿ–ರವಿ, ಶನಿ, ಚಂದ್ರ, ರಾಹು –ಚಂದ್ರ ರವಿ-ಕೇತು ಈ ಗ್ರಹಗಳ ಯುತಿಯೋಗವು ಲಗ್ನ, ಚತುರ್ಥ, ಷಷ್ಠ, ವ್ಯಯದಲ್ಲಿದ್ದರೂ ಶತ್ರು ಕಾಟ, ಶತ್ರುಪೀಡೆ ಬಹಳ.

3) ಚಂದ್ರ, ಶುಕ್ರರು ದುರ್ಬಲರಾಗಿ ಷಷ್ಠದಲ್ಲಿದ್ದರೆ, ಅಥವಾ ಷಷ್ಠೇಶ ರಾಗಿ ದುರ್ಬಲರಿದ್ದರೆ ಶತ್ರುಕಾಟ ಬಹಳ

4) ಮಂಗಳ, ರವಿ, ರಾಹು, ಶನಿಯರು ಬಲಾಢ್ಯರಾಗಿ ಷಷ್ಠದಲ್ಲಿದ್ದರೆ ಅಥವಾ ಷಷ್ಠೇಶರಾಗಿ ಬಲಾಢ್ಯರಿದ್ದರೆ ಶತ್ರುಕಾಟ ಇರುವುದಿಲ್ಲ ಅಥವಾ ಶತ್ರುದಮನವಾಗುತ್ತದೆ.

5) ಯಾವುದೇ ಲಗ್ನದ ಷಷ್ಠೇಶ ಬಲಾಢ್ಯನಿದ್ದರೆ ಅಥವಾ ಷಷ್ಠದಲ್ಲಿ ಬಲಾಢ್ಯಗ್ರಹವಿದ್ದರೆ ಶತ್ರುಪೀಡೆ ಇರುವುದಿಲ್ಲ.

6) ಯಾವುದೇ ಲಗ್ನದ ಷಷ್ಠೇಶ ನಿರ್ಬಲ ದುರ್ಬಲನಿದ್ದರೆ ಅಥವಾ ಷಷ್ಠದಲ್ಲಿ ದುರ್ಬಲ, ನಿರ್ಬಲ ಗ್ರಹವಿದ್ದರೆ ಶತ್ರುಕಾಟ ಬಹಳ.

**ಸ್ನೇಹಿತರ ಸೌಖ್ಯ ಯಾರಿಗೆ ? —** ಸ್ನೇಹಿತರ ಸೌಖ್ಯಕೊಡುವ ಸ್ಥಾನವೆಂದರೆ ಲಾಭಸ್ಥಾನವು ಯಾರ ಜಾತಕದಲ್ಲಿ ಲಾಭೇಶನು ಬಲಾಢ್ಯನಿರುವನೋ ಅವರಿಗೆ ಸ್ನೇಹಿತರ ಸೌಖ್ಯ ಬಹಳ ಲಾಭೇಶನು ನಿರ್ಬಲ ದುರ್ಬಲನಿರುವನೋ ಅವರಿಗೆ ಸ್ನೇಹಿತರ ಸೌಖ್ಯ ಕಡಿಮೆ. ಇಷ್ಟೇ ಅಲ್ಲ ಲಾಭೇಶನು ದುರ್ಬಲ ನಿರ್ಬಲರಿರುವ ಜಾತಕರಿಗೆ ಸ್ನೇಹಿತರಿಂದಲೇ ವಿಶ್ವಾಸಘಾತವಾಗು

ತ್ತದೆ. ಲಾಭೇಶನ ಗುಣಧರ್ಮದಂತೆ ಮಿತ್ರವರ್ಗದವರಿರುತ್ತಾರೆ. ಚಂದ್ರ, ಗುರು, ಬುಧರು ಲಾಭೇಶರಾಗಿ ಬಲಾಢ್ಯರಿದ್ದರೆ ಮಿತ್ರರ ಸಂಖ್ಯೆ ಹೆಚ್ಚಿರುವುದಲ್ಲದೇ ಸೌಖ್ಯವೂ ಸಿಗುತ್ತದೆ. ರವಿ, ಮಂಗಳ, ಶನಿಯರು ಲಾಭೇಶರಾಗಿ ಬಲಾಢ್ಯರಿದ್ದರೆ ಸೌಖ್ಯವೇನೋ ಸಿಗುತ್ತದೆ ಆದರೆ ಸೌಖ್ಯ ಕಡಿಮೆ.

ಯಾವುದೊಂದು ಗ್ರಹದ ಶುಭಫಲದ ಬಗೆಗೆ ನಿರ್ಧರಿಸಬೇಕಾದರೆ ಆ ಗ್ರಹದ ಸ್ಥಾನಬಲ, ರಾಸಿಬಲವೂ ಇರಬೇಕಾಗುತ್ತದೆ. ಶತ್ರುಕ್ಷೇತ್ರೀ ಇರಕೂಡದು. ಆದರೆ ಲಾಭಸ್ಥಾನಕ್ಕೆ ಈ ಮಾತು ಅನ್ವಯಿಸುವುದಿಲ್ಲ ಲಾಭ ಸ್ಥಾನದಲ್ಲಿ ಯಾವುದೇ ಗ್ರಹ ಇದ್ದರೂ ರಾಶಿಬಲವಿಲ್ಲದಿದ್ದರೂ ಕೂಡ ಶತ್ರುಕ್ಷೇತ್ರಿ ಇದ್ದರೂ ಕೂಡ ಶತ್ರು ಸಂಗಡ ಶತ್ರುಮಧ್ಯ ಇದ್ದರೂ ಲಾಭಸ್ಥಾನದಲ್ಲಿರುವುದರಿಂದ ಶುಭಫಲವನ್ನೇ ಕೊಡುತ್ತದೆ. ಈ ಸಂಗತಿ ಬಹಳ ಮಹತ್ವದ್ದು. ಇಲ್ಲಿ ಲಾಭೇಶನ ಬಲಾಬಲಕ್ಕಿಂತ ಲಾಭಸ್ಥಾನದಲ್ಲಿರುವ ಗ್ರಹಗಳ ಗುಣಧರ್ಮದಂತೆ ಮಿತ್ರಮಂಡಳಿಗಳ ಸಂಖ್ಯೆ ಹಾಗೂ ಸಂಖ್ಯೆ ಇರುತ್ತದೆ. ಉದಾ ಚಂದ್ರನು ಲಾಭದಲ್ಲಿದ್ದರೆ ಮಿತ್ರರ ಸೌಖ್ಯ ಬಹಳ ಹಾಗೂ ಸಂಖ್ಯೆಯೂ ಬಹಳ ಬುಧನಿದ್ದರೂ ಕೂಡ ಸಂಖ್ಯೆ ಹಾಗೂ ಸೌಖ್ಯ ಬಹಳ ರವಿ,ಗುರುಗಳಿದ್ದರೆ ಮಿತ್ರರಕ್ಕಿಂತ ಅನುಯಾಯಿಗಳ ಸಂಖ್ಯೆ ಬಹಳ ಶನಿಯು ಲಾಭದಲ್ಲಿ ದೀನದಲಿತರ ಕೆಳವರ್ಗಿಯ ಜನರ ಸಂಖ್ಯೆ ಬಹಳ ಶುಕ್ರ-ಚಂದ್ರರಿದ್ದರೆ ಮಹಿಳಾ ಮಿತ್ರರ ಸಂಖ್ಯೆ ಹಾಗೂ ಸೌಖ್ಯ ಸಿಗುತ್ತದೆ. ಶುಕ್ರನೊಬ್ಬನೇ ಲಾಭದಲ್ಲಿದ್ದರೆ ಕಲಾವಿದರ ವಿಲಾಸೀವರ್ಗದವರ ಸಂಖ್ಯೆ ಬಹಳ ಸೂರ್ಯನ ಲಾಭದಲ್ಲಿದ್ದರೆ ಅಧಿಕಾರಿ ವರ್ಗದವರ ರಾಜಕಾರಣಿ ಮಿತ್ರರ ಸಂಖ್ಯೆ ಹಾಗೂ ಸೌಖ್ಯ ಸಿಗುತ್ತದೆ. ಹೀಗೆ ಆಯಾ ಗ್ರಹಗಳ ಗುಣ ಸ್ವಭಾವ ಧರ್ಮದಂತೆ ಮಿತ್ರವರ್ಗದವರ ಅನುಯಾಯಿಗಳ ಸಂಖ್ಯೆಯು ಬಗೆಗೂ ಸೌಖ್ಯದ ಬಗೆಗೆ ಅರ್ಥೈಸಬೇಕು. ಇವುಗಳ ಹೆಚ್ಚಿನ ವಿವರಣೆಗಾಗಿ ನಾವು ಬರೆದು ಪ್ರಕಟಿಸಿದ **ಕುಂಡಲಿ ಗುಣ ನಿರ್ಣಯ ಗ್ರಂಥದ ಪುಟದ 82 ರಿಂದ 93ರ ವರೆಗಿನ ಪುಟದಲ್ಲಿ ವಿವರವಾಗಿ ವಿವರಿಸಲಾಗಿದೆ.**

ಈ ವರೆಗೆ ಶತ್ರುಕಾಟ ಯಾವ ಜಾತಕನಿಗಿರುತ್ತದೆ. ಶತ್ರುಕಾಟ ಯಾವ

ಜಾತಕನಿಗಿರುವುದಿಲ್ಲ? ಮಿತ್ರರ ಸಂಖ್ಯೆ ಹಾಗೂ ಸೌಖ್ಯ ಯಾವ ಜಾತಕನಿಗಿರುತ್ತದೆ. ಎಂಬುದನ್ನು ವಿವರಿಸಿದ್ದಾಯಿತು. ಇನ್ನು ಶತ್ರು ಮಿತ್ರರ ಬಗೆಗೆ ಯಾವ ಯಾವ ಮುಂಜಾಗ್ರತೆ ಹಾಗೂ ಪರಿಹಾರದ ಕ್ರಮಗಳನ್ನು ಕೈಕೊಳ್ಳಬೇಕು ಎಂಬುದನ್ನು ಪರಿಶೀಲಿಸುವಾ. ಮೊದಲು ಮುಂಜಾಗ್ರತೆ ಕ್ರಮದ ಬಗೆಗೆ ಪರಿಶೀಲಿಸುವಾ.

**ಶತ್ರು ಮಿತ್ರರ ಬಗೆಗೆ ಮುಂಜಾಗ್ರತೆ ಕ್ರಮಗಳು:**— 1) ಯಾರ ಜಾತಕದಲ್ಲಿ ಶತ್ರುಗಳ ಕಾಟ ಬಹಳವಿರುತ್ತದೆಯೋ ಅವರು ಆದಷ್ಟು ಒಬ್ಬೊಬ್ಬರೆ ಪ್ರವಾಸ ಕೈಕೊಳ್ಳಬಾರದು.

2) ಯಾರ ಜಾತಕದಲ್ಲಿ ಶತ್ರುಕಾಟ ಬಹಳವಿರುತ್ತದೆಯೋ ಅಂಥವರು ನೆರೆಹೊರೆಯವರೊಂದಿಗೆ ಹೆಚ್ಚು ಸ್ನೇಹದಿಂದಲೂ ಹೆಚ್ಚು ವೈರತ್ವದಿಂದಲೂ ವರ್ತಿಸದೇ ತಟಸ್ಥ ಧೋರಣೆಯಿಂದ ಇರಬೇಕು. ಯಾವ ಜಾತಕನಿಗೆ ನೆರೆಹೊರೆಯವರ ಶತ್ರುಕಾಟವಿದೆಯೋ ಅವರು ಅವರೊಂದಿಗೆ ಮರುಮಾತನಾಡಬಾರದು. ಹಾಗೂ ಆದಷ್ಟು ತಗ್ಗಿ ಬಗ್ಗಿ ನಡೆಯಬೇಕು. ಎಲ್ಲದಕ್ಕೂ ತನ್ನದೇ ಸರಿ ತಾನು ಹೇಳಿದ್ದೆ ಪೂರ್ವದಿಕ್ಕು ಎನ್ನದೇ ಕೊಟ್ಟು ತೆಗೆದುಕೊಳ್ಳುವ ಮನೋಭಾವನೆಯಿಂದ ವರ್ತಿಸಬೇಕು.

3) ನೆರೆಹೊರೆಯವರೊಂದಿಗೆ ಭಾಗಾದಿಗಳೊಂದಿಗೆ ಸಹೋದ್ಯೋಗಿಗಳೊಂದಿಗೆ ಕಾಯದೆ ಹಾಗೂ ನೈತಿಕದ ಗೆರೆ ದಾಟಬಾರದು.

4) ಯಾರ ಜಾತಕದಲ್ಲಿ ಶತ್ರುಕಾಟ ಇದೆಯೋ ಆ ಜಾತಕನು ವಾಹನ ಚಲಾಯಿಸುವಾಗ ಮಶಿನರೀ ಉಪಯೋಗಿಸುವಾಗ ಅಪರಿಚಿತರಲ್ಲಿ ಅನ್ನಪಾನಾದಿಗಳನ್ನು ಸೇವಿಸುವಾಗ ಎಚ್ಚರವಹಿಸಬೇಕು. ಹಾಗೂ ರಾತ್ರಿ ಸಮಯದಲ್ಲಿ ಪ್ರವಾಸಕೈಕೊಳ್ಳುವುದು ಅನಿವಾರ್ಯವಿದ್ದಾಗ ಒಬ್ಬರೇ ಪ್ರವಾಸ ಕೈಕೊಳ್ಳಬಾರದು. ಹಾಗೂ ರಾತ್ರೀ ಸಮಯದಲ್ಲಿ ತಾವೇ ಸ್ವತಃ ವಾಹನಚಲಾಯಿಸಬಾರದು.

5) ಯಾರ ಜಾತಕದಲ್ಲಿ ಲಾಭೇಶನು ದುರ್ಬಲ ನಿರ್ಬಲನಿದ್ದರೆ ಅವರಿಗೆ ಮಿತ್ರರೇ ಹಿತಶತ್ರುಗಳಂತೆ ವರ್ತಿಸುವರು. ವಿಶೇಷವಾಗಿ ಹಣಕಾಸಿನ ವಿಷಯವಾಗಿ ಹಾನಿ ಆಗಬಹುದಾಗಿದೆ. ಇಂಥವರು ಹಣಕಾಸಿನ ದೃಷ್ಟಿಯಿಂದ ಎಲ್ಲ ಎಚ್ಚರಿಕೆ ವಹಿಸಬೇಕು. ಯಾವುದೇ ಕಾಗದ ಪತ್ರ

ಸರಿಯಾಗಿ ಪರಿಶೀಲಿಸದೇ ಸಹಿ ಮಾಡಬಾರದು. ಯಾರಿಗೂ ಜಾಮೀನ (ಶೂರಿಟಿ) ಆಗಬಾರದು. ರೋಖ ಹಣ ಜೇಬಿನಲ್ಲಿಟ್ಟು ಪ್ರವಾಸ ಕೈಕೊಳ್ಳಬಾರದು. ಚೆಕ್ ಮೂಲಕ ವ್ಯವಹಾರ ಸಾಗಿಸಬೇಕು.

6) ಯಾರ ಜಾತಕದಲ್ಲಿ ಚಂದ್ರ, ಶುಕ್ರರು ಬಾಧೇಶರಾಗಿ ದುರ್ಬಲ ನಿರ್ಬಲರಿರುವರೋ ಅಂಥ ಜಾತಕರು ವ್ಯಸನೀ ಮಿತ್ರರಿಂದ ವ್ಯಸನಾಧೀನರಾಗುವ ಸಂಭವವಿದೆ. ಅದಕ್ಕೆ ಅವಕಾಶವಾಗದ ಹಾಗೆ ನೋಡಿಕೊಳ್ಳಬೇಕು.

7) ಸಂಕ್ಷಿಪ್ತದಲ್ಲಿ ಶತ್ರುಕಾಟವಿರುವ ಜಾತಕನು ಬಾಧೇಶನು ದುರ್ಬಲ ನಿರ್ಬಲವಿರುವ ಜಾತಕನು ಯಾವ ಮುಂಜಾಗ್ರತೆ ಕ್ರಮಗಳನ್ನು ಕೈಕೊಳ್ಳಬೇಕೆಂಬುದನ್ನು ವಿವರಿಸಿದ್ದಾಯಿತು ಇನ್ನು ಪರಿಹಾರದ ಕ್ರಮದ ಬಗೆಗೆ ಪರಿಶೀಲಿಸುವಾ.

**ಶತ್ರು-ಮಿತ್ರರ ಬಗೆಗೆ ಪರಿಹಾರದ ಕ್ರಮಗಳು :—** ಯಾರ ಜಾತಕದಲ್ಲಿ ಶತ್ರುಕಾಟ, ಶತ್ರುಭೀತಿ ಶತ್ರುಪೀಡೆ ಇರುವವೋ ಹಾಗೂ ಯಾರ ಜಾತಕದಲ್ಲಿ ಬಾಧೇಶನು ದುರ್ಬಲ ನಿರ್ಬಲನಿರುವನೋ ಅಂಥವರು (ಆ ಜಾತಕದವರು) ಈ ಕೆಳಗೆ ಬರೆದ ಪರಿಹಾರದ ಕ್ರಮಗಳನ್ನು ಕೈಕೊಳ್ಳಬೇಕು.

1) **ಅರಣ್ಯಕಾಂಡ ಕಿಷ್ಕಿಂದಾಕಾಂಡ ಯುದ್ಧಕಾಂಡದಲ್ಲಿ ಸೀತಾ ಆಂಜನೇಯರ ಸಂವಾದ** ರಾಮಾಯಣದ ಅರಣ್ಯಕಾಂಡ, ಕಿಷ್ಕಿಂದಾಕಾಂಡ, ಯುದ್ಧಕಾಂಡದಲ್ಲಿಯ ಸೀತಾ ಆಂಜನೇಯರ ಸಂವಾದ ಪ್ರಸಂಗದ ಸರ್ಗ ಪಠಣ, ಶ್ರವಣ ಪಾರಾಯಣದಿಂದ ಶತ್ರುಭೀತಿ ನಿವಾರಣೆಗೆ ಶತ್ರುದಮನ, ಸ್ನೇಹವರ್ಧನೆಯಾಗುವುದರಲ್ಲಿ ಸಂದೇಹವಿಲ್ಲ. ಗೋಚರೀಯಿಂದ ಗುರುವು 4-6-8-12 ನೇ ಮನೆಯಾಗಿ ಬಂದಾಗ ಶನಿಯು 12-1-2-4-5-8 ನೇ ಮನೆಯಾಗಿ ಬಂದಾಗ ಮೇಲೆ ಬರೆದ ರಾಮಾಯಣದ ಅರಣ್ಯಕಾಂಡ, ಕಿಷ್ಕಿಂದಾಕಾಂಡ, ಯುದ್ಧಕಾಂಡದ ಸೀತಾಂಜನೇಯರ ಸಂವಾದ ಇವುಗಳನ್ನು ನಿತ್ಯ ಓದಿದಲ್ಲಿ ಕನಿಷ್ಠ ವಾರಕೊಮ್ಮೆಯಾದರೂ ಓದಿದಲ್ಲಿ ಪಠಿಸಿದಲ್ಲಿ ಶ್ರವಣ ಮಾಡಿದಲ್ಲಿ

ಖಂಡಿತವಾಗಿ ಶತ್ರು ಪೀಡೆ ಶತ್ರು ಕಾಟ ಹೋಗುವುದಲ್ಲದೇ ಸ್ನೇಹವರ್ಧನೆ ಆಗುವುದು.

2) **ಶ್ರೀಶಿವ ಅಪಾಮಾರ್ಜನ ಸ್ತೋತ್ರ:-** ಶ್ರೀಶಿವಅಪಾಮಾರ್ಜನ ಸ್ತೋತ್ರವೆಂಬ ಎರಡೆರಡು ಸಾಲಿನ 62 ನುಡಿಗಳ ಈ ಸ್ತೋತ್ರವನ್ನು ನಿತ್ಯ ಪಠಿಸುವುದರಿಂದಾಗಲೀ ಕನಿಷ್ಠ ಪ್ರತಿ ಸೋಮವಾರ ಪಠಿಸುವುದರಿಂದ ಶತ್ರುಪೀಡೆ ವಿಶೇಷವಾಗಿ ಮಾಟ ಮದ್ದು ಭಾನುಮತಿ ಪ್ರಯೋಗ ಮೊದಲಾದ ಅನಿಷ್ಟಗಳು ದೂರಾಗುವವು.

3) **ಶ್ರೀ ನೃಸಿಂಹ ಸ್ತುತಿ—** ಶ್ರೀ ನೃಸಿಂಹಸ್ತುತಿ ಎಂಬ ನಾಲ್ಕು ನಾಲ್ಕು ಸಾಲುಗಳಿರುವ 24 ನುಡಿಗಳಿರುವ ಈ ಸ್ತೋತ್ರವನ್ನು ಪ್ರತಿ ಗುರುವಾರ ಪಠಿಸಿದಲ್ಲಿ ಖಂಡಿತವಾಗಿ ಶತ್ರುಪೀಡೆ, ಮಾಟ ಮದ್ದುಗಳಕಾಟ ಭಾನಾಮತಿ ಪ್ರಯೋಗ ದೂರಾಗುತ್ತವೆ.

4] **ಶ್ರೀ ದತ್ತಾತ್ರೆಯ ಸ್ತೋತ್ರ:-** ಪ್ರತಿ ಗುರುವಾರ ಶ್ರೀದತ್ತಾತ್ರಯ ಸ್ತೋತ್ರವನ್ನು ಪಠಿಸುವುದರಿಂದ ಶತ್ರು ಪೀಡೆ ಮಾಟ ಮದ್ದುಗಳ ಕಾಟ ಭಾನುಮತಿ ಪ್ರಯೋಗ ದೂರಾಗುತ್ತದೆ.

5] **ಗಣ ಹೋಮ:-** ವರುಷಕ್ಕೊಮ್ಮೆಯಂತೆ ಪ್ರತಿ ವರುಷ ಗಣ ಹೋಮ ಮಾಡಿದಲ್ಲಿ ಶತ್ರು ಪೀಡೆ ಮಾಟ ಮದ್ದುಗಳ ಕಾಟ ಭಾನಾಮತಿ ಪ್ರಯೋಗ ದೂರಾಗುತ್ತದೆ. ಕನಿಷ್ಟ ಪಕ್ಷ ಗುರುವು ಗೋಚರೀಯಿಂದ 4–6–8–12ನೇ ಮನೆನಾಗಿ ಬಂದಾಗ ರಾಹು ಗೋಚರೀಯಿಂದ 1–4–8–12 ನೇ ಮನೆನಾಗಿ ಬಂದಾಗ ಶನಿಯು ಗೋಚರೀಯಿಂದ 1–2–4–5–8–12ನೇ ಯುವನಾಗಿ ಬಂದಾಗ ಗಣಹೋಮ ಮಾಡಿದಲ್ಲಿ ಎಲ್ಲ ಪ್ರಕಾರದ ಶತ್ರು ಪೀಡೆ ಪರಿಹಾರವಾಗುತ್ತದೆ.

6] **ಉದಕ ಶಾಂತಿ, ನವಗ್ರಹ ಶಾಂತಿ:-** ಪ್ರತಿ ವರುಷ ತಪ್ಪದೇ ನವಗ್ರಹ ಶಾಂತಿ ಉದಕ ಶಾಂತಿ ಮಾಡಿಸಿದಲ್ಲಿ ಶತ್ರುಪೀಡೆ ಶತ್ರುಕಾಟ ನಿವಾರಣೆ ಆಗುತ್ತದೆ.

7] **ಸಂಕಷ್ಟಿ ಚತುರ್ಥಿ:-** ಪ್ರತಿ ಕೃಷ್ಣ ಪಕ್ಷದ ಚವತಿ ದಿನ ಬರುವ ಸಂಕಷ್ಟಿ ಚತುರ್ಥಿ ವೃತ್ತವನ್ನು ಆಚರಿಸಿದಲ್ಲಿ ಎಲ್ಲ ಪ್ರಕಾರದ ಸಂಕಟಗಳು ದೂರಾಗುವವು. ವಿಶೇಷವಾಗಿ ಶತ್ರು ಪೀಡೆ ಶತ್ರು ಕಾಟ ವ್ಯಾಜ್ಯದಲ್ಲಿ ಜಯ. ದಾಯಾದಿಗಳ ಭಾಗಾದಿಗಳ ತೊಂದರೆ ನಿವಾರಣೆಯಾಗುತ್ತದೆ.

8] **ಶ್ರೀ ದುರ್ಗಾ ಸಪ್ತಶತಿ ಪಠಣ:-** ಶ್ರೀ ದುರ್ಗಾ ಸಪ್ತಶತಿಯ 700 ಶ್ಲೋಕಗಳನ್ನು ಪ್ರತಿ ಮಂಗಳವಾರ ಅಥವಾ ಶುಕ್ರವಾರ ದಿನ ಪಠಿಸಿ ಶ್ರೀದೇವಿ ಪೂಜೆ ಪುನಸ್ಕಾರ ಮಾಡಿದಲ್ಲಿ ಶತ್ರುಪೀಡೆ ಶತ್ರುಕಾಟ ಮಾಟ ಮದ್ದುಗಳ ಕಾಟ ಭಾನಾಮತಿ ಪ್ರಯೋಗ ನಿವಾರಣೆ ಆಗುತ್ತದೆ.

9] **ಸುದರ್ಶನ ಹೋಮ:-** ಸುದರ್ಶನ ಹೋಮ ಮಾಡಿದರೂ ಶತ್ರು ಪೀಡೆ ಮಾಟಮದ್ದುಗಳ ಕಾಟ ಭಾನಾಮತಿ ಪ್ರಯೋಗ ನಿವಾರಣೆ ಆಗುತ್ತದೆ

10] **ಪವಮಾನ ಹೋಮ :-** ಪವಮಾನ ಹೋಮ ಮಾಡಿದರೂ ಕೂಡ ಶತ್ರುಪೀಡೆ ನಿವಾರಣೆ ಆಗುತ್ತದೆ.

11] **ಶ್ರೀ ಹನುಮಾನ ಚಾಲೀಸ ಶ್ರೀ ಗಣೇಶ ಅಥರ್ವ ಶೀರ್ಷ ಶ್ರೀದೇವಿ ಸ್ತೋತ್ರ:-** ಶ್ರೀಹನುಮಾನ ಚಾಲೀಸ ಅಥರ್ವಶೀರ್ಷ ಶ್ರೀದೇವಿ ಸ್ತೋತ್ರವನ್ನು ನಿತ್ಯ ಪಠಿಸುವುದರಿಂದಲೂ ಶತ್ರು ಪೀಡೆ ನಿವಾರಣೆ ಆಗುತ್ತದೆ.

ಈ ಹನ್ನೊಂದು ಪರಿಹಾರ ಕ್ರಮಗಳಲ್ಲಿ ಯಾವುದಾದರೊಂದನ್ನು ಪರಿಹಾರ ಕ್ರಮಗಳನ್ನು ಕೈಕೊಂಡಲ್ಲಿ ಶತ್ರು ಪೀಡೆ ಮಾಟ ಮದ್ದುಗಳ ಕಾಟ ಭಾನಾಮತಿ ಪ್ರಯೋಗ ಮೊದಲಾದ ಎಲ್ಲ ಪ್ರಕಾರದ ಅನಿಷ್ಟಗಳು ದೂರಾಗುವವು.



# ನವಮುದಳ

## ಸಹೋದರ, ಸಹೋದರೀಯರ—ಪರಿಹಾರ

ಪರಿಹಾರ ಜ್ಯೋತಿಷ್ಯದ ಒಂಬತ್ತನೇಯ ಅಧ್ಯಾಯದಲ್ಲಿ ಸಹೋದರ–ಸಹೋದರೀಯರ ಪರಿಹಾರದ ಬಗೆಗೆ ಪ್ರಸ್ತಾಪಿಸುತ್ತೇನೆ. ಏಕೆಂದರೆ ಈ ಹಿಂದೆ ಸಹೋದರ—ಸಹೋದರರಿಗೆ ಸಂಬಂಧಿಸಿದ ಸಮಸ್ಯೆಗಳಿಗೆ ಮಾತ್ರ ಉತ್ತರ ಕೊಡಬೇಕಾಗುತ್ತಿತ್ತು. ಆದರೆ ಕಾನೂನು ಬದಲಾದಂತೆ ಮನುಷ್ಯನ ಧ್ಯೇಯ-ಧೋರಣೆಗಳಲ್ಲಿಯೂ ರೀತಿ—ನೀತಿಗಳಲ್ಲಿಯೂ ಬದಲಾವಣೆಗಳಾಗಿವೆ. ಹೆಣ್ಣುಮಕ್ಕಳಿಗೆ ಆಸ್ತಿಯಲ್ಲಿ ಸಮಪಾಲು ಎಂಬ ಕಾನೂನಿನಲ್ಲಿ ಒಳಮಾಡಿದಾಗ. ಸಹೋದರ—ಸಹೋದರಿಯರಲ್ಲಿ ವ್ಯಾಜ್ಯಗಳು ಪ್ರಾರಂಭವಾಗಿವೆ. ಕೋರ್ಟಿನ ಕಟ್ಟೆ ಹತ್ತುವುದು ಪ್ರಾರಂಭವಾಗಿವೆ ಈ ಹಿಂದೆ ಸಹೋದರ—ಸಹೋದರರು ಆಸ್ತಿಯ ಹಕ್ಕಿಗಾಗಿ ಪಾಲಿಗಾಗಿ ಕೋರ್ಟಿನ ಕಟ್ಟೆ ಹತ್ತುವುದು ಅದಕ್ಕಾಗಿ ಫೌಜದಾರಿ ಮೊಕದಮೆಗಳನ್ನು ಎದುರಿಸುವುದು ಕೂಡ ಸರ್ವ ಸಾಮಾನ್ಯವಾಗಿತ್ತು. ಕೆಲಸಂಧರ್ಭದಲ್ಲಿ ಕೊಲೆಗಳೂ ಆಗ ತ್ತಿದ್ದವು. ಆದರೆ ಹೆಣ್ಣುಮಕ್ಕಳಿಗೆ ಆಸ್ತಿಯಲ್ಲಿ ಸಮಪಾಲು ಕಾಯಿದೆ ಜಾರಿಯಾಗಿರುವುದರಿಂದ ಸಹೋದರ—ಸಹೋದರೀಯರಲ್ಲಿ ವ್ಯಾಜ್ಯ ಪ್ರಾರಂಭವಾಗಿದೆ ಇಷ್ಟೇ ಅಲ್ಲಾ ಸಹೋದರ—ಸಹೋದರರ ಸಹೋದರ ಸಹೋದರೀಯರ, ಸಹೋದರೀ—ಸಹೋದರೀಯರ ಹೀಗೆ ವ್ಯಾಜ್ಯಗಳ ಸಂಖ್ಯೆ ಹೆಚ್ಚಾಗಿವೆ ಅಲ್ಲದೆ ಅದಕ್ಕೆ ಸಂಬಂಧಿಸಿದ ಪ್ರಶ್ನೆಗಳು ಕೂಡಾ ಹಿಂದಿನಕಿಂತ ಹೆಚ್ಚಾಗಿವೆ ಏಂಬುದರ ಬಗೆಗೆ ಅವರು ವಿಚಾರಿಸುವ ಪ್ರಶ್ನೆಗಳ ಬಗೆಗೆ ಓದಿದರೆ ಅರ್ಥವಾಗುತ್ತದೆ. ಹಾಗಾದರೆ ಓದಿರಿ.

ಕೆಲಸಹೋದರೀಯರ ಪ್ರಶ್ನೆಯೆಂದರೆ ನಮ್ಮ ಅಣ್ಣನು ಅಥವಾ

ತಮ್ಮನು ನನಗೆ ಸಿಗಬೇಕಾದದ್ದು ಆಸ್ತಿಯ ಪಾಲು ಕೊಟ್ಟಿಲ್ಲ. ಅವನು ತಾನಾಗಿಯೇ ಕೊಡುವನೋ? ಅಥವಾ ನಾವಾಗಿಯೇ ಕೇಳಬೇಕೋ? ಎಂಬ ಪ್ರಶ್ನೆ ಇದ್ದರೆ ಮತ್ತೆ ಕೆಲ ಸಹೋದರಿಯರ ಪ್ರಶ್ನೆಯೆಂದರೆ ನಮ್ಮ ಸಹೋದರ ನನ್ನ ಶಿಕ್ಷಣಕ್ಕಾಗಿ, ನೌಕರಿಗಾಗಿ, ವೃತ್ತಿಗಾಗಿ, ಮದುವೆಗಾಗಿ. ಸಾಕಷ್ಟು ಖರ್ಚು ಮಾಡಿದ್ದಾರೆ. ಆಸ್ತಿಯಲ್ಲಿ ಹಕ್ಕು ಕೇಳುವ ಇಚ್ಛೆ ಇಲ್ಲ. ಆದರೆ ನಮ್ಮ ಯಜಮಾನರು ಕಾಡಿಸ ಹತ್ತಿದ್ದಾರೆ ಅವನು ಕೊಡಲಿಲ್ಲದಿದ್ದರೆ **ಕೋರ್ಟಿಗೆ** ಹೋಗು ಎನ್ನುತ್ತಿದ್ದಾರೆ ಹೇಗೆ ಎಂದು ಪ್ರಶ್ನಿಸುತ್ತಿದ್ದರೆ ಮತ್ತೆ ಕೆಲ ಸಹೋದರಿಯರ ಪ್ರಶ್ನೆ ವಿಚಿತ್ರವಾಗಿದೆ. ಕೋರ್ಟಿನ ಕಟ್ಟೆ ಹತ್ತಿ ಆಸ್ತಿಯ ಪಾಲು ಪಡೆದಿರುವೆ ಆದರೆ ಅಣ್ಣ ತಮ್ಮಂದಿರ ಲಗ್ನಕ್ಕೆ ಅವರ ಮಕ್ಕಳ ಲಗ್ನಕ್ಕೆ ನಮ್ಮನ್ನು ಆಹ್ವಾನಿಸುವುದಿಲ್ಲ ಹೀಗಾದರೆ ಹೇಗೆ ಎಂದು ಕೆಲವರು ಕೇಳುತ್ತಿದ್ದರೆ ಮತ್ತೆ ಕೆಲವರ ಪ್ರಶ್ನೆಯೆಂದರೆ ಅಣ್ಣ—ತಮ್ಮಂದಿರ ಲಗ್ನಕ್ಕೆ ಅವರ ಮಕ್ಕಳ ಲಗ್ನಕ್ಕೆ **ಕಳಸಗಿತ್ತಿಯೆಂದು** ಕರೆಯಲೊಲ್ಲರು. ಒಬ್ಬಳೇ ತಂಗಿಯಾದ ನನ್ನನ್ನು ಆಹ್ವಾನಿಸಿಲ್ಲ. ನಾನು ಆಸ್ತಿಪಾಲು ಪಡೆದ ಕಾರಣ ಎಂದು ಖಿನ್ನ ಮನಸ್ಸಿನಿಂದ ವಿಚಾರಿಸುತ್ತಾರೆ. ಇನ್ನು ಕೆಲವರು ತಮಗೆ ತೌರಮನೆ ಸಂಬಂಧ ಬಂದಾಗಿದೆ ಎಂದು ಚಿಂತಿಸುತ್ತಾರೆ.

ಮಹಿಳೆಯರಿಗೆ ಆಸ್ತಿಯಲ್ಲಿ ಸಮಪಾಲು ಎಂಬ ಕಾಯಿದೆ ಬಂದದ್ದರಿಂದ ಮೊದಲೇ ದಾಯಾದಿ-ಭಾಗಾದಿಗಳ ಜಗಳ ಇರುವಾಗ ಸಹೋದರ-ಸಹೋದರಿಯರ ನಡುವಿನ ಜಗಳ ಹೆಚ್ಚಾಗಿ ಕೌಟುಂಬಿಕ ಶಾಂತಿ ಮತ್ತಷ್ಟು ಕದಡುವುದರಿಂದ ಪ್ರಶ್ನೆ-ಸಮಸ್ಯೆಗಳು ಹೆಚ್ಚಾಗಿವೆ ಆದರೆ ಎಲ್ಲ ಜಾತಕದವರಿಗೆ ಈ ಮಾತು ಅನ್ವಯಿಸುವುದಿಲ್ಲ. ಆದುದರಿಂದ ಯಾವ ಜಾತಕನಿಗೆ ಸಹೋದರ ಸಹೋದರಿಯರ ಪ್ರಶ್ನೆ ಹೆಚ್ಚಾಗಿರುತ್ತವೆ ಯಾರಿಗೆ ಇರುವುದಿಲ್ಲ ಎಂಬುದನ್ನು ಪರಿಶೀಲಿಸುವಾ.

**1) ಸಹೋದರ-ಸಹೋದರಿಯರ ಸೌಖ್ಯ ಕೊಡುವ ಪೋಷಕ ಕಾರಕ ಸ್ಥಾನಗಳು:** ಜಾತಕನ ತೃತೀಯಸ್ಥಾನದಿಂದ ಸಹೋದರ-ಸಹೋದರಿಯರ

ಸೌಖ್ಯದ ವಿಷಯವಾಗಿ ತಿಳಿಯತ್ತದೆಯೇನೋ ನಿಜ ಆದರೆ ಸಹೋದರ-ಸಹೋದರೀಯರೆಂದರೆ ಕೇವಲ ಒಡ ಹುಟ್ಟಿದವರೆಂದು ಅರ್ಥಮಾಡದೆ ಸ್ವಂತ ಅಣ್ಣ, ತಮ್ಮ ಅಕ್ಕ ತಂಗಿಯರಲ್ಲದೆ ಮಲ ಅಣ್ಣ ತಮ್ಮ ಅಕ್ಕ ತಂಗಿಯರು ಅಲ್ಲದೇ ಚಿಕ್ಕಪ್ಪಾ ದೊಡ್ಡಪ್ಪನವರ ಮಕ್ಕಳು ಹಾಗೂ ಅವರು ತೆಗೆದುಕೊಂಡ ಸಾಕು ಮಕ್ಕಳು ದತ್ತಕ ಮಕ್ಕಳು ಈ ಎಲ್ಲ ಸಹೋದರ-ಸಹೋದರೀಯರ ವಿಷಯವಾಗಿ ತೃತೀಯ ಸ್ಥಾನದ ಕಾರಕ ಸ್ಥಾನವು ಆದುದರಿಂದ ಯಾರ ಜಾತಕದಲ್ಲಿ ತೃತೀಯ ಸ್ಥಾನದಲ್ಲಿ ಬಲಾಢ್ಯಗ್ರಹ ಇದ್ದರೆ ತೃತೀಯೇಶ ಬಲಾಢ್ಯನಿದ್ದ ಜಾತಕನಿಗೆ ಸಹೋದರ-ಸಹೋದರೀಯರ ಸೌಖ್ಯ ಸಿಗುತ್ತದೆ. ಅದೇ ತೃತಿಯದಲ್ಲಿ ದುರ್ಬಲ ನಿರ್ಬಲ ಗ್ರಹವಿದ್ದು, ತೃತೀಯೇಶನು ದುರ್ಬಲ ನಿರ್ಬಲನಿದ್ದರೆ ಸಹೋದರ-ಸಹೋದರೀಯರ ಸೌಖ್ಯ ಸಿಗುವುದಿಲ್ಲ.

2) **ಸಹೋದರ-ಸಹೋದರೀಯರ ಸೌಖ್ಯ ಕೊಡುವ ಕಾರಕ ಪೋಷಕ, ಮಾರಕ ಗ್ರಹಗಳು :—** ಯಾವುದೇ ಗ್ರಹಗಳು ಬಲಾಢ್ಯರಾಗಿ ತೃತೀಯದಲ್ಲಿದ್ದರೆ ಅಥವಾ ತೃತಿಯೇಶರಾಗಿ ಬಲಾಢ್ಯರಿದ್ದರೆ ಇಂಥ ಜಾತಕನಿಗೆ ಸಹೋದರ-ಸಹೋದರೀಯರ ಸೌಖ್ಯಸಿಗುತ್ತದೆ ಆದರೆ ಯಾವುದೆ ಗ್ರಹವು ದುರ್ಬಲ ನಿರ್ಬಲರಾಗಿ ತೃತೀಯದಲ್ಲಿದ್ದರೆ ಅಥವಾ ತೃತಿಯೇಶರಾಗಿ ದುರ್ಬಲ ನಿರ್ಬಲರಿದ್ದರೆ ಸಹೋದರ-ಸಹೋದರೀಯರ ಸೌಖ್ಯಸಿಗುವುದಿಲ್ಲ ತೃತೀಯ ಸ್ಥಾನದಲ್ಲಿ ರವಿ, ಗುರುಗಳು ಬಲಾಢ್ಯರಿದ್ದರೆ ಅಥವಾ ತೃತೀಯೇಶರಾಗಿ ಬಲಾಢ್ಯರಿದ್ದರೆ ಇಂಥ ಜಾತಕನಿಗೆ ಸಹೋದರ ಸಹೋದರೀಯರ ಸೌಖ್ಯವೇನೋಸಿಗುತ್ತದೆ. ಆದರೆ ಇವರಿಗೆ ಮನೆತನದ ಇತರ ಸಹೋದರ ಸಹೋದರೀಯರ ಲಾಲನೆ ಪಾಲನೆ ಪೋಷಣೆಗಳ ಜವಾಬದಾರಿ ಹೊಣೆಗಾರಿಕೆ ಬೀಳುತ್ತದೆ. ಅವರಲ್ಲಿಯೂ ರವಿಯು ತೃತೀಯದಲ್ಲಿ ಬಲಾಢ್ಯನಿದ್ದರೆ ಅಥವಾ ತೃತಿಯೇಶನಾಗಿ ಬಲಾಢ್ಯನಾಗಿದ್ದರೆ ಜೇಷ್ಠ ಪುತ್ರನಿರುವುದೇ ಹೆಚ್ಚು ಹಾಗೂ ಇವರ ದಾದಾಗಿರಿಗೆ ಇತರ ಸಹೋದರ-ಸಹೋದರಿಯರು ಭಯದಿಂದ ಮರ್ಯಾದೆ ಕೊಡುತ್ತಾರೆ. ಆದರೆ ಅದೇ ಗುರು ತೃತೀಯದಲ್ಲಿ ಬಲಾಢ್ಯನಿದ್ದರೆ ಸಹೋದರ-ಸಹೋದರೀಯರು ಭಕ್ತಿಯಿಂದ ಇವರಿಗೆ ಮರ್ಯಾದೆ

ಕೊಡುತ್ತಾರೆ. ಚಂದ್ರ-ಶುಕ್ರಯರ ಬಲಾಢ್ಯರಾಗಿ ತೃತೀಯದಲ್ಲಿದ್ದರೆ ಅಥವಾ ತೃತೀಯೇಶರಾಗಿ ಬಲಾಢ್ಯರಾಗಿದ್ದರೆ ಸಹೋದರ-ಸಹೋದರೀಯರ ಸೌಖ್ಯಸಿಗುತ್ತದೆ. ಇವರ ಬೆನ್ನ ಮೇಲೆ ತಮ್ಮನಿಗಿಂತ ತಂಗಿಯರ ಸಂಖ್ಯೆ ಹಾಗೂ ಸೌಖ್ಯಸಿಗುತ್ತದೆ. ಶನಿ-ರಾಹು ಕೇತುಗಳು ತೃತೀಯದಲ್ಲಿದ್ದರೆ ಸಹೋದರ ಸಹೋದರೀಯರ ಸೌಖ್ಯಸಿಗುವುದಿಲ್ಲ, ಅನೇಕ ಸಂದರ್ಭದಲ್ಲಿ ಕೋರ್ಟಿನ ಕಟ್ಟೆ ಫೌಜದಾರಿ ಮೊಕದ್ದಮೆಗಳನ್ನು ಎದುರಿಸಬೇಕಾಗುತ್ತದೆ, ಆದರೆ ಮಂಗಳನು ಬಲಾಢ್ಯನಾಗಿ ತೃತೀಯದಲ್ಲಿದ್ದರೆ ಅಥವಾ ತೃತೀಯೇಶನಾಗಿ ಬಲಾಢ್ಯನಿದ್ದರೆ ಮಾತ್ರ ಸಹೋದರ-ಸಹೋದರಿಯರ ಸೌಖ್ಯಸಿಗುತ್ತದೆ. ಆದರೆ ಅದೇ ಮಂಗಳನು ದುರ್ಬಲ ನಿರ್ಬಲನಾಗಿ ತೃತೀಯದಲ್ಲಿದ್ದರೆ ಹಾನಿ ಕಾರಕನು. ಒಟ್ಟಿನಲ್ಲಿ ಗುರು, ಶುಕ್ರ, ಚಂದ್ರರು ತೃತೀಯದಲ್ಲಿ ಬಲಾಢ್ಯರಾಗಿದ್ದರೆ ಅಥವಾ ತೃತೀಯೇಶರಾಗಿ ಬಲಾಢ್ಯರಿದ್ದರೆ ಸಹೋದರ ಸಹೋದರಿಯರ ಸೌಖ್ಯ ಸಾಕಷ್ಟುಸಿಗುತ್ತದೆ. ಶನಿ-ಮಂಗಳ, ರಾಹು, ಕೇತುಗಳು ತೃತೀಯದಲ್ಲಿದ್ದರೆ ಸೌಖ್ಯಸಿಗುವುದಿಲ್ಲ. ರವಿ, ಬುಧರು ಮಿಶ್ರ ಫಲದಾಯಕರು ಅಂದರೆ. ಸ್ಥಾನಾಧೀಶರಾಗಿ ಬಲಾಢ್ಯರಿದ್ದರೆ ಮಾತ್ರ ಸೌಖ್ಯಸಿಗುತ್ತದೆ ಆದರೆ ಇವರು ಗುರು. ಚಂದ್ರ, ಶುಕ್ರರಂತೆ ಸೌಖ್ಯವೂ ಇಲ್ಲ. ಶನಿ, ಮಂಗಳ ರಾಹು ಕೇತುಗಳಂತೆ ವೈರತ್ವವೂ ಇಲ್ಲ.

**ಯೋಗಗಳಗಳ ವಿಚಾರ :** – 1) ಶನಿ-ಮಂಗಳ-ಶನಿ, ರವಿ, ಶನಿ-ಚಂದ್ರ, ಚಂದ್ರ-ರಾಹು ಇವರ ಯುತಿಯೋಗ ಪ್ರತಿಯೋಗವು ಲಗ್ನ, ತೃತೀಯ ಚತುರ್ಥ, ಭಾಗ್ಯದಲ್ಲಿ ಇದ್ದರೆ ಸಹೋದರ-ಸಹೋದರೀಯರು ವೈರಿಗಳಂತೆ ವರ್ತಿಸುವರು ವೈರಿಗಳಂತೆ ತೊಂದರೆ ಕೊಡುವರು.

2) ಗುರು-ಚಂದ್ರ, ಶುಕ್ರ-ಚಂದ್ರ, ಗುರು-ಶುಕ್ರರ ಯುತಿಯೋಗ ಪ್ರತಿಯೋಗವು ಲಗ್ನ, ತೃತೀಯ, ಚತುರ್ಥ, ಭಾಗ್ಯ, ಪಂಚಮದಲ್ಲಿದ್ದರೆ ಸಹೋದರ-ಸಹೋದರಿಯರ ಸೌಖ್ಯಸಿಗುತ್ತದೆ.

3) ಮಂಗಳ, ಚಂದ್ರ, ರವಿ ಇದರಲ್ಲಿ ಯಾರೊಬ್ಬರು ತೃತೀಯದಲ್ಲಿದ್ದು ಶನಿಯು ಲಗ್ನ, ತೃತೀಯ, ಷಷ್ಠ, ಭಾಗ್ಯದಲ್ಲಿದ್ದ ಜಾತಕನಿಗೆ ಸಹೋದರ-ಸಹೋದರೀಯ ರಿಂದ ಹಾನಿಯಾಗುತ್ತದೆ.

4) ಗುರು, ಶುಕ್ರ, ಚಂದ್ರ ತೃತೀಯೇಶ ಬಲಾಢ್ಯರಿದ್ದು, ತೃತಿಯದಲ್ಲಿ ಬಲಾಢ್ಯ ಗ್ರಹವಿದ್ದರೆ ಸಹೋದರ-ಸಹೋದರೀಯ ಸೌಖ್ಯ ಸಂಪೂರ್ಣ ಸಿಗುತ್ತದೆ.

5) ಬಲಾಢ್ಯರಾದ ಗುರು, ಚಂದ್ರ, ಶುಕ್ರ, ತೃತಿಯೇಶ ಈ ನಾಲ್ಕರಲ್ಲಿ ಯಾವುದೇ ಮೂರು ಸಂಗತಿಗಳು ಕನಿಷ್ಟ ಎರಡು ಸಂಗತಿಗಳು ಪೂರಕವಿದ್ದರೂ ಕೂಡ ಸಹೋದರ-ಸಹೋದರೀಯರ ಸೌಖ್ಯ ಸಿಗುತ್ತದೆ.

ಹೀಗೆ ಸಹೋದರ-ಸಹೋದರೀಯರ ಸೌಖ್ಯ ಅಸೌಖ್ಯದ ವಿಷಯವಾಗಿ ಪೋಷಕ ಸ್ಥಾನ ಗ್ರಹ ಯೋಗಗಳ ವಿಷಯವಾಗಿ ಸಂಕ್ಷಿಪ್ತದಲ್ಲಿ ವಿವರಿಸಿದ್ದಾಯಿತು. ಇವುಗಳ ಹೆಚ್ಚಿನ ವಿವರಣೆ ನಾವು ಬರೆದು ಪ್ರಕಟಿಸಿದ **ಸ್ತ್ರೀ ಜ್ಯೋತಿಷ್ಯ ಗ್ರಂಥದ** 62 ನೇ ಪುಟದಿಂದ 73 ನೇ ಪುಟದ ವರೆಗೆ ಹಾಗೂ **ಕುಂಡಲೀ ಗಣ ನಿರ್ಣಯ ಗ್ರಂಥದ** 82 ನೇ ಪುಟದಿಂದ 91 ನೇ ಪುಟದ ವರೆಗೆ ವಿವರಿಸಿದ್ದಾ**ಗಿದೆ.** ಇನ್ನು ಸಹೋದರ-ಸಹೋದರೀಯರ ವಿಷಯವಾಗಿ ಯಾವ ಯಾವ ಮುಂಜಾಗ್ರತೆ ಹಾಗೂ ಪರಿಹಾರ ಕ್ರಮಗಳನ್ನು ಕೈಕೊಳ್ಳ ಬೇಕೆಂಬುದನ್ನು ಪರಿಶೀಲಿಸುವಾ.

**ಮುಂಜಾಗ್ರತೆ ಕ್ರಮಗಳು :–** ಯಾರ ಜಾತಕದಲ್ಲಿ ಸಹೋದರ-ಸಹೋದರೀಯರ ಸೌಖ್ಯವಿದೆಯೋ ಅವರು ಯಾವ ಮುಂಜಾಗ್ರತೆ ಕ್ರಮ ಕೈಕೊಳ್ಳುವ ಅವಶ್ಯಕತೆ ಇಲ್ಲ ಆದರೆ ಯಾರ ಜಾತಕದಲ್ಲಿ ಇವರ ಅಭಾವವಿದೆಯೋ ಅವರು ಅದಕ್ಕೆ ಅವರು ಈ ಕೆಳಗೆ ಬರೆದ ಮುಂಜಾಗ್ರತೆ ಕ್ರಮಗಳನ್ನು ಕೈಕೋಳ್ಳಬೇಕು.

1) ಸಾಮಾನ್ಯವಾಗಿ ಸಹೋದರ-ಸಹೋದರಿಯರ ಅಸಹಕಾರ ವ್ಯಾಪ್ಯಗಳು ಉಂಟಾಗುವುದು ಗುರು ಶನಿ, ಮಂಗಳ, ರಾಹುಗಳು ಗೋಚರಿಯಿಂದ ಅಶುಭರಾಗಿ ಬಂದಾಗ ಹಾಗೂ ಜಾತಕದಲ್ಲಿ ದುರ್ಬಲ, ನಿರ್ಬಲಗ್ರಹಗಳ ಮಹಾದರ್ಶೆ ಅಂತರದರ್ಶೆ ನಡೆದಾಗ ಮತ್ತು ತೃತೀಯ ಸ್ಥಾನದಲ್ಲಿ

ದುರ್ಬಲ ನಿರ್ಬಲ ಗ್ರಹಗಳಿದ್ದು ಹಾಗೂ ತೃತೀಯೇಶ ದುರ್ಬಲ ನಿರ್ಬಲನಿದ್ದು ಅವರ ಮಹರ್ದಶೆ ಅಂತರ್ದಶೆ ಪಡೆಯುವ ಸಮಯದಲ್ಲಿ ಮಾತ್ರ ಈ ಅಶುಭ ಘಟನೆಗಳು ನಡೆಯುವವು. ಆಕಾಲದಲ್ಲಿ ತಾಳ್ಮೆ, ಸಹನಶೀಲತೆ, ಉದಾಸೀನತೆ,ಮನೋಭಾವನೆಯಿಂದ ವರ್ತಿಸುವಲ್ಲಿ ಎಲ್ಲವೂ ಸರಿಯಾಗುತ್ತದೆ.

2) **ಪರಿಹಾರದ ಕ್ರಮಗಳು :—** ಸಹೋದರ-ಸಹೋದರಿಯರ ಅಸಹಕಾರ ಅಸೌಖ್ಯಕ್ಕೆ ಈ ಕೆಳಗಿನಂತೆ ಪರಿಹಾರ ಕ್ರಮಗಳನ್ನು ಕೈಕೊಳ್ಳಬೇಕು 1) ಇದೇ ಗ್ರಂಥದ 10ನೇ ಪುಟದಿಂದ 15ನೇ ಪುಟದ ವರೆಗೆ ವಿವರಿಸಿದಂತೆ **ಮಂಗಳ ಗ್ರಹದ ಜಪ, ಧ್ಯಾನ, ದಾನಾದಿಗಳನ್ನು ಮಾಡಬೇಕು.** 2) ಶ್ರೀರಾಮ ಧ್ಯಾನ, ಜಪ ಮಾಡಬೇಕು. 3) ಅಶ್ವಿನೀ ಕುಮಾರ ಚರಿತ್ರೆ ಓದಬೇಕು. 4) ಭೌಮ ಪ್ರದೋಷ ವ್ರತ ಮಾಡಬೇಕು. 5) ಸಂಕಷ್ಟೀ ವ್ರತ ಅದರಲ್ಲಿಯೂ ಕ್ರಮಗಳನ್ನು ಕೈಕೊಳ್ಳಬೇಕು.

1) ಸಹೋದರ–ಸಹೋದರಿಯರ ಅಸೌಖ್ಯಕ್ಕೆ ಅಸಹಕಾರಕ್ಕೆ ಮುಖ್ಯಕಾರಣವೆಂದರೆ ಆಸ್ತಿ ವಿವಾದ, ಅದರಲ್ಲಿಯೂ ಪಿತ್ರಾರ್ಜಿತ, ಹಾಗೂ ಮಾತಾ–ಪಿತರುಗಳಿಸಿದ ಎಲ್ಲ ಪ್ರಕಾರದ ಆಸ್ತಿಯ ಸಂಬಂಧ ಪಾಲು ಹಾಗೂ ಹಕ್ಕಿನ ವಿಷಯವಾಗಿ ಒಂದು ಕಾರಣವಾದರೆ ಇನ್ನೊಂದು ಕಾರಣವೆಂದರೆ ಯಾರೊಬ್ಬ ಸಹೋದರನ ಜನಪ್ರಿಯತೆ, ಜನಾನುರಾಗ, ಶ್ರೀಮಂತಿಕೆ ಐಶ್ವರ್ಯ ಅಂತಸ್ತು ಸೌಲಭ್ಯ ಸೌಕರ್ಯ ಇನ್ನೊಬ್ಬರಿಗೆ ಇಲ್ಲದಿರುವಾಗ ಅಸೂಯೆ ಅಸಹನೆ ಮತ್ಸರ ಮೋಸಕೆ ರೂಪತಾಳಿ ಅಲ್ಲಿಂದ ದ್ವೇಷದ ಕಿಡಿ ಹಾರಿ ವಗೆತನ, ವೈರತ್ವವಾಗಿ ಬೆಳೆದು ಜಗಳಾಟ ನಡೆದು ಕೋರ್ಟಿನ ಕಟ್ಟೆ ಹತ್ತುವುದರಿಂದ ಫೌಜದಾರಿ ಮೊಕ್ಕದಮೆಗಳನ್ನು ಎದುರಿಸುವ ಮೂಲಕ ಶಾರೀರಿಕ ಮಾನಸಿಕ ಧನಕಾಸಿನ ತೊಂದರೆ ಎದುರಿಸಬೇಕಾಗುತ್ತದೆ. ಅದುದರಿಂದ ಈ ತೊಂದರೆ ನಿವಾರಣೆಗಾಗಿ ಎರಡು ರೀತಿಯ ಮುಂಜಾಗ್ರತೆ ಕ್ರಮಗಳನ್ನು ಅನುಸರಿಸಬೇಕು 1) ಪಿತ್ರಾರ್ಜಿತ ಆಸ್ತಿ ಇರಲಿ, ಪಿತ್ರು ಆಸ್ತಿ ಇರಲಿ, ಕಾಯದೇ ಅನುಸಾರ ವ್ಯವಹಾರ ಅನುಸಾರ ನೈತಿಕ ಅನುಸಾರ ನಡೆಯುಬೇಕು. 2) ಮತ್ಸರ ಭಾವನೆಯಿಂದ ವರ್ತಿಸದೆ

ಸಹೋದರರೊಂದಿಗೆ ತಾಳ್ಮೆ ಸಹನಶೀಲತೆ ಉದಾಸೀನ ಮನೋಭಾವದಿಂದ ವರ್ತಿಸಬೇಕು. ಅಂಗಾರಿಕಾ ಸಂಕಷ್ಟೀ ವ್ರತ ಮಾಡಬೇಕು. 3) ಶ್ರೀದುರ್ಗಾ ಸ್ತೋತ್ರ ಅಥವಾ ಯಾವುದೇ ಸ್ತ್ರೀದೇವತೆಯ ಧ್ಯಾನ ಜಪ ಮಾಡಬೇಕು ವಿಶೇಷವಾಗಿ ಶಕ್ತಿ ಆರಾಧನೆ ಮಾಡಬೇಕು (4) ಶ್ರೀಶಿವಅಪಾಮಾರ್ಜನ ಸ್ತೋತ್ರ, ಶ್ರೀನರಸಿಂಹಸ್ವಾಮಿ ಸ್ತೋತ್ರ, ಶ್ರೀದತ್ತಾತ್ರೇಯ ಸ್ತೋತ್ರ ಹನುಮಾನ ಚಾಲೀಸ ಪಠಿಸಬೇಕು (5) ಸುದರ್ಶನ ಹೋಮ ಇಲ್ಲವೇ ಪವಮಾನ ಹೋಮ ಮಾಡಬೇಕು, ಈ ಐದರಲ್ಲಿ ಯಾವುದೇ ಒಂದನ್ನು ಆಚರಿಸಿದಲ್ಲಿ ಸಹೋದರ ಸಹೋದರಿಯರ ಸೌಖ್ಯಸಿಗುತ್ತದೆ.



# ದಶಮದಳ

## ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ - ಪರಿಹಾರ

ಮನುಷ್ಯನನ್ನು ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಪ್ರಾಣಿ ಎಂದೆ ಸಮಾಜಿಕ ವಿಜ್ಞಾನಗಳಲ್ಲಿ ಉಲ್ಲೇಖ ಮಾಡುವುದುಂಟು. ಮನುಷ್ಯನನ್ನು ಅರ್ಥಮಾಡಿಕೊಳ್ಳಲು ಈಗ ಅವನ ಸಾಮಾಜಿಕ ರಾಜಕೀಯ, ಸಾಂಸ್ಕೃತಿಕ ಪರಿಸರವನ್ನು ಅರಿತುಕೊಳ್ಳಬೇಕು. ಮನುಷ್ಯನ ಸಮಗ್ರ ಅಧ್ಯಯನವಾಗ ಬೇಕಾದರೆ ಅವನ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ಸ್ಥಿತಿ–ಗತಿಯ ವಿಶ್ಲೇಷಣೆ ಆಗಬೇಕು. ಅಂತೆಯೇ ಪರಿಹಾರ ಜ್ಯೋತಿಷ್ಯ ಕೃತಿಯ (ದಶಮ ದಳದ) ಹತ್ತನೇ ಈ ಅಧ್ಯಾಯದಲ್ಲಿ ಸಾಮಾಜಿಕ ಸಾಂಸ್ಕೃತಿಕ ರಾಜಕೀಯ ಪರಿಹಾರ ಎಂಬ ಶೀರ್ಷಿಕೆಯ ಅಡಿಯಲ್ಲಿ ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಏಕೆಂದರೆ ಇದೊಂದೇ ವಿಷಯದ ಮೇಲೆ 200–300 ಪುಟಗಳಷ್ಟು ವಿವರಿಸುವಷ್ಟು ಈ ವಿಷಯದ ವ್ಯಾಪ್ತಿ ಇದೆ. ಇದೂ ಅಲ್ಲದೆ ಈ ವಿಷಯಗಳಿಗೆ ಸಂಬಂಧಿಸಿದ ಪ್ರಶ್ನೆ, ಸಮಸ್ಯೆಗಳು ಈ ಹಿಂದಿನಗಿಂತಲೂ ಈಗ ಹೆಚ್ಚಾಗಿವೆ. ಉದಾಹರಣೆಗಳಿಗಾಗಿ ಕೆಲ ಪ್ರಶ್ನೆ ಸಮಸ್ಯೆಗಳನ್ನು ಓದಿದಲ್ಲಿ ಈ ವಿಷಯಗಳ ವ್ಯಾಪ್ತಿಯ ಬಗೆಗೆ ಗೊತ್ತಾಗುತ್ತದೆ. ಸಾಮಾಜಿಕ, ರಾಜಕೀಯ, ಸಾಂಸ್ಕೃತಿ ಪ್ರಶ್ನೆ ಸಮಸ್ಯೆ ಪ್ರಮುಖವಾಗಿ ಎರಡು ವಿವಿಧ

(1) ವಿವಿಧ ಸಂಘ,ಸಂಸ್ಥೆಗಳ ಸದಸ್ಯ, ಅಧ್ಯಕ್ಷ. ಚೇರ್‌ಮನ್ ಕಾರ್ಯದರ್ಶಿ ಕೌನ್ಸಿಲರ, ಕಾರ್ಪೋರೇಟರ, ಮೇಯರ. ಪ್ರಧಾನ ಮಂಡಳ, ಸಂಸತ್ತಿನ ಸದಸ್ಯರು. ವಿವಿಧ ನಿಗಮಗಳ ಬೋರ್ಡ. ಮಂಡಳ,ಅಕಡೆಮಿ,ಸದಸ್ಯರು ಅಧ್ಯಕ್ಷರು ಚೇರಮನ್ ಸಚಿವ ರಾಜಪಾಲ ರಾಯಭಾರಿ ಮೊದಲಾದ ಸಾಮಾಜಿಕ ರಾಜಕೀಯ ಸಾಂಸ್ಕೃತಿಯ ಸಂಸ್ಥೆಗಳ ಗೌರವಾನ್ವಿತ ಸ್ಥಾನ ಮಾನ ಅಧಿಕಾರ

ಪಡೆಯುವ ಸಂಬಂಧಿಸಿದ ಒಂದು ಬಗೆಯ ಪ್ರಶ್ನೆ (2) ವಿವಿಧ ಬಿರುದು-ಬಾವಲಿ ಪ್ರಶಸ್ತಿ-ಪದಕ-ಗೌರವ-ಸಂಭಾವನೆ ಮಾಶಾಸನಗಳನ್ನು ಪಡೆಯುವ ಬಗೆಗಿನದು ಎರಡನೇ ಬಗೆಯ ಪ್ರಶ್ನೆಗಳು. ಈ ಎರಡು ಪ್ರಕಾರದ ಪ್ರಶ್ನೆಗಳಿಗೆ ಹಲವು ಉಪ ಪ್ರಶ್ನೆಗಳಿರುತ್ತವೆ. ವಿವಿಧ ಸಂಘ ಸಂಸ್ಥೆಗಳ ಸದಸ್ಯ, ಅಧ್ಯಕ್ಷ ಚೇರ್‌ಮನ್ ಮೊದಲಾದ ಗೌರವ ಸ್ಥಾನ ಪಡೆಯಲು ಎರಡು ವಿಧಾನಗಳಿವೆ. ಮೊದಲನೇದಾಗಿ ಚುನಾವಣೆಯ ಮೂಲಕ ಎರಡನೇದಾಗಿ ಸರಕಾರದಿಂದ ನಾಮಕರಣವಾಗುವಿಕೆ ಚುನಾವಣೆಗಳು ಪ್ರಜಾಪ್ರಭುತ್ವ ಪದ್ಧತಿಗಳಲ್ಲಿ ಅತ್ಯಂತ ಮಹತ್ವದ ಅಂಗಗಳಾಗಿವೆ. ಹಳ್ಳಿಯಿಂದ ದಿಲ್ಲಿಯವರೆಗೆ ಗ್ರಾಮಪಂಚಾಯಿತಿಯಿಂದ ಪಾರ್ಲಿಮೆಂಟವರೆಗಿನ ಎಲ್ಲ ಆಡಳಿತಗಳಿಗೂ ಚುನಾವಣೆಯೇ ಮೂಲಾಧಾರವಾಗಿರುತ್ತದೆ. ಈ ಚುನಾವಣೆಗಳಲ್ಲಿಯೂ ಅನೇಕ ಪ್ರಕಾರಗಳಿವೆ ಪ್ರತ್ಯಕ್ಷ ಅಪ್ರತ್ಯಕ್ಷ ವಿಧಾನ ಒಂದಾದರೆ ರಾಜಕೀಯ ಚುನಾವಣೆಗಳು ಸ್ಥಾನಿಕ ಹಾಗೂ ಸಹಕಾರಿ ಸಂಸ್ಥೆಗಳ ಚುನಾವಣೆಗಳು, ಶೈಕ್ಷಣಿಕ ಸಂಘ ಸಂಸ್ಥೆಗಳ, ಸಂಸ್ಕೃತಿಕ, ಸಾಹಿತ್ತಿಕ, ಧಾರ್ಮಿಕ, ವೃತ್ತಿ, ಸೇವಾ ಸಂಸ್ಥೆಗಳ ಕಾರ್ಮಿಕ ಸಂಘಗಳ, ನೌಕರ ಸಂಘಗಳ ಅಧಿಕಾರಿ ವರ್ಗದವರ ಹೀಗೆ ಅನೇಕ ಚುನಾವಣೆಗಳಿರುತ್ತವೆ.

ಮೇಲೆ ಬರೆದ ವಿವಿಧ ಸಂಘ ಸಂಸ್ಥೆಗಳ ಚುನಾವಣೆಯಲ್ಲಿ ಸ್ಪರ್ಧಿಸಿ ಆಯ್ಕೆಯಾಗಿ ಸ್ಥಾನ, ಮಾನ ಅಧಿಕಾರ ಪಡೆಯಲು ಸಂಬಂಧಿಸಿದ ಪ್ರಶ್ನೆಗಳನ್ನು ಅನೇಕರು ಕೇಳುತ್ತಾರೆ ಮತ್ತೆ ಕೆಲವರು ಸರಕಾರದಿಂದ ನಾಮಕರಣವಾಗಿ ವಿವಿಧ ಸಂಘ ಸಂಸ್ಥೆಗಳ ಸದಸ್ಯರಾಗಿಯೂ ಪದಾಧಿಕಾರಿಗಳಾಗಿಯೂ ಅಧ್ಯಕ್ಷ ಚೇರ್‌ಮನ್ ಕೌನ್ಸಿಲ ಸದಸ್ಯರಾಗಿ ಸ್ಥಾನ ಮಾನ ಅಧಿಕಾರ ಪಡೆಯಬಹುದೋ? ಹೇಗೆ? ಎಂದು ವಿಚಾರಿಸುತ್ತಾರೆ. ಇನ್ನು ಕೆಲವರು ಈಗಾಗಲೇ 1-2 ಅವಧಿಯವರೆಗೆ ಗೌರವಾನ್ವಿತ ಸ್ಥಾನ ಪಡೆದವರು ಮತ್ತೆ ಅದೇ ಸ್ಥಾನ ಸಿಗುವುದೋ ಹೇಗೆ ಎಂದು ಪ್ರಶ್ನಿಸುತ್ತಾರೆ.

2) ಎರಡನೇದಾಗಿ ವಿವಿಧ ಬಿರುದು ಬಾವಲಿ ಪ್ರಶಸ್ತಿ ಪದಕ ಗೌರವ ಸಂಭಾವನೆಯ ಪ್ರಶ್ನೆ ಇರುತ್ತವೆ. ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟಿಶ್ ಸರಕಾರವು ತನಗೆ ನಿಷ್ಠರಾದ ನೌಕರವರ್ಗದವರಿಗೆ ಜಮೀನ

ದಾರರಿಗೆ ಬುದ್ಧಿಜೀವಿಗಳಿಗೆ ಕಲಾವಿದರಿಗೆ ಸರ್, ರಾವಸಾಹೇಬ, ರಾವಬಹಾದ್ದೂರ, ದಿವಾಣ ಬಹದ್ದೂರ ಮೊದಲಾದ ಬಿರುದು ಬಾವಲಿ ಪ್ರಶಸ್ತಿ ಪದಕಗಳನ್ನು ಕೊಟ್ಟು ಸನ್ಮಾನಿಸುವ ಪರಿಪಾಠವಿತ್ತು. ಆದರೆ ಸ್ವತಂತ್ರ ನಂತರ ನಮ್ಮ ಸರಕಾರವು ಪ್ರಶಸ್ತಿ, ಪದಕ ಬಿರಿದಾವಳಿಗಳನ್ನು ಕೊಡುವ ಪದ್ಧತಿ ಮುಂದುವರಿಸಿದರೂ ಹೆಸರಿನಲ್ಲಿ ಬದಲಾವಣೆ ಮಾಡಿದರು. ಪದ್ಮಶ್ರೀ ಪದ್ಮಭೂಷಣ, ಪದ್ಮವಿಭೂಷಣ ಮೊದಲಾದವು ಇದರಂತೆ. ಅನೇಕ ರಾಜ್ಯ ಸರಕಾರಗಳು ಕೂಡ ತಮ್ಮದೇ ಆದ ಪ್ರಶಸ್ತಿ ಪದಕ ಗೌರವ ಸಂಭಾವನೆ ಮಾಶಾಸನಗಳನ್ನು ರಾಜಕೀಯ ಸಮಾಜಿಕ ಶೈಕ್ಷಣಿಕ ಧಾರ್ಮಿಕ ಕ್ರೀಡೆ ಮೊದಲಾದ ವಿವಿಧ ಕ್ಷೇತ್ರಗಳಲ್ಲಿ ಪ್ರತಿಭಾವಂತರನ್ನು ಗಣ್ಯರನ್ನು ಗುರುತಿಸಿ ಅವರಿಗೆ ಪ್ರಶಸ್ತಿ ಪದಕ ಗೌರವ ಸಂಭಾವನೆ ಮಾಶಾಸನಗಳನ್ನು ದಯಪಾಲಿಸುವ ಪರಿಪಾಠ ಪ್ರಾರಂಭಿಸಿವೆ. ತನ್ಮೂಲಕ ಈ ಕ್ಷೇತ್ರದಲ್ಲಿಯು ಪ್ರಶ್ನೆ ಸಮಸ್ಯೆಗಳು ಬರಹತ್ತಿವೆ. ಅವುಗಳಿಗೆ ವೃತ್ತಿ ಜ್ಯೋತಿಷ್ಯಗಳು ಉತ್ತರಿಸಬೇಕಾಗುತ್ತದೆ, ಕೆಲ ಜಾತಕರು ತಮಗೆ ಯಾವ ಪ್ರಶಸ್ತಿ ಸಿಗುತ್ತದೆ ? ಎಂದು ವಿಚಾರಿಸಿದರೆ ಮತ್ತೆ ಕೆಲ ವಿಶಿಷ್ಟ ಕ್ಷೇತ್ರದಲ್ಲಿದ್ದ ಪ್ರತಿಭಾವಂತರು ತಮಗೆ ಈ ವರೆಗೆ ಪ್ರಶಸ್ತಿ ಸಕ್ಕದೆ ಯಾವ ಪ್ರತಿಭೆ ಇಲ್ಲದ ವ್ಯಕ್ತಿಗಳಿಗೆ ಸಿಗಹತ್ತಿವೆ ತಮಗೆ ಎಂದು ಸಿಗುತ್ತವೆ? ಅಥವಾ ಇಲ್ಲವೋ? ಎಂದು ನೋವಿನಿಂದ ವಿಚಾರಿಸುತ್ತಾರೆ. ಇನ್ನು ಕೆಲವರು ಪ್ರಶಸ್ತಿ ಪದಕ ಮಾಶಾಸನ ಪಡೆಯಲು ಪ್ರಯತ್ನಿಸಬೇಕಾದ ವಿಧಿ ವಿಧಾನದ ಬಗೆಗೆ ಪ್ರಶ್ನಿಸುತ್ತಾರೆ.

ಹೀಗೆ ವಿವಿಧ ಪ್ರಶಸ್ತಿ ಪದಕ ಗೌರವ ಸಂಭಾವನೆ, ಮಾಸಾಶನಗಳ ಬಗೆಗೂ ವಿವಿಧ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಗೌರವ ಸ್ಥಾನ-ಮಾನ ಅಧಿಕಾರ ಹುದ್ದೆಗಳ ಬಗೆಗು ವೃತ್ತಿ ಜ್ಯೋತಿಷಗಳು ಉತ್ತರಿಸ ಬೇಕಾಗುತ್ತದೆ. ಆದುದರಿಂದ ಇಂಥ ಪ್ರಶ್ನೆ — ಸಮಸ್ಯೆಗಳಿಗೆ ಹೇಗೆ ಉತ್ತರಿಸಬೇಕೆಂಬುದನ್ನು ಪರಿಶೀಲಿಸುವಾ :

1) ಪೋಷಕ ಗ್ರಹ :– ರಾಜಕೀಯ, ಸಾಮಾಜಿಕ, ಶೈಕ್ಷಣಿಕ ಸಾಂಸ್ಕೃತಿಕ ಮೊದಲಾದ ವಿವಿಧ ಕ್ಷೇತ್ರಗಳಲ್ಲಿ ಜ್ಞಾನ-ಮಾನ ಅಧಿಕಾರ ಪಡೆಯುವಿಕೆ ಹಾಗೂ

ಪ್ರಶಸ್ತಿ ಪದಕ, ಗೌರವ ಸಂಭಾವನೆ, ಮಾಸಾಶನಗಳನ್ನು ಪಡೆಯಲು ಅನೇಕ ಗ್ರಹ, ಸ್ಥಾನ, ಯೋಗಕಾರಕಗ್ರಹ 'ಲಗ್ನ' ರಾಶ್ಯಾದಿಗಳನ್ನು ಪರಿಶೀಲಿಸ ಬೇಕಾಗುತ್ತದೆ.

1) ಪೋಷಕ ಗ್ರಹ : ಯಾವದೇ ಲಗ್ನದ ಯೋಗಕಾರಕ ಗ್ರಹಗಳು ಬಲಾಢ್ಯರಿರಬೇಕು.

2) ಸೂರ್ಯನ ಬಲಾಬಲವನ್ನು ಪರೀಶೀಲಿಸಬೇಕು.

3) ಲಗ್ನ,ಪಂಚಮ,ಚತುರ್ಥ, ಭಾಗ್ಯ,ದಶಮ ಈ ಸ್ಥಾನಗಳು ಬಲಾಢ್ಯ ವಿರಬೇಕು ಅಂದರೆ ಈ ಸ್ಥಾನದಲ್ಲಿಯ ಗ್ರಹಗಳು ಹಾಗೂ ಈ ಸ್ಥಾನಾಧೀಶರು ಬಲಾಢ್ಯರಿರಬೇಕು.

4) ಗೋಚರಿಯಿಂದ ಗುರುವು 2, 5 7, 9, 11 ನೇಯವನಾಗಿ ಬಂದಾಗ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಗೌರವ ಸ್ಥಾನ ಮಾನ ಅಧಿಕಾರ ಪಡೆಯುವರಲ್ಲದೆ, ಪ್ರಶಸ್ತಿ ಪದಕಗಳನ್ನು ಗೌರವ ಸಂಭಾವನೆಯನ್ನು ಮಾಸಾಶನವನ್ನು ಪಡೆಯುವರು.

5) ಶನಿಯು ಗೋಚರಿಯಿಂದ 3, 6, 10, 11 ನೇಯವನಾಗಿ ಬಂದಾಗ ಕೂಡ ಮೇಲೆ ವಿವರಿಸಿದ ಗೋಚರೀ ಗುರುವಿನ ಫಲಗಳನ್ನೇ ಕೊಡುತ್ತಾನೆ.

6) ಜಾತಕದಲ್ಲಿ ಯಾವಗ್ರಹ ಬಲಾಢ್ಯವಿರುವದೋ ಆ ಗ್ರಹದ ಮಹಾರ್ದಶೆ ಅಂತರರ್ದಶೆಗಳಲ್ಲಿ ರಾಜಕೀಯ ಸಾಮಾಜಿಕ ಸಾಂಸ್ಕೃತಿಕ ಕ್ಷೇತ್ರ ಗಳಲ್ಲಿ ಸ್ಥಾನಮಾನ ಅಧಿಕಾರ ಗೌರವಾನ್ವಿತ ಮುದ್ದೆ ಪಡೆಯುವರಲ್ಲದೆ ಪ್ರಶಸ್ತಿ ಪದಕ ಗೌರವಧನ ಮಾಸಾಶನ ಪಡೆಯುವರು.

ಈ ವರೆಗೆ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಗೌರವ ಸ್ಥಾನಮಾನ, ಮುದ್ದೆ ಪಡೆಯುವ ಹಾಗೂ ಪ್ರಶಸ್ತಿ ಪದಕ ಗೌರವ-ಧನ

ಮಾಸಾಶಾನ ಪಡೆಯುವವರ ಜಾತಕದಲ್ಲಿ ಯೋಗಗಳು ಹೇಗಿರುತ್ತವೆ ಎಂಬು ದನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾಯಿತು. ಈ ಗ್ರಂಥದ ಮುಖ್ಯ ಉದ್ದೇಶ ಮುಂಜಾಗ್ರತೆ ಹಾಗೂ ಪರಿಹಾರ ಕ್ರಮಗಳ ಬಗೆಗೆ ಹೆಚ್ಚು ಒತ್ತು ಕೊಡು ವುದು ಇರುವುದರಿಂದಲೂ ಇದೇ ವಿಷಯದ ಬಗೆಗೆ ನಾವು ಈಗಾಗಲೇ ಬರೆದು ಪ್ರಕಟಿಸಿದ **"ಚುನಾವಣೆ ಜ್ಯೋತಿಷ್ಯ" ಗ್ರಂಥದಲ್ಲಿಯೂ ಉದ್ಯೋಗ ಜ್ಯೋತಿಷ್ಯ ಭಾಗ-II (ವೃತ್ತಿ ಮಾರ್ಗದರ್ಶಿ)** ಗ್ರಂಥಗಳಲ್ಲಿಯೂ, **ಆಕಸ್ಮಿಕ ಧನಯೋಗ** ಗ್ರಂಥಗಳಲ್ಲಿ ವಿವರವಾಗಿ ವಿವರಿಸಲಾಗಿದೆ. ಈ ವಿಷ ಯದ ಮೇಲೆ ಹೆಚ್ಚಿನ ಜ್ಞಾನ ಬಯಸುವವರು ಈ ಮೂರು ಗ್ರಂಥಗಳನ್ನು ಓದಬಹುದು.

**ಮುಂಜಾಗ್ರತಾ ಕ್ರಮಗಳು :—** ಯಾರ ಜಾತಕದಲ್ಲಿ ರಾಜಕೀಯ ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಸ್ಥಾನಮಾನ ಅಧಿಕಾರ ಗೌರವಾನ್ವಿತ ಹುದ್ದೆ ಹಾಗೂ ಪ್ರಶಸ್ತಿ-ಪದಕ ಗೌರವ ಸಂಭಾವನೆ ಮಾಸಾಶನ ಮೊದಲಾದ ವುಗಳನ್ನು ಪಡೆಯುವ ಶುಭ ಯೋಗಗಳಿವೆಯೋ ಅವರು ಮುಂಜಾಗ್ರತಾ ಕ್ರಮಗಳನ್ನು ಕೈಕೊಳ್ಳುವ ಅವಶ್ಯಕತೆ ಇಲ್ಲ. ಆದರೆ ಯಾರ ಜಾತಕದಲ್ಲಿ ಈ ಯೋಗಗಳಿಲ್ಲವೋ ಅವರು ಈ ಕೆಳಗೆ ಕಾಣಿಸಿದ ಮುಂಜಾಗ್ರತಾ ಕ್ರಮಗಳನ್ನು ಕೈಕೊಳ್ಳಬೇಕು.

1) ಇವರು ಪ್ರತಿಯೊಂದು ಕೆಲಸವನ್ನು ಬೆನ್ನುಹತ್ತಿ ಪೂರೈಸಿಕೊಳ್ಳ ಬೇಕು.

2) ಗುರು-ಶನಿಯರು ಗೋಚರಿಯಿಂದ ಶುಭರಿದ್ದಾಗ ಮಾತ್ರ ಈ ದಿಶೆಯಲ್ಲಿ ಪ್ರಯತ್ನಿಸಬೇಕು. ಅಶುಭರಿದ್ದಾಗ ಯಾವ ಪ್ರಯತ್ನವನ್ನು ಮಾಡಬಾರದು.

3) ಜಾತಕದಲ್ಲಿ ಯಾವ ಗ್ರಹಗಳು ಬಲಾಢ್ಯರಿರುವರೋ ಆ ಗ್ರಹ ಗಳ ಮಹದರ್ಶೆ ಅಂತರದೆಸೆಯಲ್ಲಿ ಪ್ರಯತ್ನಿಸಬೇಕು. ದುರ್ಬಲ, ನಿರ್ಬಲ ಗ್ರಹಗಳ ದೆಸೆಗಳಲ್ಲಿ ಪ್ರಯತ್ನಿಸಬಾರದು. ಈವರೆಗೆ ಯಾವ ಮುಂಜಾಗ್ರತೆ ಕ್ರಮಗಳನ್ನು ಕೈಕೊಳ್ಳಬೇಕೆಂದು ವಿವರಿಸಿದ್ದಾಯಿತು. ಇನ್ನು ಈ ವಿಷಯ

ಗಳ ತೊಂದರೆ ನಿವಾರಣೆಗಾಗಿ ಕೈಕೊಳ್ಳಬೇಕಾದ ಪರಿಹಾರ ಕ್ರಮಗಳ ಬಗೆಗೆ ಈ ಕೆಳಗಿನಂತೆ ವಿವರಿಸಲಾಗಿದೆ.

1) ರಾಜಕೀಯ, ಸಾಮಾಜಿಕ ಸಂಸ್ಕೃತಿಕ ಕ್ಷೇತ್ರಗಳಲ್ಲಿ ಸ್ಥಾನ ಮಾನ ಅಧಿಕಾರ ಗೌರವಾನ್ವಿತ ಹುದ್ದೆ ಹಾಗೂ ಪ್ರಶಸ್ತಿ ಪದಕ ಗೌರವ ಸಂಭಾವನೆ ಮಾಸಾಶನಗಳನ್ನು ಪಡೆಯಲು ಸೂರ್ಯ ಗಣಪತಿ ಬೃಹಸ್ಪತಿ ಈ ಮೂರು ದೇವತೆಗಳ ಉಪಾಸನೆ ಕೈಕೊಳ್ಳಬೇಕು. ಉಪಾಸನೆಗಳ ಬಗೆಗೆ ಈ ಹಿಂದಿನ ಅಧ್ಯಾಯಗಳಲ್ಲಿ ವಿವರಿಸಲಾಗಿದ್ದು ಅವುಗಳನ್ನು ಉಲ್ಲೇಖಿಸಿದಲ್ಲಿ ಪುನರಾವೃತ್ತಿ ಯಾಗುವದು. ಆದರೂ ಕೆಲವೊಂದು ಉಪಾಸನೆಗಳನ್ನು ಇಲ್ಲಿ ಹೇಳಲಾಗಿದೆ.

1) ಪ್ರತಿನಿತ್ಯ ಗಣಪತಿ ಅಥರ್ವ ಶೀರ್ಷ ಮತ್ತು ಗುರುವಿನ ನಾಮ ಸ್ಮರಣೆ ಮಾಡಬೇಕು.

2) ಆದಿತ್ಯ ಹೃದಯ, ಆದಿತ್ಯ ಕವಚ ಪಠಿಸಬೇಕು ಮತ್ತು ಶ್ರೀ ದತ್ತಾತ್ರೇಯ ನಾಮಸ್ಮರಣೆ ಮಾಡಬೇಕು ಅಥವಾ ಗುರುಚರಿತ್ರೆ ಸಪ್ತಾಹ ಕೈಕೊಳ್ಳಬೇಕು

3) ಸಂಕಷ್ಟಿ ಅಥವಾ ವಿನಾಯಕ ವ್ರತ ಕೈಕೊಳ್ಳಬೇಕು. ಕನಿಷ್ಠ ಅಂಗಾರಿಕ ಸಂಕಷ್ಟಿಯನ್ನಾದರೂ ಆಚರಿಸಬೇಕು.

4) ಇದೇ ಗ್ರಂಥದ ಪುಟ 10 ರಿಂದ 15 ನೇ ಪುಟದವರೆಗೆ ವಿವರಿಸಿದಂತೆ ರವಿ ಮತ್ತು ಗುರುಗಳ ಜಪ ಧ್ಯಾನ–ದಾನಗಳನ್ನು ಮಾಡ ಬೇಕು

ಹೀಗೆ ಮೇಲೆ ಬರೆದ ಯಾವುದೇ ಒಂದು ವ್ರತವನ್ನು ಶ್ರದ್ಧೆಯಿಂದ ಹಾಗೂ ಭಕ್ತಿಯಿಂದ ಆಚರಿಸಿದರೆ ವಿಘ್ನಗಳು ನಿವಾರಣೆಯಾಗುವಲ್ಲಿ ಸಂದೇಹ ವಿಲ್ಲ.

